# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :

ಕೆ. ಶಾಮರಾವ್

**

ಸಹಸಂಪಾದಕ :

ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :

ಸಂಯೋಜನೆ

**

ಚಿತ್ರ ಕಲೆ:

ಎನ್, ನಾಗರಾಜ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI, March 1987


# ಬೆಳಕಿಂಡಿ

ಇತರರ ತಪ್ಪುಗಳನ್ನು – ಅವುಗಳಿಂದ ನಮಗೆ ಲಾಭವಾಗುವುದಿಲ್ಲವೆಂದಾಗ–ನಾವೆತ್ತಿ ಅವರನ್ನು ನಿಂದಿಸತೊಡಗುತ್ತೇವೆ.

– ಅಲೆಕ್ಸಾಂಡರ್ ಡ್ಯೂಮಾ

*

ಜಗತ್ತಿನಲ್ಲಿ ಎಲ್ಲೇ ಹೋದರೂ ವ್ಯಾಪಾರಿಗಳು ಅನುಸರಿಸುವುದು ಒಂದೇ ಧರ್ಮ– ಲಾಭ. – ಹೆನ್ರಿ ಹೈನ್

*

'ಹೊಸದು' ಎಂಬ ಪದ ಈಗ ಹಳೆಯದಾಗಿ ಹೋಗಿದೆ. ಅದಕ್ಕೊಂದು ಹೊಸ ಪದವನ್ನು ಈಗ ಹುಡುಕಬೇಕಿದೆ.

– ಅವಿಚಾರಿ

*

"ಹಿಂದೆ ಹಾಗಾಯಿತು – ಹೀಗಾಯಿತು; ಹೀಗಾಗಿತ್ತು–ಹಾಗಾಗಿತ್ತು, ಈಗ ಹಾಗಾಗುತ್ತಿಲ್ಲ" ಎಂದೆನ್ನುವಾತ ನಿವೃತ್ತನಾಗಲು ಯೋಗ್ಯ. – ಬೆಂಜಮಿನ್ ಡಿಸ್ರೇಲಿ

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

# ಸಹಚಿಂತನ

### ಸ್ಮೃತಿಯಲ್ಲಿ...

ಕಸ್ತೂರಿ ಫೆಬ್ರುವರಿ ೧೯೮೭ರ ಸಂಚಿಕೆಯ ಪುಸ್ತಕ ವಿಭಾಗ "ಸ್ಮೃತಿಯಲ್ಲಿ ಸಿಕ್ಕಷ್ಟು" ಓದಿದೆ. ಮಧುರ ಸ್ಮೃತಿಯನ್ನು ಉಳಿಸಿದವರೂ ಸಂಗ್ರಹಿಸಿ ಜನತೆಗೆ ನೀಡಿದವರೂ ಧನ್ಯರು. ಒಂದೊಂದು ಸ್ಮೃತಿಯೂ ಮನ ಮೆಚ್ಚುವಂತಿವೆ. ಎಡತೊರೆಯಲ್ಲಿ ಹಳೆಯ ರಿಕಾರ್ಡ್ ಫೈಸಲ್ ಮಾಡಿದುದು... "ನಿಮ್ಮ ಜೊತೆಯಲ್ಲಿ ಬಂದು ಬೀಳ್ಕೊಟ್ಟವರು ರೆವಿನ್ಯೂ ಕಮೀಶನರ್ ಸಾಹೇಬರಲ್ಲವೆ?..." ಎಂದು ಕೇಳಿದುದು; ಹರಿಜನ ಹೆಂಗಸು, "ನೆನಪಿದಿಯಾ ಬುದ್ಧೀ-ನಾನವಕ ದಿನಾ ನಿಮ್ಮ ಪಾದ ನೆನೀತೀವಿ. ಸ್ವಾಮಿ ಮೂಡಿದಾಗ ದೀಪ ಮುಟ್ಟಿಸುವಾಗ ನೆನೀತೀವಿ" ಎಂದಾಗ ನಮಗರಿಯದಂತೆ ಕಣ್ಣುಗಳು ತೇವಗೊಳ್ಳುವವು.

ಬೆಂಗಳೂರು —ಮಾಧವರಾವ್ ಮುಧೋಳ

"ಸ್ಮೃತಿಯಲ್ಲಿ ಸಿಕ್ಕಷ್ಟು" ಶ್ರೀ ತೋವಿನಕೆರೆ ಸೀತಾರಾಮ ಜೋಯಿಸರ ನೆನಪುಗಳನ್ನು ೧೯೮೭ರ ಫೆಬ್ರುವರಿ ಕಸ್ತೂರಿಯಲ್ಲಿ ಓದಿದೆ. ದಿ. ನವರತ್ನ ರಾಮರಾಯರ "ಕೆಲವು ನೆನಪುಗಳು" ನೆನಪಿಗೆ ಬಂತು. ಇಂತಹ ಸಾಹಿತ್ಯ ಪ್ರಕಾರ ಕನ್ನಡದಲ್ಲಿ ಬರಲಿ. ಇಂಥವು ಮುಂದೊಂದು ದಿನ ಪುಸ್ತಕ ರೂಪದಲ್ಲಿ ಬಂದಾಗ ಕನ್ನಡಿಗರ ಸಾಹಿತ್ಯ ಕಣಜ ಗಟ್ಟಿಕಾಳುಗಳಿಂದಲೇ ತುಂಬಿ ಸುರಿಯುವಂತಾಗುತ್ತದೆ.

ವಿಟ್ಲ ಪಡ್ನೂರು (ದ. ಕ.) —ಸರವು ರಾಮಭಟ್ಟ

ಲೇಖನವನ್ನು ಸಂಗ್ರಹಿಸುವುದು ನಿಜವಾಗಿಯೂ ಒಂದು ಅತ್ಯುತ್ತಮ ಕಲೆ ಎನ್ನುವುದಕ್ಕೆ ನಿದರ್ಶನವಾದಂತಿದೆ, ರಮೇಶಚಂದ್ರ ಸಂಗ್ರಹಿಸಿದ 'ಸ್ಮೃತಿಯಲ್ಲಿ ಸಿಕ್ಕಷ್ಟು' (ಫೆಬ್ರುವರಿ ೮೭ರ ಸಂಚಿಕೆ). "ಹೇಗಿದ್ದರು ಅಂದಿನ ಜನ?" ಎಂದು ಕೇಳಿದಾಗ ಉತ್ತರಿಸಲು ಇಂತಹ ಕೆಲವು ಸಂಗ್ರಹಗಳೇ ಸಾಕು.

ಬೆಂಗಳೂರು —ಅಶೋಕ ಬುರ್ಲಿ

### ವಿದ್ಯಾರಣ್ಯರ ಮೂಲ

ಫೆಬ್ರುವರಿ ೮೭ರ 'ಕಸ್ತೂರಿ'ಯಲ್ಲಿ 'ನಿಜವಾದ ಧರ್ಮ' ಓದಿದೆ. ಇದು ವಿದ್ಯಾರಣ್ಯರ ಕುರಿತಾಗಿದೆ. ವಿಜಯನಗರ ಆಳ್ವಿಕೆಗೆ ಅಸ್ತಿವಾರ ಹಾಕಿ, ಕರ್ನಾಟಕದ ಸುವರ್ಣ ಯುಗಕ್ಕೆ ನಾಂದಿ ಗೀತೆಯನ್ನು ಹಾಡಿದ ಮಹಾಪುರುಷರೆಂದು ಮಾತ್ರ ಅವರನ್ನು ನಾವು ಬಲ್ಲೆವೇ ಹೊರತು ಅದಕ್ಕಿಂತ ಹೆಚ್ಚಾಗಿ ಅವರ ಕುರಿತು ನಾವು ತಿಳಿದಿಲ್ಲ.

ಗಳಗನಾಥರು ವಿದ್ಯಾರಣ್ಯರ ಕುರಿತು ಅವರು ಬರೆದಿರುವರೆನ್ನಲಾದ 'ಮಾಧವ ಕರುಣಾ ವಿಲಾಸ' ವೆಂಬ ಕಾದಂಬರಿ ನನಗಿನ್ನೂ ಓದಲು ಸಿಕ್ಕಿಲ್ಲ.

ಆದಿ ಶಂಕರಾಚಾರ್ಯರು ಸ್ಥಾಪಿಸಿದ ನಾಲ್ಕು ಮಠಗಳಲ್ಲಿ ಒಂದಾದ ಶೃಂಗೇರಿ ಮಠದ ಸನ್ಯಾಸಿ ಪರಂಪರೆಗೆ ವಿದ್ಯಾರಣ್ಯರು ಸೇರಿದವರೆಂದೂ, ಅವರು ಉತ್ತರ ಕನ್ನಡ ಜಿಲ್ಲೆಯ ಹವ್ಯಕ ಬ್ರಾಹ್ಮಣರೆಂದೂ, ಅವರ ಪೂರ್ವಾಶ್ರಮದ ವಂಶದವರು ಇಂದಿಗೂ ಆ ಜಿಲ್ಲೆಯ ಗುಣವಂತೆಯ ಬಳಿಯಲ್ಲೆಲ್ಲೊ ಇದ್ದಾರೆಂದೂ ಹಿಂದೊಮ್ಮೆ ಉತ್ತರ ಕನ್ನಡದವರೊಬ್ಬರು ಹೇಳಿದ್ದನ್ನು ಕೇಳಿದ್ದೆ.

ಶಂಕರರ ಪರಂಪರೆಯವರೊಬ್ಬರು ಆ ಮಠದಿಂದ ಹೊರಬಂದು ರಾಮಚಂದ್ರಾಪುರ ಮಠವನ್ನು ಸ್ಥಾಪಿಸಿದರಂತೆ.

ಮಂಗಳೂರು —ಬಾ. ನ. ಜೋಶಿ

### ಹೊಳೆದಾಟಿದ ಮೇಲೆ

ಫೆಬ್ರುವರಿ ೮೭ರ ಕಸ್ತೂರಿ ಸಂಚಿಕೆಯಲ್ಲಿ ಶ್ರೀ ಗುರುನಾಥ ಇನಾಮದಾರರವರು ೬೫ರ ಇಳಿ ವಯಸ್ಸಿನ ಕ್ರಾಂತಿವೀರ ಶ್ರೀ ವೆಂಕಣ್ಣ ಮಾಸ್ತರರ ಜೀವನವನ್ನು ಮನಮಿಡಿಯುವಂತೆ ಚಿತ್ರಿಸಿದ್ದಾರೆ.

ವೆಂಕಣ್ಣ ಮಾಸ್ತರರಿಂದ ಸಹಾಯಪಡೆದವರು ಸ್ವಾತಂತ್ರ್ಯನಂತರ ಮಂತ್ರಿಗಳೂ ಆದರು, ಶಾಸಕರೂ ಆದರು. ಆದರೆ ಅವರೆಲ್ಲ ಶ್ರೀ ವೆಂಕಣ್ಣ ಮಾಸ್ತರರನ್ನು ಮರೆತರು. ಗಿಡ ನಡುವವನೊಬ್ಬ; ಫಲ ಭೋಗಿಸುವವ ಮತ್ತೊಬ್ಬ ಅನ್ನುವದಕ್ಕೆ ಶ್ರೀ ವೆಂಕಣ್ಣ ಮಾಸ್ತರರವರ ಜೀವನಚರಿತ್ರೆ ಸಾಕ್ಷಿ.

ಬಮ್ಮನಹಳ್ಳಿ —ಬಿ. ಜಿ. ದೇಶಪಾಂಡೆ

**'ಮೃಗನಯನೆ'**

ಕಸ್ತೂರಿ ಜನವರಿ ಸಂಚಿಕೆಯಲ್ಲಿ ಪ್ರಕಟವಾದ 'ಮೃಗನಯನೆ' ಉತ್ತಮ ಕತೆಯಾಗಿತ್ತು. ಇದೇ ಕತೆಯನ್ನು ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಬೃಹತ್ ಕಾದಂಬರಿಯ ರೂಪದಲ್ಲಿ ಓದಿದ್ದೆ; ಅದರ ಮನಮುಟ್ಟುವ ಕಥಾನಿರೂಪಣೆಯನ್ನು ಮೆಚ್ಚಿದ್ದೆ. ಅದರ ಮೂಲ ಲೇಖಕರು ಯಾರು ಎಂದು ನನಗೀಗ ನೆನಪಿಲ್ಲ. ಅಂದಹಾಗೆ ಮೂಲ ಲೇಖಕರು ಯಾರು? ತಿಳಿಸುವಿರಾ?

ಕುಂದಾಪುರ —ರಮಾ ಕಾರಂತ

**ಭವಿಷ್ಯವಾಣಿ**

ಫೆಬ್ರುವರಿ ೧೯೮೭ರ ಕಸ್ತೂರಿಯಲ್ಲಿ ಪ್ರಕಟವಾದ ಕೆ. ಶಾಂತಾಮಣಿಯವರ ಲೇಖನ "ಭವಿಷ್ಯವಾಣಿ ನಿಜವಾಯಿತು" ಚಂದ್ರನ ಕುರಿತಾಗಿದ್ದು ಚೆನ್ನಾಗಿ ಮೂಡಿ ಬಂದಿದೆ. ಆದರೆ ಲೇಖಕರು ಕೆಲವು ಕಡೆ ವಿಜ್ಞಾನಿಗಳು ಬರೆದ ಪುಸ್ತಕಕ್ಕೆ ಕನ್ನಡಾನುವಾದ ಮಾಡಿದ್ದಲ್ಲಿ ಮೂಲ ಕೃತಿಯ ಹೆಸರನ್ನು ಆವರಣದಲ್ಲಿ ಸೇರಿಸಿದ್ದರೆ ಚೆನ್ನಾಗಿರುತ್ತಿತ್ತು. ಆಸಕ್ತರು ಆ ಪುಸ್ತಕವನ್ನು ಹುಡುಕಿ ತೆಗೆಯುವ ಸಾಧ್ಯತೆ ಇರುತ್ತಿತ್ತೆಂದು ನನ್ನ ಅನಿಸಿಕೆ. ಲೇಖಕರು ಇನ್ನೊಂದು ಕಡೆ ಹೇಳಿದ್ದು . ಇಂದು ವಿಜ್ಞಾನ ಲೇಖಕರು ಅನ್ಯ ಗ್ರಹಗಳಲ್ಲಿ ಜೀವಿ ಇರಬಹುದೆಂದು ಊಹಿಸುತ್ತಿದ್ದಾರೆ. ವಾಸ್ತವಿಕವಾಗಿ ಪ್ರಪಂಚದ ಹಲವು ವಿಜ್ಞಾನಿಗಳು ಇಂದು ಬೇರೆ ಗ್ರಹಗಳಲ್ಲಿ ಅತ್ಯಂತ ಸೂಕ್ಷ್ಮ ಜೀವಿಗಳನ್ನು ಕಂಡುಕೊಳ್ಳುವಲ್ಲಿ ಸತತ ಪ್ರಯತ್ನ ನಡೆಸಿರುತ್ತಾರೆ. ಆದರೆ ಇನ್ನೂ ಅದು ಫಲಪ್ರದವಾಗಿಲ್ಲ.

ಇತ್ತೀಚಿನ ಹ್ಯಾಲಿ ಧೂಮಕೇತುವಿನ ಶಿರದಲ್ಲಿ ಸೂಕ್ಷ್ಮಾಣುಜೀವಿ ಇದ್ದ ಬಗ್ಗೆ ಸಂಶೋಧನೆ ನಡೆಯುತ್ತಿದೆ.

ಬೆಂಗಳೂರು —ಹೇಮಂತ ನಾಯಕ

**ಆಪಾದನೆ?**

ನನ್ನ 'ಖುದೀರಾಮ ಬೋಸ್' ಲೇಖನವನ್ನು ಶ್ರೀ ಪಿ. ಎಸ್. ಕನಮಡಿ ಎನ್ನುವವರು ಕೃತಿ ಚೌರ್ಯ ಎಂದಿದ್ದಾರೆ.

ಈ ಲೇಖನವನ್ನು ನಾನು ಬರೆಯುವುದಕ್ಕೆ ಮುಂಚೆ ಡಿಸೆಂಬರ್ ೧–೧೯೭೪ರ 'ಇಲಸ್ಟ್ರೇಟೆಡ್ ವೀಕ್ಲಿ' ಫೆಬ್ರುವರಿ ೧೯೭೬ರ 'ಸುಬೋಧ' ಹಾಗೂ 'ಜ್ಞಾನಗಂಗೋತ್ರಿ'ಯ ಸಂಪುಟಗಳನ್ನು ಓದಿದೆ. ಇವುಗಳಲ್ಲಿ 'ಇಲಸ್ಟ್ರೇಟೆಡ್ ವೀಕ್ಲಿ'ಯ ಲೇಖನ ಚೆನ್ನಾಗಿದೆ. ಆದರೆ ಇನ್ನೂ ಹೆಚ್ಚು ವಿವರಗಳು ಬೇಕೆನಿಸಿದುವು. ಆ ವಿವರಗಳಿಗಾಗಿ ನಾನು ಬೇರೆ ಬೇರೆ ಮೂಲಗಳನ್ನು ಅವಲಂಬಿಸಿದ್ದರಿಂದ ಅದು ಆಧಾರ ಲೇಖನವಾಯಿತು. ಆದ್ದರಿಂದಲೇ ಲೇಖನದ ಹಸ್ತಪ್ರತಿಯ ಕೊನೆಯಲ್ಲಿ ಆಧಾರ ಎಂದು ಆವರಣದಲ್ಲಿ ಬರೆದಿದ್ದೆ. ಲೇಖನದ ಅಂತ್ಯದಲ್ಲಿ ಈ ಪದ ಪ್ರಕಟವಾಗದಿರುವುದು ನನಗೂ ಆಶ್ಚರ್ಯವುಂಟುಮಾಡಿದೆಯಲ್ಲದೆ ಓದುಗರಲ್ಲಿ ತಪ್ಪು ತಿಳುವಳಿಕೆಗೆ ಎಡೆ ಮಾಡಿಕೊಟ್ಟಿದೆ.

ಬೆಂಗಳೂರು —ಸುರೇಶ ಮೂನ

['ಆಧಾರ' ಎಂಬುದು ಕಣ್ತಪ್ಪಿನಿಂದ ಪ್ರಕಟವಾಗದಿರುವುದಕ್ಕೆ ವಿಷಾದಿಸುತ್ತೇವೆ.

—ಸಂಪಾದಕ]

**ಕೆಲವು ಸಂದೇಹಗಳು**

ಫೆಬ್ರುವರಿ ಸಂಚಿಕೆಯಲ್ಲಿ ಅವಾಬಾಯಿ ವಾಡಿಯಾರ ಕುರಿತು ಲೇಖನವನ್ನು ಓದಿದೆ. ಕೆಲವು ಪ್ರಶ್ನೆಗಳು:

"ಕುಟುಂಬ ಕಲ್ಯಾಣ" ಮತ್ತು "ಶಸ್ತ್ರಚಿಕಿತ್ಸೆ"ಗಳು ಇಂದಿನ ಪ್ರಜಾವೃದ್ಧಿಯನ್ನು ನೋಡಿದರೆ ಅತ್ಯವಶ್ಯಕವೆಂಬುದು ನಿಸ್ಸಂಶಯ.

ಆದರೆ ಒಂದು ಕಾನೂನನ್ನು ಜಾರಿಗೊಳಿಸುವಾಗ ಅದು ದೇಶದಲ್ಲಿರುವ ಸಕಲ ಪ್ರಜೆಗಳಿಗೂ ಅನ್ವಯಿಸುವಂತಿರಬೇಕು. ಹಾಗಿಲ್ಲದ ಪಕ್ಷದಲ್ಲಿ ಅದು ದೇಶದ್ರೋಹವೆಂದೆನಿಸುವುದಲ್ಲವೆ?

ವೆಂಕಟಯ್ಯನಛತ್ರ —ಎಸ್. ಅರವಿಂದಮ್ಮ

---

ಕಳೆದ ಸಂಚಿಕೆಯ ಮುಖಪುಟ ಶ್ರೀಮತಿ ಕವಿತಾ ಜಿ. ಧವಳೆ ಅವರದು. ಮುದ್ರಣ ದೋಷದಿಂದಾಗಿ ಕವಿತಾ ಎಸ್. ಧವಳೆ ಎಂದು ತಪ್ಪಾಗಿ ಅಚ್ಚಾದುದಕ್ಕಾಗಿ ವಿಷಾದಿಸುತ್ತೇವೆ.

—ಸಂಪಾದಕ

---

ಕಸ್ತೂರಿ

ವರ್ಷ : ೩೧ ಮಾರ್ಚ್, ೧೯೮೭ ಸಂಚಿಕೆ : ೭

# ವಿಸ್ಮೃತಿ

ಲೀ ಹತ್ಸೆ

ಸುಂಗ್ ಎಂಬ ಗ್ರಾಮದಲ್ಲಿ ಹುಆತ್ಸೆ ಎಂಬವನೊಬ್ಬನಿದ್ದ. ಮಧ್ಯ ವಯಸ್ಕನಾಗುವ ಹೊತ್ತಿಗೆ ಅವನಲ್ಲಿ ಎಲ್ಲವನ್ನೂ ಮರೆತು ಬಿಡುವ ವಿಚಿತ್ರ ಕಾಯಿಲೆ ಸೇರಿಕೊಂಡಿತು. ಬೆಳಿಗ್ಗೆ ನಡೆದ ಘಟನೆಗಳನ್ನು ರಾತ್ರಿಯೊಳಗಾಗಿ, ರಾತ್ರಿ ನಡೆದ ಘಟನೆಗಳನ್ನು ಬೆಳಗಾಗುವುದರೊಳಗಾಗಿ ಆತ ಮರೆತು ಬಿಡುತ್ತಿದ್ದ. ರಸ್ತೆಗಳಲ್ಲಿ ಹೋಗುವಾಗ ನಡೆಯುವುದನ್ನೇ ಮರೆತು ನಿಂತು ಬಿಟ್ಟರೆ, ಮನೆಯೊಳಗೆ ಕೂಡಲು ಮರೆಯುತ್ತಿದ್ದ. ಹೀಗಾಗಿ ಆತನಿಗೆ ವರ್ತಮಾನದಲ್ಲಿ ಭೂತಕಾಲವನ್ನೂ, ಭವಿಷ್ಯತ್ಕಾಲದಲ್ಲಿ ವರ್ತಮಾನವನ್ನೂ ಮರೆಯುವಂತಾಯಿತು.

ಹುಆತ್ಸೆಯ ಈ ಕಾಯಿಲೆ ಅವನ ಕುಟುಂಬ ದವರೆಲ್ಲರನ್ನೂ ಬಹಳ ಕಳವಳಕ್ಕೀಡುಮಾಡಿತು. ಅವರು ಒಬ್ಬ ಜ್ಯೋತಿಷಿಯ ಮೊರೆ ಹೊಕ್ಕರು. ಆದರೆ ಪರಿಹಾರ ದೊರೆಯಲಿಲ್ಲ. ಮಂತ್ರವಾದಿ ಗಳು, ವೈದ್ಯರು ಈ ವಿಚಿತ್ರ ಕಾಯಿಲೆಯನ್ನು ಗುಣಪಡಿಸುವಲ್ಲಿ ವಿಫಲರಾದರು. ಆಗ ಅದೇ ಊರಿನ ಒಬ್ಬ ಪಂಡಿತ ತಾನು ಹುಆತ್ಸೆಯ ಕಾಯಿಲೆಯನ್ನು ಗುಣಪಡಿಸುವುದಾಗಿ ಹೇಳಿದ. ಈ ಕಾಯಿಲೆಯಿಂದ ಆತ ಗುಣವಾದರೆ ತಮ್ಮ ಕುಟುಂಬದ ಆಸ್ತಿಯಲ್ಲಿ ಅರ್ಧ ಭಾಗವನ್ನು ಪಂಡಿತನಿಗೆ ಕೊಡುವುದಾಗಿ ಹುಆತ್ಸೆಯ ಕುಟುಂಬದವರು ಮಾತು ಕೊಟ್ಟರು.

ಆ ಪಂಡಿತ, "ಇಂಥ ಕಾಯಿಲೆಯನ್ನು ಗುಣ ಪಡಿಸುವುದು, ಜ್ಯೋತಿಷಿಗಳಿಗೆ, ಮಂತ್ರವಾದಿ ಗಳಿಗೆ, ವೈದ್ಯರಿಗೆ ಸಾಧ್ಯವಿಲ್ಲ. ಅವನ ಯೋಚನೆ ಗಳ ದಿಕ್ಕನ್ನು ಬದಲಿಸಲು ನಾನು ಪ್ರಯತ್ನಿಸು ತ್ತೇನೆ. ಅದರಿಂದ ಅವನ ಕಾಯಿಲೆ ಗುಣವಾಗ ಬಹುದು," ಎಂದು ಹೇಳಿ 'ಚಿಕಿತ್ಸೆ' ಪ್ರಾರಂಭಿ ಸಿದ.

ಆತ ಮೊದಲು ಹುಆತ್ಸೆಯನ್ನು ಕೊರೆಯುವ ಚಳಿಯಲ್ಲಿ ನಿಲ್ಲಿಸಿದ. ಚಳಿ ತಡೆಯಲಾರದೆ ಹುಆತ್ಸೆ ಬೆಚ್ಚಗಿನ ಬಟ್ಟೆಗಳನ್ನು ಕೊಡುವಂತೆ ಕೇಳಿಕೊಂಡ. ಉಪವಾಸ ಕೆಡವಿದಾಗ ಹುಆತ್ಸೆ ತನಗೆ ಹೊಟ್ಟೆಗೇನಾದರೂ ಕೊಡಿ ಎಂದು ಬೇಡಿದ. ಅವನನ್ನು ಕತ್ತಲ ಕೋಣೆಯೊಂದರಲ್ಲಿ ಟ್ಟಾಗ, 'ಬೆಳಕು ಬೇಕು,' ಎಂದ. ಕೊನೆಯಲ್ಲಿ ಆ ಪಂಡಿತ ಹುಆತ್ಸೆನನ್ನು ಒಂದು ವಾರ ಕೋಣೆ ಯಲ್ಲಿ ಕೂಡಿ ಹಾಕಿ, ಆ ಸಮಯದಲ್ಲಿ ಅವನು ಅಲ್ಲಿ ಏನು ಮಾಡುತ್ತಿದ್ದ ಎಂಬುದನ್ನು ವಿಚಾರಿ ಸುವ ಗೋಜಿಗೂ ಹೋಗದೆ ಉಳಿದ. ಈ 'ಚಿಕಿತ್ಸೆ' ಪರಿಣಾಮ ಬೀರಿತು. ಬಹು ಕಾಲ ಕಾಡುತ್ತಿದ್ದ ಕಾಯಿಲೆ ಮಾಯವಾಯಿತು.

ಆದರೆ ಹುಆತ್ಸೆಗೆ ತನ್ನ ಕಾಯಿಲೆ, ಚಿಕಿತ್ಸೆ, ಹಾಗೂ ಕಾಯಿಲೆಯಿಂದ ಮುಕ್ತಿ ದೊರೆತ ವಿಚಾರ ಗೊತ್ತಾದಾಗ ಅವನು ಕಿಡಿಕಿಡಿಯಾದ. ತನ್ನ ಹೆಂಡತಿ, ಮಕ್ಕಳನ್ನು ಚೆನ್ನಾಗಿ ಬೈಯ್ದು, ಶಿಕ್ಷಿಸಿದ. ಆ ಪಂಡಿತನನ್ನೂ ಹೊಡೆದು ಮನೆ ಯಿಂದ ಹೊರಹಾಕಿದ. ಆಶ್ಚರ್ಯ ಚಕಿತರಾದ ಗ್ರಾಮದ ಜನರು "ಹೀಗೇಕೆ ಮಾಡಿದಿ?" ಎಂದು ಹುಆತ್ಸೆಯನ್ನು ಪ್ರಶ್ನಿಸಿದಾಗ ಅವನು ಸಿಟ್ಟಿ ನಿಂದ ಹೇಳಿದ, "ನಾನು ಮರೆವು ಎಂಬ ಸಾಗರ ದಲ್ಲಿ ಮುಳುಗಿದ್ದಾಗ ನನಗೆ ಭೂಮಿ—ಸ್ವರ್ಗ ಗಳಿವೆ ಎಂಬುದರ ಅರಿವೇ ಇರಲಿಲ್ಲ. ಆಗ ನಾನು ನಿಶ್ಚಿಂತನಾಗಿದ್ದೆ. ಈಗ ಇವರೆಲ್ಲ ನನ್ನನ್ನು ಎಬ್ಬಿ ಸಿದ್ದರಿಂದ ನನ್ನ ಹಿಂದಿನ ವರ್ಷಗಳ ಯಶಸ್ಸು, ನಿರಾಶೆ, ಸಂತೋಷ, ದುಃಖ, ಪ್ರೀತಿ, ದ್ವೇಷ ಗಳೆಲ್ಲ ನೆನಪಿಗೆ ಬಂದು ನನ್ನನ್ನು ಕಾಡಿಸುತ್ತಿವೆ. ಇವು ಇನ್ನು ಮುಂದೆಯೂ ಇದೇ ರೀತಿ ನನ್ನನ್ನು ಕಾಡುತ್ತವೆ. ಈಗ ನಾನು ಕಳೆದುಕೊಂಡ ಆ ಮರೆವಿನ ಒಂದು ಕ್ಷಣವನ್ನಾದರೂ ಮರಳಿ ಪಡೆಯುವುದು ಸಾಧ್ಯವೆ?" ✡



ಶಾಲೆಯಲ್ಲಿ ಭೂಗೋಳ ಪಾಠ ನಡೆದಿತ್ತು. ಕಿಡಿಗೇಡಿಯೊಬ್ಬ ಯಥಾಪ್ರಕಾರ ಅನ್ಯ ವ್ಯಾಪಾರದಲ್ಲಿ ತೊಡಗಿದ್ದ. ಅವನ ಕಡೆಗೆ ಗಮನ ಹರಿಸಿದ ಅಧ್ಯಾಪಕರು, ಆತ ಪಾಠದ ಕುರಿತು ಲಕ್ಷ್ಯವನ್ನೇಕೆ ಕೊಡುತ್ತಿಲ್ಲ? ಎಂದು ಗುಡುಗಿದರು.

"ತಲೆ ತಿರುಗುತ್ತಿದೆ, ಸರ್."

ಅಧ್ಯಾಪಕರು ಖಾರವಾಗಿ ಹೇಳಿದರು- "ಮೂರ್ಖಾ, ಪೃಥ್ವಿಯೇ ತಿರುಗುತ್ತಿರುವಾಗ ನಿನ್ನ ತಲೆಯದೇನು ಮಹಾ!"

—ವಿ. ಎ. ಜೋಶಿ

# ಬಿಂಬ ಪ್ರತಿಬಿಂಬ

ಶತಕತ್ರಯಕಾರನೆಂದೂ ಸುಭಾಷಿತಕಾರನೇದೂ ಸುಪ್ರಸಿದ್ಧನಾದ ಭರ್ತೃಹರಿ ಲಘುಶಬ್ದ ಚಿತ್ರಗಳನ್ನು (Miniature Painting) ಬರೆಯುವಲ್ಲಿ ಅಸಾಧಾರಣ ಜಾಣ್ಮೆಯನ್ನು ತೋರಿಸಿದ್ದಾನೆ. ಡಾ. ಎ. ಬಿ. ಕೀಥ್ ಮುಂತಾದ ವಿಮರ್ಶಕರ ಪ್ರಶಂಸೆಗೆ ಪಾತ್ರನಾಗಿದ್ದಾನೆ. ಹಲವು ಪದ್ಯಗಳಲ್ಲಿ ದೈವದ ಪ್ರಬಲವಾದ ಕಾಣದ ಕೈ ಎಂತಹ ಅನರ್ಥಗಳನ್ನು ತರುವುದೆಂಬುದನ್ನು ಆತನು ಬಣ್ಣಿಸಿದ್ದಾನೆ. ಖಲ್ವಾಟನೋರ್ವನು ಬಿಸಿಲಿನಲ್ಲಿ ಬೆಂದು ತಂಪಾದ ನೆಳಲನ್ನು ಹುಡುಕಿಕೊಂಡು ಹೋದಾಗ ದುರಂತಕ್ಕೆ ಗುರಿಯಾಗುವ ಚಿತ್ರ ಮುಂದಿನ ಸಂಸ್ಕೃತ ಪದ್ಯದಲ್ಲಿ ಮೂಡಿದೆ:

**ಖಲ್ವಾಟೋ ದಿವಸೇಶ್ವರಸ್ಯ ಕಿರಣೈಃ ಸಂತಾಪಿತೋ ಮಸ್ತಕೇ**
**ವಾಂಛನ್ ದೇಶಮನಾ ತಪಂ ವಿಧಿ ವಶಾತ್ ತಾಲಸ್ಯ ಮೂಲಂ ಗತಃ।**
**ತತ್ರಾಪ್ಯಸ್ಯ ಮಹಾ ಫಲೇನ ಪತತಾ ಭಗ್ನಂ ಸಶಬ್ದಂ ಶಿರಃ**
**ಪ್ರಾಯೋ ಗಚ್ಛತಿ ಯತ್ರ ದೈವ ಹತಕಸ್ತತ್ರೈವ ಯಾಂತ್ಯಾ ಪದಃ**

ಕನ್ನಡ ಭಾವಾನುವಾದ:

**ಕೆಂಡ ಉಗುಳುವ ಚಂಡ ಭಾಸ್ಕರನು ಉದ್ದಂಡ**
**ಉರಿವ ಕೈಗಳ ತೂರಿ ಮೆರೆಯುತಿರಲು**
**ದಾರಿ ನಡೆಯುತಲಿರುವ ಬೋಳು ತಲೆಯವನೋರ್ವ**
**ಬಿಸಿಲಿನಲಿ ಕಡು ಬೆಂದು ಬಳಲುತಿರಲು**
**ಬದಿಯಲಿಹ ತಾಳೆಮರ-ತಣ್ಣೆಳಲು ಕರೆದುದೆನೆ**



**ಸಾರಿ ಕುಳಿತನು ಕೆಳಗೆ ವಿಶ್ರಮಿಸಲು**
**ಅಲ್ಲೊ ಆದುದು ಏನು? ಎತ್ತರದ ಮೇಲಿಂದ**
**ಭಾರಯುತ ಹಣ್ಣೊಂದು ಬೀಳುತಿರಲು**
**ಧೊಪ್ಪೆಂದು ಸದ್ದಿನೊಡನೊಡೆದಿಹುದು ಅವನ ತಲೆ;**
**ನೆಳಲು ತಂದಿತು, ಪಾಪ! ಕೊರಳಿಗುರುಳು.**
**ದೈವ ಹೀನನು ಹೋದ ಹೋದ ಕಡೆಗಾಪತ್ತು**
**ಧಾವಿಪುದು ಬೆಂಬತ್ತಿ, ಬಿಡದೆ ಅಲ್ಲು!**

# ಶತಮಾನದ ಕೃತಿನೂರು

• ಕೆಲವು ನೆನಪುಗಳು • ಭೂಮಿಗೀತ

**ದೇಶಪಾಂಡೆ ಸುಬ್ಬರಾಯ**

೨೬

## ನವರತ್ನ ರಾಮರಾಯರು/ ಕೆಲವು ನೆನಪುಗಳು

ಮಾಸ್ತಿಯವರ 'ಸುಬ್ಬಣ್ಣ' ಯಾರಿಗೆ ಗೊತ್ತಿಲ್ಲ? ಪ್ರತಿಭೆಯಲ್ಲಿ ಅದೃಷ್ಟವಂತ, ಬದುಕಿನಲ್ಲಿ ಅದೃಷ್ಟಹೀನ; ಸಾಧನೆಯಲ್ಲಿ ಸಂಯಮಿ, ಚಲನೆಯಲ್ಲಿ ಮುಂಗೋಪಿ; ವೀಣೆಯಲ್ಲಿ ವಿದ್ವಾಂಸ, ವ್ಯವಹಾರದಲ್ಲಿ ಶತ ದಡ್ಡ; ಬೇಕಾದಲ್ಲಿ ಕರಗುವ ಸಕ್ಕರೆ, ಬೇಡವಾದಲ್ಲಿ ಕದಲದ ಕಲ್ಲು, ಒಟ್ಟಾರೆ ಸಾಕಷ್ಟು ವಿಚಿತ್ರ ವಿಕ್ಷಿಪ್ತಗಳ, ಆಶ್ಚರ್ಯ ಅನುಕಂಪಗಳ ಮೊಸರು ಬತ್ತಗಳ ಮಿಶ್ರಣ. ಇದು ಮಾಸ್ತಿಯವರ 'ಸುಬ್ಬಣ್ಣ.'

ಆದರೆ ವಾಸ್ತವದಲ್ಲಿ, 'ಸುಬ್ಬಣ್ಣ' ಎನ್ನುವವ ಕೇವಲ ಒಂದು ಕಾಲ್ಪನಿಕ ವ್ಯಕ್ತಿ ಖಂಡಿತಕ್ಕೂ ಅಲ್ಲ. ಮುಖ್ಯವಾದ ಹಂತ ಹಂತಗಳಲ್ಲೂ ಹೂಬೇಹೂಬ್ ಸುಬ್ಬಣ್ಣನ ಹಾಗೇ ವಾಸ್ತವದಲ್ಲಿ ಬದುಕಿದ್ದ ಶಾಮಣ್ಣ ಎನ್ನುವವರೇ ಮಾಸ್ತಿಯವರ ಕಥೆಯ ಬೆನ್ನೆಲುಬು. ಈ ಶಾಮಣ್ಣ ಎನ್ನುವವರನ್ನು (ಅವರ ಕಥಾಕಥಿತ ಸಹಿತವಾಗಿ) ಮಾಸ್ತಿಯವರಿಗೆ ಪರಿಚಯಿಸಿದವರೇ ನವರತ್ನ ರಾಮರಾಯರು. ರಾಮರಾಯರ ಬದುಕಿನಲ್ಲಿ, ಕೆಲದಿನ ಮಿಂಚಿ, ತಮ್ಮ ಬಣ್ಣ ಬಣ್ಣದ ಬದುಕಿನೊಂದಿಗೆ ಹೊಳೆದು, ಬಂದ ಬಂದಂತೇ ಮರೆಯಾದ ವ್ಯಕ್ತಿ ವೀಣೆ ಶಾಮಣ್ಣನವರು.

ಆದರೆ, ಓದುಗರ ಗಮನವನ್ನು ಬೇರೆಡೆಗೆ ಸೆಳೆದು ಹೇಳುವ ಅಂಶವೆಂದರೆ, ಈ ವರ್ಣಮಯ ಶಾಮಣ್ಣ ಎಂಬ ವ್ಯಕ್ತಿ ಮಾತ್ರವಲ್ಲ, ವಿಭಿನ್ನ ಕ್ಷೇತ್ರಗಳ, ವಿಭಿನ್ನ ಎತ್ತರದ, ವಿಭಿನ್ನ ಅಭಿರುಚಿ, ಅಂತಸ್ತು, ಸಂದರ್ಭ ಸನ್ನಿವೇಶಗಳಲ್ಲೆಲ್ಲ, ಅಕ್ಷರಶಃ ನೂರಾರು ಬಗೆಯ ವರ್ಣಮಯ ವ್ಯಕ್ತಿಗಳೊಡನೆ ನೂರಾರು ವಿಧಗಳಲ್ಲಿ ವ್ಯವಹರಿಸಿದ ವ್ಯಕ್ತಿ ನವರತ್ನ ರಾಮರಾಯರು. ಅವರ ಬದುಕಿನ ಇಂಥ

ವ್ಯವಹಾರಗಳ, ಒಂದು ಅಪೂರ್ವ ವರ್ಣಮಯ ವಿವರಣೆಯೇ, ಅವರು ಬರೆದ ಕೃತಿ; 'ಕೆಲವು ನೆನಪುಗಳು.'

ಟೇಟ್ ಸಾಹೇಬರ ಶಿಷ್ಯನಾಗಿ, ಮದ್ರಾಸಿನಲ್ಲಿ ಕಲಿತು— ಅಗ್ಗದ ಸಿಗರೇಟುಗಳನ್ನು ತಂದು ಕೈಯಿಂದ ಕೈಗೆ ಬದಲಾಯಿಸಿ ದಮ್ಮು ಹೊಡೆಯುವ ಅವರು ಅದು ಬಿ. ಎ. ಎಲ್ ಮುಗಿಸಿ, ರಾಜಾಜಿ ಅವರೊಂದಿಗೆ ಸೇಲಮ್ಮಿನಲ್ಲಿ ಕೆಲಕಾಲ ವಕೀಲಿ ಮಾಡಿ, ನಂತರ ಮೈಸೂರು ಸಂಸ್ಥಾನದ ಸರಕಾರದಲ್ಲಿ 'ಪ್ರೊಬೇಷನರ್' ಆದ ನವರತ್ನ ರಾಮರಾಯರು, ಬಡತಿಯ ಮೇಲೆ ಸೆಕ್ರೆಟರಿಯೇಟಿಗೆ ಹೋಗುವ ಮುನ್ನ, ಅನೇಕ ವರ್ಷಕಾಲ ಎಡತೊರೆ, ಅತ್ತಿಗುಪ್ಪೆ, ತಿರುಮಕೂಡಲು ನರಸಿಪುರ ತಾಲ್ಲೂಕುಗಳಲ್ಲಿ ಅಮಲ್ದಾರರಾಗಿ ಕಾರ್ಯನಿರ್ವಹಿಸಿದರು. ಈ ಅಮಲ್ದಾರೀ ಕಾರ್ಯ ನಿರ್ವಹಣೆಯು, ಅವರ ಆಗಿನ ದಿನಗಳ, ವೃತ್ತಿಯು, ಸುಸಂಬದ್ಧ ವಿವರಣೆಯೇ ಈ ಕೃತಿ.

ಒಂದು ದೃಷ್ಟಿಯಿಂದ ಇದೊಂದು ದೃಶ್ಯಾವಳಿ, ಅಥವಾ ಕಥಾವಳಿ, ಅಥವಾ ಘಟನಾವಳಿ ಎಂದು ಹೊರನೋಟಕ್ಕೆ ತೋರಬಹುದು. ಆದರೆ, ಈ ಎಲ್ಲ ದೃಶ್ಯ/ಕಥೆ/ಘಟನೆಗಳನ್ನು ಕೊಂಡಿ ಕೂಡಿಸುವ ಒಂದು ಮುಖ್ಯ ಸೂತ್ರ ಇಲ್ಲಿದೆ. ಅದೆಂದರೆ, ಮನುಷ್ಯ ಮತ್ತು ಅವನು ಎದುರಿಸಿದ ಬದುಕು. ಮನುಷ್ಯ ಮತ್ತು ಬದುಕು ಎಂದೊಡನೆಯೇ ಒಂದು ವಿವರಣೆಗೆ ಸಿಕ್ಕಲಾರದಷ್ಟು ವಿಚಿತ್ರ ಭವ್ಯವಾದ, ಅಸ್ತ-ವ್ಯಸ್ತ ವಿಸ್ತೀರ್ಣವಾದ, ವೈವಿಧ್ಯಗಳಿಂದ ವಿಲಕ್ಷಣವಾದ, ಎಲ್ಲ ಬಗೆಯ ಗುಣಾವಗುಣ-ಗಳಿಂದ ಪವಿತ್ರ/ಕಲುಷಿತವಾದ, ಒಟ್ಟಾರೆ, ಒಂದು ವ್ಯಾಖ್ಯೆಯ ತೆಕ್ಕೆಯನ್ನು ಎಷ್ಟೋ ಪಟ್ಟು ದಾಟಿ ಬಿಡುವಷ್ಟು ದೊಡ್ಡದಾದ ಕ್ಯಾನ್‌ವಾಸ್ ಒಂದು ನಮ್ಮೆದುರು ಹರಡಿಕೊಂಡುಬಿಡುತ್ತದೆ. ಈ ಕೃತಿಯಲ್ಲಿ ಆಗುವದಾದರೂ ಹೀಗೆಯೇ.

ಇಲ್ಲಿ ಕಳ್ಳರಿದ್ದಾರೆ, ಸುಳ್ಳರಿದ್ದಾರೆ: ಸಂತರು, ಸಾಧುಗಳು, ಮುಂಗ್ಧರು, ಮೂರ್ಖರು, ದಗಾಖೋರರು, ಕೊಲೆಗಡುಕರು, ಉದಾರ ಚರಿತರು, ಪ್ರಾತಃಸ್ಮರಣೀಯರು, ಶಿಕ್ಷಿತರು, ಅಶಿಕ್ಷಿತರು, ಉಚ್ಚವೆಂಬ ಗರ ಬಡಿದವರು, ನೀಚವೆಂಬ ಕೀಳರಿಮೆಯವರು, ಒಳನಾಡ ವ್ಯವಹಾರಸ್ಥರು, ಹೊರನಾಡ ನೌಕರಶಾಹಿಗಳು, ಹೀಗೆ ದಿವಾನರಿಂದ ಜವಾನನವರೆಗೆ, ಕರುಣಾಮಯಿಗಳಿಂದ ಕೊಲೆಗಡುಕರವರೆಗೆ ಅಕ್ಷರಶಃ ನೂರಾರು ಜನ ಇಲ್ಲಿದ್ದಾರೆ. ಈ ನೂರಾರು ಜನರ ನೂರಾರು ನಮೂನೆಯ ಕೊಡುಕೊಳ್ಳುವಿಕೆಗಳ ಒಳ ಹೊರಗುಗಳ ಮಧ್ಯ ನರಳಿಕೊಳ್ಳುವ, ಅರಳಿಕೊಳ್ಳುವ, ಗೆಲ್ಲುವ, ಸೋಲುವ ಸಾವಿರಾರು ಜನರಿದ್ದಾರೆ. ಮತ್ತು ಈ ಎಲ್ಲ ವ್ಯವಹಾರಗಳ ಎಲ್ಲ ಆಯಾತ ನಿರ್ಯಾತಗಳ ಮಧ್ಯ, ಏರು ಇಳಿವುಗಳ ಮಧ್ಯ, ಜಯಾಪಜಯಗಳ ಮಧ್ಯ, ವಿಚಿತ್ರ ಬಗೆಯ ಕಗ್ಗಂಟುಗಳಾಗಿ ಇನ್ನಷ್ಟು ಸಾಂದ್ರವಾಗುತ್ತ ಹೋಗುವ, ಜಟಿಲವಾಗುತ್ತ ಹೋಗುವ ಬದುಕಿದೆ. ಆದ್ದರಿಂದಲೇ ಈ ಪುಸ್ತಕ ಒಬ್ಬ ವ್ಯಕ್ತಿಯ ಒಂದು ಅಧಿಕಾರಾ-ವಧಿಯ (ಆತ್ಮ ಪೌರುಷದ) ಆತ್ಮ ಕತೆ ಮಾತ್ರವಾಗಿರದೆ ನಮ್ಮ ನಾಡಿನ, ಒಂದು ಕಾಲದ, ಒಂದು ವಿಶಿಷ್ಟ ಚಿತ್ರಣವಾಗಿದೆ. ಎಂದರೆ, ಅಂದಿನ ಜನ, ವಿವಿಧ ಅಂತಸ್ತುಗಳ, ವಿವಿಧ ಕಸಬುಗಳ ವಿವಿಧ ಮನೋಧರ್ಮ ಅಭಿರುಚಿಗಳ ಜನ, ತಮ್ಮ ಆಶೆ ಆಕಾಂಕ್ಷೆ ಗತ್ತು ಗುರಿಗಳಿಗನುಗುಣವಾಗಿ ಅಂದಿನ ಬದುಕನ್ನು ಎದುರಿಸಿದ ರೀತಿ, ಅದಕ್ಕೆ ಸ್ಪಂದಿಸಿದ ಪರಿ ಈ ಪುಸ್ತಕದ ಬೆನ್ನಿಗಿದೆ. ಹೀಗಾಗಿ ಒಂದು ನೆಲದ ಒಂದು ಜನದ, ಒಂದು ಇತಿಹಾಸದ ಸೂಕ್ಷ್ಮ ಸ್ವರೂಪ ಬಂದು ಬಿಡುವದೂ ಈ ಪುಸ್ತಕದ ಒಂದು ವೈಶಿಷ್ಟ್ಯವಾಗಿ ಬಿಡುತ್ತದೆ.

ಮೇಲಿನ ವಿವರಣೆಯ ಪಕ್ಕದಲ್ಲಿ, ಇನ್ನೊಂದು ಬಗೆಯ ವಿವರಣೆಯನ್ನು ಗಮನಿಸಿದಾಗ ಈ ಪುಸ್ತಕದ ಇನ್ನೊಂದು ವೈಶಿಷ್ಟ್ಯ ಎದ್ದು ಕಾಣು-ತ್ತದೆ.

ಈ ಪುಸ್ತಕ, ಒಂದು ಬಗೆಯ 'ಇತಿಹಾಸ' ಎಂದು ಹೇಳಿದೆ. ಆದರೆ ಬಹಳಷ್ಟು ಸಂದರ್ಭಗಳಲ್ಲಿ ಒಂದು ಇತಿಹಾಸವನ್ನು ಬರೆದವನು, ಆ ಇತಿಹಾಸದ ಮಟ್ಟಿಗೆ, ಕೇವಲ, ಒಬ್ಬ, ಪರೋಕ್ಷ 'ವೀಕ್ಷಕ'ನಾಗಿರುವುದೇ ಹೆಚ್ಚು. ಬಹಳ ಸಲ, ಅದು, ಆತನಿಗೆ, ಅಭ್ಯಾಸಮಾತ್ರದಿಂದ ಒದಗಿ ಬಂದ 'ನೋಟ' ಮಾತ್ರವಾಗಿರುತ್ತದೆ. ಆದರೆ

'ಕೆಲವು ನೆನಪುಗಳ'ಲ್ಲಿ ರಾಮರಾಯರು ಬರಿಯ ವೀಕ್ಷಕರಲ್ಲ. ಸ್ವತಃ ಪಾತ್ರಧಾರಿಗಳು. ಸಾದಾ ಪಾತ್ರಧಾರಿಗಳಲ್ಲ, ಬಹು ಮುಖ್ಯರೇ. ಮೇಲ್ಕಾಣಿಸಿದ ಎಲ್ಲ ಬಗೆಯ ಜನರೊಂದಿಗೂ, ಒಂದಿಲ್ಲೊಂದು ರೀತಿಯಿಂದ ವ್ಯವಹರಿಸಿದವರು, ಸೆಣಸಾಡಿದವರು, ಕೊಡುಕೊಳ್ಳುವ ನೂರು ಬಗೆಯ ರೀತಿಗಳಲ್ಲಿ, ಹಂತಗಳಲ್ಲಿ, ಕ್ರಿಯಾಶೀಲ ರಾಗಿ ಅಕ್ಷರಶಃ ಪಾಲುಗೊಂಡವರು. ಮತ್ತು ಬಹು ಮುಖ್ಯ ವಿಷಯವೆಂದರೆ ಈ ವ್ಯವಹಾರ ಗಳಲ್ಲಿ, ಬಹಳಷ್ಟು ಸಲ ಉದ್ಭವಿಸಿದ ಕಗ್ಗಂಟು ಗಳನ್ನು ಸುಸೂತ್ರವಾಗಿ ಬಿಡಿಸಿ, ಸಂಬಂಧಿಸಿ ದವರ ಬದುಕುಗಳನ್ನು ಸುಗಮಗೊಳಿಸಿದವರು. ಹೀಗಾಗಿ ಇಲ್ಲಿಯ ಇಡಿಯ ಚಿತ್ರಣಕ್ಕೆ ಒಂದು ಬಗೆಯ ಆಥೆಂಟಿಕ್ಕಾದ ಚಾರಿತ್ರ್ಯದ ತಳಪಾಯ ಒದಗಿ, ಇಡಿಯ ಚಿತ್ರಣಕ್ಕೆ ಒಂದು ನೈತಿಕ ಹೊಳಪು ಬಂದುಬಿಡುತ್ತದೆ. ಇದು ಈ ಕೃತಿಯ ಮುಖ್ಯ ಗೆಲುವುಗಳಲ್ಲಿ ಒಂದು.

ಕೃತಿಯ ಈ ಬಗೆಯ ನೈತಿಕ ಗೆಲುವಿಗೆ ಮುಖ್ಯ ಕಾರಣವೆಂದರೆ, ಸ್ವತಃ ನವರತ್ನ ರಾಮರಾಯರು ನೈತಿಕ ಸಿಲುವುಗಳಲ್ಲಿ ತಮ್ಮನ್ನು ತಾವೇ ಗೆದ್ದುಕೊಂಡದ್ದೇ ಆಗಿದೆ. ಆದ್ದರಿಂದ ಆ ದಿಕ್ಕಿನ ವಿವರಣೆಯೂ ಇಲ್ಲಿ ಅಗತ್ಯ ಎಂದು ನಾನು ಭಾವಿಸುತ್ತೇನೆ.

ರಾಮರಾಯರು ಒಂದು ಪ್ರತಿಭಾವಂತ/ಗೌರವಾನ್ವಿತ ಮನೆತನದಿಂದ ಬಂದವರು. ಇವರ ಹಿರಿಯರೊಬ್ಬರು ಶ್ರೀ ಮದುತ್ತರಾದಿ ಮಠದ ಸ್ವಾಮಿಗಳಾಗಿದ್ದವರು. ಇವರ ಕಕ್ಕ ವ್ಯಾಸಾ ಚಾರ್ಯರು ದೊಡ್ಡ ವಿದ್ವಾಂಸರಾಗಿ ತಿರುಪತಿ ಯಾದಿ ವಿದ್ವತ್ಸಭೆಗಳಲ್ಲಿ ಸನ್ಮಾನಿತರಾದವರು. ಸ್ವತಃ ರಾಮರಾಯರು ಒಬ್ಬ ಪ್ರತಿಭಾವಂತ ವಿದ್ಯಾರ್ಥಿಗಳು. ರಾಜಾಜಿಯಂಥವರ ಸಹಪಾಠಿ ಗಳು, ಅವರ ಆತ್ಮೀಯ ಸ್ನೇಹಿತರು (ಮುಂದೆ, ಒಂದು ಸಲ, ರಾಮರಾಯರ ವೃತ್ತಿ ಜೀವನದ ಒಂದು ಅತ್ಯಂತ ಗಂಡಾಂತರಮಯ ಗಳಿಗೆಯಲ್ಲಿ ಈ ರಾಜಾಜಿಯವರೂ ಜತೆಗಿದ್ದ ಒಂದು ಸನ್ನಿ ವೇಶ ವಿವರಣೆಯೂ ಈ ಪುಸ್ತಕದಲ್ಲಿದೆ), ಒಳ್ಳೆಯ ವಕೀಲರು, ಭಾಷಾ ಪ್ರೇಮಿಗಳು, (ಸ್ವಪ್ರಯತ್ನ ದಿಂದ ಫ್ರೆಂಚ್ ಕಲಿತರು,) ಸಂಗೀತ ಪ್ರೇಮಿಗಳು. (ಹೀಗಾಗಿ ವೀಣೆ ಶಾಮಣ್ಣನವರ ಪರಿಚಯ), ಒಳ್ಳೆಯ ಕುಸ್ತಿಪಟುಗಳು, ಅತ್ಯುತ್ತಮ ಕುದುರೆ ಸವಾರರು, ಈಜುಗಾರರು, ಯಾವುದಕ್ಕೂ ಅಳು ಕದ ಧೀರರು, ದಿಟ್ಟರು; ನಿರ್ಭಿಡೆಯ ಸ್ವಭಾವದ ನಿಷ್ಠುರರು. ಇಲ್ಲಿ ಒಂದು ಸನ್ನಿವೇಶವನ್ನು ನೋಡಬೇಕು.

ಸ್ಪಾಕನ್ಸ್ ಎನ್ನುವ ಇವರ ಡೆಪ್ಯೂಟಿ ಕಮೀಶ ನರ್, ಎಲ್ಲರನ್ನು ನಡುಗಿಸುತ್ತಿದ್ದ ಒಬ್ಬ ಸಿಡು ಕಿನ, ಒರಟಾದ, ಕೆಟ್ಟ ಭಾಷೆಯ ಬಿಳಿಯ ಅಧಿ ಕಾರಿ. ಒಮ್ಮೆ ಆತ, ಆಫೀಸಿನ ಅಧಿಕೃತ ಕಾರ್ಯ ಕ್ಕಾಗಿ ರಾಮರಾಯರು ಅಮಲ್ದಾರರಾಗಿದ್ದ ಎಡ ತೊರೆಗೆ ಬಂದ. ಆದರೆ, ಬಂದೊಡನೆಯೇ ಒಂದೆರಡು ಅನುಚಿತ ಮಾತುಗಳನ್ನಾಡಿದ, ರಾಮರಾಯರು ಸಂತಪ್ತರಾದರು. ಮುಂದೆ ಆ ಅಧಿಕಾರಿ ಕೇಳಿದ ಮೊದಲ ಪ್ರಶ್ನೆಗೆ ಇವರ ಉತ್ತರ: "If you want me to answer your questions you must express regret for what you said a little while ago. You swore at me for no reason and called me a damned liar. I am a gentleman and claim to be treated like one. I refuse to take any notice of you unless you apologise."

ಒಬ್ಬ ಜಿಲ್ಲಾಧಿಕಾರಿಗೆ (ಆಗ ಅದೂ ಒಬ್ಬ ಬಿಳಿಯ 'ದೊರೆ'ಗೆ), ಆತನ ಕೈಯಲ್ಲೇ ಕೆಲಸ ಮಾಡುವ ಒಬ್ಬ, ಬರಿಯ ತಾಲ್ಲೂಕು ಮಟ್ಟದ ಅಮಲ್ದಾರ ಆಡಿದ ಮಾತು ಇದು ಎಂದು ನಾವು ಇನ್ನೊಮ್ಮೆ ನೆನೆಪಿಸಿಕೊಳ್ಳಬೇಕು; ಈ ಅಮಲ್ದಾರನ ಗುಂಡಿಗೆ ಎಂತಹದು ಎಂದು ಅರ್ಥಮಾಡಿಕೊಳ್ಳಲು. ಇನ್ನೊಂದು ಸಂದರ್ಭ ದಲ್ಲಿ, ತಮ್ಮ ನೌಕರಿ ಹೋದರೂ ಹರಕತ್ತಿಲ್ಲ, ತಮಗೆ ತಿಳಿದದ್ದನ್ನೇ ಮಾಡುವದು ಎಂದು ನಿಶ್ಚಯಿಸಿಕೊಂಡು ಹಾಗೆ ಮಾಡಿಯೂ ಮಾಡಿ ದರು ರಾಮರಾಯರು. ಇಷ್ಟೇ ಏಕೆ, ಹೀಗೆ ಅಮಲ್ದಾರರಿದ್ದಾಗಲೇ, ದಿವಾನ್ ಮಾಧವ ರಾಯರೆದುರಿಗೇ ಅವರು ಅತ್ಯಂತ ಆಪ್ತರಾದ ಹಿರಿಯ ಅಧಿಕಾರಿಯೊಬ್ಬರಿಗೆ, ಎದುರಾಎದು

ರಿಗೇ ಮುಖಕ್ಕೆ ಮಂಗಳಾರತಿ ಎತ್ತಿದ್ದುಂಟು. ಮಾತ್ರವಲ್ಲ, ಒಮ್ಮೊಮ್ಮೆಯಂತೂ ದಿವಾನರಿಗೇ ಸೂಕ್ಷ್ಮವಾಗಿ ಒಂದು ಡೋಸ್ ಕೊಟ್ಟದ್ದೂ ಇದೆ. ಇದು ರಾಮರಾಯರು.

ಇವೆಲ್ಲವನ್ನೂ ವಿವರಿಸುವದರ ಉದ್ದೇಶ ಇಷ್ಟೇ: ಇಂತಹ ಆಶ್ಚರ್ಯಕರ ನಿಷ್ಠುರತೆಗಳು ಮತ್ತು ಸ್ವಾಭಿಮಾನಗಳು ಒಂದು ವ್ಯಕ್ತಿಯಲ್ಲಿ ಸುಮ್ಮನೇ ಬರುವದಿಲ್ಲ. ಆ ವ್ಯಕ್ತಿಯ ವ್ಯಕ್ತಿತ್ವದಲ್ಲಿ ಒಂದು ಗಾಢವಾದ ನೈತಿಕ ನೆಲೆಗಟ್ಟು ಇದ್ದರೆ ಮಾತ್ರವೇ ಸಾಧ್ಯವಾಗುವ ಸೊತ್ತು ಇದು. ರಾಮರಾಯರ ಇಡಿಯ ವ್ಯಕ್ತಿತ್ವಕ್ಕೆ ಒಂದು ವಿಶೇಷ ಹೊಳಪು ಬಂದದ್ದು, ಇಂತಹ ಒಂದು ಎತ್ತರದ ನೈತಿಕ ನೆಲೆಯಿಂದಲೇ ಎಂಬುದು ನಿರ್ವಿವಾದ. ಆದ್ದರಿಂದ ಈ ಪುಸ್ತಕಕ್ಕೂ ಅಂಥ ಒಂದು ನೈತಿಕ ಎತ್ತರದ ನಿಲುವು ಬಂದಿದ್ದರೆ ಅದು ಸಹಜ ಸ್ವಾಭಾವಿಕ.

ಅಮಲ್ದಾರರಾಗಿದ್ದ ರಾಮರಾಯರಿಗೆ ಗೊತ್ತಾದಂತೆಯೇ, ಒಂದು ಗ್ರಾಮದಲ್ಲಿ ಒಂದು ಕೊಲೆಯಾಗುತ್ತದೆ. ಒಂಟಿಯಾಗಿ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಹೆಣ್ಣುಮಕ್ಕಳನ್ನು 'ಕೆಣಕುತ್ತಿದ್ದ' ಓರ್ವ ಕೇಡಿಯನ್ನು ತೀರಾ ಸಹಿಸಲಾಗದ ಗ್ರಾಮಸ್ಥರು. ಆತನನ್ನು ಕೊಲೆಗೈದು ಹೊಳೆಗೆ ಎಸೆದು ಬಿಟ್ಟಿರುತ್ತಾರೆ. ಈ ಹಿನ್ನಲೆಯಲ್ಲಿ, ರಾಮರಾಯರು ಆಡುವ ಮಾತು, ಅವರ ನೈತಿಕ ನಿಲುವಿಗೆ ಹಿಡಿದ ಕನ್ನಡಿಯಾಗಿದೆ. "ಗ್ರಾಮಸ್ಥರು ಮಾಡಿದ್ದು ಕಾನೂನಿಗೆ ವಿರುದ್ಧ. ಆದರೆ ನ್ಯಾಯಕ್ಕೆ ವಿರುದ್ಧವೆಂದು ಹೇಳಲಿಕ್ಕೆ ನನಗೆ ಧೈರ್ಯ ಸಾಲದು." ಹಾಗೆಯೇ ಇನ್ನೊಂದು ವಾಕ್ಯ. "Honesty ಅನ್ನು ಕೂಡ ವಕ್ರವಾಗಿ ಆಚರಿಸಿ, ದೋಷಯುತವಾಗುವಂತೆ ಚಾಚಬಹುದು."

ಆದರೆ ಹಾಗೆಂದು ಇಲ್ಲಿ ಉದ್ದಕ್ಕೂ ಹರಿದದ್ದು ಇಂಥ ನಿಷ್ಠುರತೆ ಮಾತ್ರವೇ ಎಂದು ಭಾವಿಸಿದರೆ ತಪ್ಪು. ಇಲ್ಲಿ, ಈ ನಿಷ್ಠುರತೆಗೂ ಮಿಗಿಲಾದ ಪ್ರೇಮವಿದೆ, ಕರುಣೆ ಇದೆ. (ಒಮ್ಮೆ, ತುಂಬ ಕುಡಿದುಬಿಟ್ಟು, ಕಣ್ಣು ಕಾಣದಂತಾಗಿ, ಹೊಳೆಯ ಮಧ್ಯದಲ್ಲೇ ನಿಂತ ಒಬ್ಬ ವ್ಯಕ್ತಿಯನ್ನು ದಾಟಿಸಲು ಮಾನವೀಯವಾಗಿ ಸಹಾಯ ಮಾಡುತ್ತಾರೆ ರಾಮರಾಯರು) ಕನಿಕರವಿದೆ, ದಯೆ ಇದೆ. ಗಂಡಾಂತರವನ್ನೆದುರಿಸುವ ಕೆಚ್ಚು ಇದೆ, ಸನ್ನಿವೇಶಗಳನ್ನು ತಿಳಿಗೊಳಿಸುವ ಹಾಸ್ಯವಿದೆ, ಸಮಯೋಚಿತವಾದ ಪ್ರಜ್ಞೆ ಇದೆ, ಕಾಲಕ್ಕೆ ತಕ್ಕ ಪ್ರಸಂಗಾವಧಾನವಿದೆ. ಹೀಗಾಗಿ, ಎಲ್ಲ ಬಗೆಯ ಎಲ್ಲ ಜನರನ್ನೂ, ಎಲ್ಲ ವ್ಯವಹಾರವನ್ನೂ, ಒಬ್ಬನೇ ಶಕ್ತಿಯುತವಾಗಿ ನ್ಯಾಯಯುತವಾಗಿ ನಿಭಾಯಿಸಬಲ್ಲ ಸಾಮರ್ಥ್ಯ ಇಲ್ಲಿಯ ಬದುಕಿಗೆ ಬಂದಿದೆ.

ಈ ಹಿನ್ನಲೆಗಳಲ್ಲಿ, ಈ ಕೃತಿ, ನವರತ್ನ ರಾಮರಾಯರ 'ಕೆಲವು ನೆನಪುಗಳು' ಎಂಬ ಪುಸ್ತಕ ಮಾತ್ರವಾಗಿರದೆ, ಬದುಕಿನ ಬಹಳಷ್ಟು ಹಂತಗಳಲ್ಲಿಯ ಸಾಕಷ್ಟು ಜನಗಳಿಗೆ, ಹಲವು ಸೂಚನೆಗಳೂ ಆಗಬಹುದೆಂಬುದೇ ಈ ಕೃತಿಯ ಹೆಗ್ಗಳಿಕೆಯಾಗಿದೆ.

## ೨೭

## ಎಂ. ಗೋಪಾಲಕೃಷ್ಣ ಅಡಿಗ/ ಭೂಮಿಗೀತ

ಮನುಷ್ಯನನ್ನು ಕುರಿತು, ಆತನ ಸುತ್ತಲಿನ ಬದುಕಿನ ಹತ್ತು ಹಲವು ಪರಿಕರಗಳನ್ನು ಕುರಿತು ಹಲವಾರು ಹಂತಗಳನ್ನು ಕುರಿತು, ಆತನ ಹುಟ್ಟು ಸಾವುಗಳನ್ನು ಕುರಿತು, ಭೂತ, ವರ್ತಮಾನ ಭವಿಷ್ಯಗಳನ್ನು ಕುರಿತು, ಹಗಲು ಇರುಳು, ನಿದ್ರೆ ಎಚ್ಚರ; ಭೂಮಿ, ಆಕಾಶ ಇವುಗಳನ್ನು ಕುರಿತು, ಇವುಗಳ ಪರಸ್ಪರ ಸಂಬಂಧಗಳನ್ನು ಕುರಿತು, ಇವುಗಳ ಮಧ್ಯದ ಪರಸ್ಪರ ಕೊಡುಕೊಳ್ಳುವಿಕೆಗಳನ್ನು, ಇವುಗಳ ವ್ಯಾಪ್ತಿ, ವೈಶಾಲ್ಯಗಳನ್ನು ಕುರಿತು, ಸೋಲು ಗೆಲುವು, ಆಹ್ವಾನ ಆಶಯಗಳನ್ನು ಕುರಿತು ಮೂಲಭೂತವಾಗಿ ಮತ್ತು ಗಾಢವಾಗಿ ಚಿಂತಿಸಿದ ಕವಿ, ಮೊಗೇರಿ ಗೋಪಾಲ ಕೃಷ್ಣ ಅಡಿಗರು. ಅವರ 'ಭೂಮಿಗೀತ' ಸಂಗ್ರಹದ ಪ್ರಮುಖ ಕವನಗಳಲ್ಲೆಲ್ಲ ಈ ಹಿನ್ನಲೆ

yಯಲ್ಲಿಯೇ ಚಿಂತನ, ಮನನ, ವಿಶ್ಲೇಷಣ, ವಿವರಣ ಇತ್ಯಾದಿಗಳು ನಡೆದಿವೆ.

(ಇತ್ತೀಚಿನ, ನನ್ನ ದೃಷ್ಟಿಕೋನದ ಪ್ರಕಾರ, ಮುಖ್ಯವಾಗಿ, ಮನುಷ್ಯನನ್ನು ಕುರಿತಾದ ವಿವಿಧ ಮಜಲುಗಳ ಕಾಳಜಿಯೇ ಅಡಿಗರ ಯಾವತ್ತೂ ಕಾವ್ಯರಚನೆಯ ಮುಖ್ಯ ವಸ್ತುವಾದ್ದರಿಂದ, ಒಂದು ದೃಷ್ಟಿಯಿಂದ ಅವರು ಆರಂಭದಿಂದಲೂ ಬರೆಯುತ್ತಿದ್ದುದು ಒಂದೇ ಕವಿತೆಯನ್ನು ಎಂದು ಎನಿಸುತ್ತದೆ. ಅವರ ಅನೇಕ ಪ್ರಮುಖ ಕವಿತೆಗಳನ್ನು ವಿಶ್ಲೇಷಿಸಿದರೆ, ಅವರ ಇನ್ನಿತರ ಪ್ರಮುಖ ಕವನಗಳ ಸೂಕ್ಷ್ಮ ಕಂಪನಗಳನ್ನು ಅಲ್ಲಿ ಕೇಳಿಸಿಕೊಳ್ಳಬಹುದೇನೋ. ಬಹಳವಾದರೆ, ಇವರ ವಿಭಿನ್ನ ಪ್ರಮುಖ ಕವಿತೆಗಳು, ಇವರ ಪ್ರಮುಖ ವಸ್ತುವಿನ ವಿಭಿನ್ನ ಚಿಂತನೆಯ ಪಲುಕುಗಳಾಗಿರಬಹುದು ಎಂದೂ ಅನಿಸುತ್ತದೆ. ಈ ನನ್ನ ದೃಷ್ಟಿಯೇ ನನ್ನ ಇಲ್ಲಿಯ ವಿಶ್ಲೇಷಣೆಯಲ್ಲಿರುವದರಿಂದ ಈ ಸಂಗ್ರಹವನ್ನು ನಾನು ಒಟ್ಟು ದೃಷ್ಟಿಯಿಂದಲೇ ಇಲ್ಲಿ ನೋಡಿದ್ದೇನೆ.)

ಅವರ 'ಭೂಮಿಗೀತ' ಎಂಬ ಕವಿತೆಯನ್ನೇ ನೋಡೋಣ. ಸಂಗ್ರಹದಲ್ಲಿ ಹೇಳುವುದಾದರೆ, ವರ್ತಮಾನದ ಗಳಿಗೆಯೊಂದರಲ್ಲಿ ನಿಂತು, ಭೂತ ಮತ್ತು ಭವಿಷ್ಯಗಳ ಮುಖೇನ, ಸಾರ್ವತ್ರಿಕ ಸತ್ಯಗಳ ಹಿನ್ನಲೆಯಲ್ಲಿ, ಭೂಮಿ ಮತ್ತು ಮನುಷ್ಯನ ಸಂಬಂಧಗಳನ್ನು ಅದರ ವಿವಿಧ ಕೋನಗಳನ್ನು, ಒಂದು ಬಗೆಯ ನಾಟಕೀಯ ಸ್ವಗತದ ಮಾಧ್ಯಮದಲ್ಲಿ ವಿವರಿಸಿದ ವಸ್ತುವೇ 'ಭೂಮಿಗೀತ.'

ಬಹುಶಃ ಆರಂಭದಿಂದಲೂ, ಅಡಿಗರು ಈ ವಸ್ತುವನ್ನು ಕುರಿತು ಚಿಂತಿಸುತ್ತಲೇ ಬಂದಿದ್ದಾರೆ. ಬರಹದ ಬೇರೆ ಬೇರೆ ಹಂತಗಳಲ್ಲಿ ಈ ಕುರಿತು ಅಭಿವ್ಯಕ್ತಿಸಿಯೂ ಇದ್ದಾರೆ. ಉದಾಹರಣೆಗೆ; ಹಿಮಗಿರಿಯ ಕಂದರ (ಚಂಡೆ ಮದ್ದಳೆ ಸಂಗ್ರಹ), ಹೆಣ್ಣು, ಗಾಂಧಿ, ಕನಸು, ಫಣಿ, ಭೂಮಿತಾಯಿ, ಓ ನನ್ನ ಜನವೆ (ನಡೆದು ಬಂದ ದಾರಿ ಸಂಗ್ರಹ), ಮೋಹನ ಮುರಲಿ, ಕೊರಗು (ಕಟ್ಟುವೆವು ನಾವು ಸಂಗ್ರಹ), ಓಡಲೆಣಿಸುತಿಹುದು ಜೀವ, ಹಿಂದು ಮುಂದಿನೆಣಿಕೆಯಾತಕೆ, ಕಲ್ಲಾಗು ಕಲ್ಲಾಗು, ಪ್ರೀತಿ, ಒಳ ತೋಟಿ (ಭಾವತರಂಗ ಸಂಗ್ರಹ) ಮೊದಲಾದ ಅನೇಕ ಕವಿತೆಗಳಲ್ಲಿ, ಆನುಷಂಗಿಕವೆನಿಸುವಂತಹ ಸಾಲು ಕೆಲವುಗಳಲ್ಲಿಯಾದರೂ ಇಲ್ಲಿಯ ವಸ್ತುವಿನ ತುಯ್ತವನ್ನು, ಆಶಯದ ಅನಿಕೆಯನ್ನು ಗಮನಿಸಬಹುದು.

ಕಾಲನ ಹಿನ್ನಲೆಯಲ್ಲಿಯ ಮನುಷ್ಯನ ಅಸ್ತಿತ್ವ, ಮತ್ತು ಮನುಷ್ಯತ್ವದ ಸನ್ನಿವೇಶ ಇವುಗಳ ಅರ್ಥಪೂರ್ಣ ವಿವೇಚನೆ ಈ ಕವನದಲ್ಲಿದೆ. ಈ ಅಭಿವ್ಯಕ್ತಿಯನ್ನು ಅನೇಕ ಪ್ರತಿಮೆಗಳ ಮುಖಾಂತರ, ಪ್ರತೀಕಗಳ ಮುಖಾಂತರ ಎತ್ತಿಕೊಂಡ ನಾಟಕೀಯ ಸ್ವಗತಗಳು, ಲಹರಿಗಳು, ಚಿತ್ರಣಗಳ ಮುಖಾಂತರ ಕವಿ ಸಾಧಿಸುತ್ತಾರೆ.

ತಾನು ಅಂದುಕೊಂಡಂತಹ ಪಕ್ವತೆಯತ್ತ ಸಾಗಲು ಮನುಷ್ಯ ಮತ್ತೆ ಮತ್ತೆ ಫೀನಿಕ್ಸ್ ಹಕ್ಕಿಯ ಹಾಗೆ ಹೊಸ ಹೊಸ ಹುಟ್ಟನ್ನು ಪಡೆಯಬೇಕಾಗುತ್ತದೆ. ಆದರೆ ಪ್ರತಿ ಹೊಸ ಹುಟ್ಟಿಗೂ ಮುಂಚೆ ಫೀನಿಕ್ಸ್ ಸಾಯಬೇಕಾಗುತ್ತದೆ. ಒಂದು ಸಾವು ಮಾತ್ರವೇ ಒಂದು ಹೊಸ ಹುಟ್ಟಿಗೆ ಕಾರಣವಾಗಬಲ್ಲದು. ಹಾಗೆಯೇ ಎಲ್ಲವನ್ನು ತ್ಯಜಿಸಬಲ್ಲವನು ಮಾತ್ರವೇ ಎಲ್ಲವನ್ನು ಪಡೆಯುವ ನೈತಿಕ ತಾಕತ್ತನ್ನೂ ಪಡೆಯುತ್ತಾನೆ. ನಿರಾಕರಣವೇ ಸ್ವೀಕಾರದ ಮೊದಲ ಮೆಜಲು. ಇದನ್ನು ಕವಿ ನಾಟಕೀಯವಾಗಿ, ಆದರೆ ಅತ್ಯಂತ ಪ್ರಭಾವಶಾಲಿಯಾಗಿ ಮಂಡಿಸಿದ ರೀತಿ ಇದು:

"ತೆಗೆದುಕೋ ನೀ ಕೊಟ್ಟ ಎಲ್ಲ ವಸ್ತ್ರವಿಲಾಸ<br>
ಈ ಕೋಟು, ಈ ಶರಟು, ಈ ಶರಾಯಿ;<br>
ಈ ಭಗ್ನ ಜೋಪಡಿಯು ನಿನ್ನದೇ,<br>
ತೆಗೆದುಕೋ,<br>
ಬತ್ತಲಾಗದೆ ಬಯಲು ಸಿಕ್ಕದಿಲ್ಲಿ."

'ಇಡಿ'ಯೊಂದಿಗೆ ಒಂದಾಗಿ ನಿಂತಾಗಲೇ ಪಡೆಯುವ ಅರ್ಹತೆ ಗಳಿಸುತ್ತಾನೆ, ಮನುಷ್ಯ. 'ಕಟ್ಟುವೆವು ನಾವು' ಎಂಬ ನೈತಿಕ ತಾಕತ್ತು ಬರುವದು ಇಲ್ಲಿಯೇ, ಮತ್ತು ಹೀಗೆ ಮಾತ್ರ.

ನಾಟಕೀಯ ಶೈಲಿಯ ಮಂಡನೆ ಅಡಿಗರ ಕಾವ್ಯದ ವೈಶಿಷ್ಟ್ಯ. ಯಕ್ಷಗಾನದ ಮಾದರಿಯಲ್ಲಿ, ಮನಸ್ಸಿನ ನಾಟಕೀಯ ಆಗು ಹೋಗುಗಳನ್ನು ಅಷ್ಟೇ ನಾಟಕೀಯವಾಗಿ ಮಂಡಿಸಲೆತ್ನಿಸುವದು ಅಡಿಗರ ಕಾವ್ಯದ ಇನ್ನೊಂದು ತಂತ್ರ. (ಆ ವರೆಗಿನ ಕಾವ್ಯ ಕಟ್ಟುವ ರೀತಿಗಿಂತ

ಅಡಿಗರ ಈ ರೀತಿ ಭಿನ್ನವಾದ್ದರಿಂದ ಅವರ ಕಾವ್ಯವನ್ನು ಅರ್ಥೈಸಿಕೊಳ್ಳುವದಕ್ಕೆ ಒಂದು ಭಿನ್ನ ಸಿದ್ಧತೆಯು ಅಗತ್ಯಕ್ಕೆ ಒತ್ತು ಬಂದದ್ದೂ, ಬಹುಶಃ ಇದೇ ಕಾರಣದಿಂದ ಇರಬೇಕು.)

ಚಿಗುರಿ ಮರವಾಗಿ, ಹರವಾಗಿ ಬೆಳೆಯಬೇಕೆನ್ನುವದು, ಅದಕ್ಕೂ ಮೊದಲು, ಅಷ್ಟೇ ಆಳವಾಗಿ ಬೇರೂರಬೇಕು. ಹಾಗೆ ಊರಿದ ಬೇರುಗಳ ಮುಖಾಂತರವೇ, ತಾನು ಹರಡಿಕೊಳ್ಳಬೇಕೆಂದಿರುವ ಆಕಾರಕ್ಕೆ, ಆಕೃತಿಗೆ, ಹರವಿಗೆ ಅನುಗುಣವಾಗಿ, ಅದಕ್ಕೆ ತಕ್ಕುದಾದ ಜೀವ ದ್ರವ್ಯಗಳನ್ನು ಶೋಧಿಸಿಕೊಳ್ಳಬೇಕು. ಆ ಮುಖಾಂತರವೇ ತನ್ನನ್ನು ತಾನು ಪೋಷಿಸಿಕೊಂಡು, ಅರಗಿಸಿಕೊಂಡು, ಆಯಾ ಕಲ್ಪಿತ ಆಕೃತಿಗೆ ತಕ್ಕಂತೆ ಬೆಳೆಯಬೇಕು. ಈ ಆಶಯದ ವಿಸ್ತಾರವನ್ನೇ ಅಡಿಗರು, 'ಭೂತ' ಕವಿತೆಯಲ್ಲಿ ಹೇಳುವ ರೀತಿ.

"ಆಗೆವಾಗ್ಗೆ ಮೊದಲು ಕೋಶಾವಸ್ಥೆ ಮಣ್ಣು: ಕೆಳಕ್ಕೆ, ತಳಕ್ಕೆ ಗುದ್ದಲಿಯೊತ್ತಿ, ಕುಕ್ಕಿದರೆ ಕಂಡೀತು ಗೆರೆ ಮಿರಿವ ಚಿನ್ನದದಿರು. ಹೊರ ತೆಗೆದು ಸುಟ್ಟು ಸೋಸುವಪರಂಜಿ ವಿದ್ಯೆಗಳ ಇನ್ನಾದರೂ ಕೊಂಚ ಕಲಿಯಬೇಕು; ಹೊನ್ನ ಕಾಯಿಸಿ ಹಿಡಿದು ಬಡಿದಿಷ್ಟದೇವತಾ ವಿಗ್ರಹಕ್ಕೊಗ್ಗಿಸುವ ಅಸಲು ಕಸುಬು."

ಮತ್ತೆ ಮತ್ತೆ ಕಾಲ ಒಡ್ಡುವ ಆಹ್ವಾನಕ್ಕೆ ತಕ್ಕಂತೆ, ಕಾಲಕ್ಕೆ ತಕ್ಕ ಪೋಷಕ ದ್ರವ್ಯಗಳನ್ನು ಎತ್ತಿಕೊಂಡು, ಮತ್ತೆ ಮತ್ತೆ ಮನುಷ್ಯ, ತನ್ನನ್ನು ಕಟ್ಟಿಕೊಳ್ಳಬೇಕೆಂಬ ಸೂಚನೆ ಈ ಸಾಲುಗಳಲ್ಲಿದೆ: ಕಾಲನ ಆಹ್ವಾನದ ಹಿನ್ನೆಲೆಯಲ್ಲಿಯ ಈ ಸೂಚನೆಯನ್ನು ವಿಸ್ತರಿಸಿ, ತಮ್ಮ ಮುಂದಿನ ಒಂದು ಕವಿತೆಯಲ್ಲಿ ಹೇಳುತ್ತಾರೆ ಕವಿ; "ಚಲನೆಯೇ ಬದುಕು ನಿಶ್ಚಲತೆ ಮರಣ."

ಕಾಲ ತನ್ನ ಪ್ರವಾಹದಲ್ಲಿ ಬದುಕಿನ ಎಲ್ಲ ಪರಿಕರಗಳನ್ನು ಒದಗಿಸುತ್ತಿದ್ದರೂ ಜೀವನ ಧರ್ಮ ವಿವೇಕವನ್ನು, ವಿವೇಚನೆಯನ್ನು ಕಳೆದುಕೊಂಡ ಮನುಷ್ಯನ ಸ್ಥಿತಿಯನ್ನು ಇನ್ನೊಂದು ಪದ್ಯ(ಶರದ್ಗೀತ)ದಲ್ಲಿ, ಇನ್ನಷ್ಟು ಅರ್ಥಪೂರ್ಣವಾಗಿ, ನಾಟಕೀಯವಾಗಿ ಹೇಳುತ್ತಾರೆ ಕವಿ:

"ಈಗ ಈ ಲೋಕ ಅಸ್ತವ್ಯಸ್ತ! ಗಡಿಯಾರ ಬಿಚ್ಚಿ ಯಂತ್ರೋಪಯಂತ್ರಗಳ ಚೆಲ್ಲಾಪಿಲ್ಲಿ ಚೆಲ್ಲಿ, ಕೈ ಕಟ್ಟಿ ಕುಳಿತ ರಿಪೇರಿಯವನಂತೆ ಯಾವ ತಿರುಗಣೆ ಮೊಳೆಯನ್ನೆಲ್ಲಿ ಹಾಕಲಿ? ಮತ್ತೆ ಈ ಸುರುಳಿ ತಂತಿಯನ್ನೆಲ್ಲಿ ತುರುಕಲಿ? ಗಡಿಯಾರವಿದೆ, ಯಂತ್ರವಿದೆ, ಎಲ್ಲ ಇವೆ. ಇಲ್ಲ ಸಾವಯವ ಶಿಲ್ಪದ ಸಮಗ್ರೀಕರಣ ಬಲ."

ಒಂದು ದೃಷ್ಟಿಯಿಂದ 'ಭೂಮಿ ಗೀತ,' 'ಇಡಿ'ಯಾದ ಬದುಕಿಗೆ 'ಇಡಿ'ಯಾಗಿಯೇ ನೀಡಿದ ಪ್ರತಿಕ್ರಿಯಾತ್ಮಕ ಅಭಿವ್ಯಕ್ತಿಯಾದ್ದರಿಂದ ಮತ್ತು ಬಹಳ ಗಾಢವಾದ ಕಾಳಜಿಯ ಪ್ರತಿಫಲನವಾದ್ದರಿಂದ, ಇಲ್ಲಿಯ ಅಭಿವ್ಯಕ್ತಿಯಲ್ಲಿ ಸಾಂದ್ರತೆ ತೀರ ದಟ್ಟವಾಗಿದೆ. ಇಡಿಕಿರಿದಂತಿರುವ ಪ್ರತಿಮೆ, ಪ್ರತೀಕ, ನಾಟಕೀಯ ಸ್ವಗತ–ಲಹರಿಗಳಿಂದಾಗಿ, ಒಂದು ನೋಟ ಮಾತ್ರಕ್ಕೆ ಫಕ್ಕನೇ ಗೋಚರವಾಗಲಾರದಷ್ಟು ಹಿಂದೆ ಸರಿದು ನಿಲ್ಲುತ್ತದೆ ಅರ್ಥ. ಆದರೆ, ಒಂದು ಕಷ್ಟಸಾಧ್ಯ ಅಧ್ಯಯನದ ನಂತರ ಒಂದು ಸಾರ್ಥಕವಾದ ಅರ್ಥಪೂರ್ಣತೆಯನ್ನು ಬೆಳಗುವ ಶ್ರೀಮಂತಿಕೆ 'ಭೂಮಿ ಗೀತ'ದ ಬೆನ್ನಿಗಿದೆ. ಅನೇಕರ ಮೌಲ್ಯ ವಿವೇಚನೆಗಳ ಮಧ್ಯ ಅರಳಿ ನಿಂತ ಇಂಥ ಒಂದು ಶ್ರೀಮಂತ ಅರ್ಥಪೂರ್ಣತೆಯಿಂದಾಗಿಯೇ, 'ಭೂಮಿ ಗೀತ' ಇಂದಿಗೂ ಆಧುನಿಕ ಕನ್ನಡದ ಶ್ರೇಷ್ಠ ಪದ್ಯಗಳಲ್ಲೊಂದಾಗಿ ನಿಂತಿದೆ. ✿



ಅನರ್ಹತೆಯನ್ನು ಹೊಗಳುವುದೆಂದರೆ ನಿಜಾರ್ಥದಲ್ಲಿ ಅಪಹಾಸ್ಯ ಮಾಡಿದಂತೆಯೆ.

—ಹೆನ್ರಿ ಬ್ರಾಡ್‌ಹರ್ಸ್ಟ್

# ದೀಪ ಮತ್ತು ಪತಂಗ

○ ಎಸ್. ಡಿ. ಮೊರಬ

ಈ ಜಗತ್ತಿನಲ್ಲಿ ನಿತ್ಯವೂ ಅನೇಕ ವಿಸ್ಮಯ ಕಾರಕ ಸಂಗತಿಗಳು ಜರುಗುತ್ತಿರುತ್ತವೆ. ನಾವು ಅಂತಹುಗಳನ್ನು ಗಮನಿಸುವುದೇ ಅತಿ ವಿರಳ. ಸಾಮಾನ್ಯವಾಗಿ ಕೀಟಕಗಳು (ಹೆಚ್ಚಾಗಿ ಪತಂಗಗಳು) ದೀಪಗಳಿಗೆ ಆಕರ್ಷಿತವಾಗಿ ಬರುವದನ್ನು ನಿತ್ಯವೂ ನೋಡುತ್ತೇವೆ. ಆದರೆ ಅವು ಏಕೆ ಹಾಗೆ ಬರುತ್ತವೆ ಎಂದು ವಿಚಾರಿಸುವ ಗೋಜಿಗೆ ನಾವು ಹೋಗುವುದಿಲ್ಲ. ಗಂಡು ಕೀಟಕಗಳು ಮಾತ್ರ ದೀಪದೆಡೆಗೆ ಈ ರೀತಿಯಾಗಿ ಆಕರ್ಷಿತವಾಗುವುದರಲ್ಲಿ ಏನೋ ಒಂದು ರಹಸ್ಯವಡಗಿರಬಹುದಲ್ಲವೆ? ಬಹುಕಾಲದಿಂದ ವಿಸ್ಮಯಕರವಾಗಿ ಉಳಿದ ಈ ಕ್ರಿಯೆ ಇಂದು ಭೌತಶಾಸ್ತ್ರದಿಂದ ಸರಳವಾಗಿ ವಿವರಿಸಲ್ಪಡುತ್ತವೆ.

೧೯ನೇ ಶತಮಾನದ ಉತ್ತರಾರ್ಧದಲ್ಲಿ ಪೆನ್ಸಿಲ್ವಾನಿಯಾದ ಎಸ್. ಡಬ್ಲ್ಯು. ಫ್ರಾಸ್ಟ್ ಎಂಬ ವಿಜ್ಞಾನಿಯು ಈ ವಿಷಯವಾಗಿ ವೈಜ್ಞಾನಿಕ ಅಧ್ಯಯನ ಮಾಡಿದವರಲ್ಲಿ ಮೊದಲಿಗ. ಅವನು ಕಂಡುಹಿಡಿದ ಅನೇಕ ವಿಷಯಗಳಲ್ಲಿ ಒಂದು ಮಹತ್ವದ ಸಂಗತಿಯೆಂದರೆ ಪತಂಗಗಳು ಕಲ್ಲೆಣ್ಣೆ ದೀಪಕ್ಕಿಂತಲೂ ಮೇಣಬತ್ತಿಯ ದೀಪದೆಡೆಗೆ ಹೆಚ್ಚು ಆಕರ್ಷಿತವಾಗುತ್ತವೆಂಬುದು. ನಂತರ ಫ್ರೆಂಚ್ ಕೀಟತಜ್ಞ ಜೆ. ಎಚ್. ಫ್ಯಾಬರ್ ಎಂಬವನು ಒಂದು ಆಕಸ್ಮಿಕ ಘಟನೆಯಿಂದ ಈ ವಿಷಯವಾಗಿ ರಹಸ್ಯವೊಂದನ್ನು ಕಂಡುಹಿಡಿದನು. ಆ ಆಕಸ್ಮಿಕ ಘಟನೆ ಈ ರೀತಿಯಾಗಿದೆ: ಒಂದು ದಿನ ಮುಂಜಾನೆ ಫ್ಯಾಬರ್ ಅರಣ್ಯದಲ್ಲಿಯ ತನ್ನ ಕುಟೀರದ ಹತ್ತಿರ ಅತಿ ದೊಡ್ಡದಾದ (೧೪ ಸೆಂಟಿ ಮೀಟರ್ ಉದ್ದದ ರೆಕ್ಕೆಯ) ಹೆಣ್ಣು ಪತಂಗವೊಂದನ್ನು ಹಿಡಿದನು. ಅದನ್ನು ಕೂಡಲೇ ಗಾಜಿನ ಘಂಟಾಕಾರದ ಪಾತ್ರೆಯಲ್ಲಿ ಹಾಕಿ ಇಟ್ಟ. ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಅವನ ಕುಟೀರಕ್ಕೆ ಅದೇ ಜಾತಿಯ ಗಂಡು ಪತಂಗಗಳು ಮುತ್ತಿಗೆ ಹಾಕಿಬಿಟ್ಟವು. ಅವುಗಳನ್ನು ನೋಡಿದೊಡನೆ ಅವನಿಗೆ ತಾನು ಮುಂಜಾನೆ ಹಿಡಿದಿಟ್ಟ ಹೆಣ್ಣು ಪತಂಗದ ನೆನಪಾಯಿತು. ಕೈಯಲ್ಲಿ ಮೇಣಬತ್ತಿಯ ದೀಪವನ್ನು ಹಿಡಿದುಕೊಂಡು ಹೆಣ್ಣು ಪತಂಗವನ್ನಿಟ್ಟ ಕೋಣೆಗೆ ನಡೆದನು. ಅಲ್ಲಿ ಗಂಡು ಪತಂಗಗಳು ಹೆಣ್ಣು ಪತಂಗವನ್ನಿಟ್ಟದ್ದ ಗಾಜಿನ ಪಾತ್ರೆಯ ಸುತ್ತ ಹಾರಾಡುತ್ತಿದ್ದವು. ಆ ಪಾತ್ರೆಯ ಮೇಲೆ ಕುಳಿತು, ಮೇಲಕ್ಕೆ ಹಾರಿ ಮತ್ತೆ ಪಾತ್ರೆಗೆ ಬರುತ್ತಿದ್ದವು. ಮೇಣಬತ್ತಿಯ ದೀಪವನ್ನು ಅಲ್ಲಿಗೆ ಒಯ್ದೊಡನೆ ಆ ಗಂಡು ಪತಂಗಗಳು ದೀಪದ ಕಡೆಗೆ ಬರಹತ್ತಿದವಲ್ಲದೆ ದೀಪಕ್ಕೆ ತಮ್ಮ ರೆಕ್ಕೆಯನ್ನು ಬಡಿಯಿಸಿ ಅದನ್ನು ಆರಿಸುವ ಪ್ರಯತ್ನ ಮಾಡುತ್ತಿದ್ದವು. ಗಾಜಿನ ಪಾತ್ರೆಯಿಂದ ದೀಪಕ್ಕೂ, ದೀಪದಿಂದ ಗಾಜಿನ ಪಾತ್ರೆಗೂ ಹಾರುತ್ತಿದ್ದವು. ಫ್ಯಾಬರ್ ಗಮನಿಸಿದ ಮುಖ್ಯ ಸಂಗತಿ ಎಂದರೆ ಗಂಡು ಪತಂಗಗಳು ಗಾಜಿನ ಪಾತ್ರೆಗಿಂತ ಮೇಣಬತ್ತಿಯ ದೀಪದೆಡೆಗೆ ಹೆಚ್ಚಾಗಿ ಹಾರಿ ಬರುತ್ತಿದ್ದವು. ಗಂಡು ಪತಂಗಗಳು ಹೆಣ್ಣು ಪತಂಗವಿರುವ ಸ್ಥಾನವನ್ನು ಹೇಗೆ ಗುರುತಿಸಿದವೆಂಬುದು ಫ್ಯಾಬರ್‌ಗೆ ಆಶ್ಚರ್ಯವನ್ನುಂಟುಮಾಡಿತು. ಅವನ ಕುಟೀರವು ದೊಡ್ಡ ದೊಡ್ಡ ಮರ ಹಾಗೂ ಕಂಟಿಗಳಿಂದ ಸಂಪೂರ್ಣ ಆವೃತವಾಗಿತ್ತು. ರಾತ್ರಿಯಂತೂ ಕಗ್ಗತ್ತಲಾಗಿತ್ತು. ಈ ಪ್ರಯೋಗವನ್ನು ಅವನು ಅನೇಕ ಬಾರಿ ಮಾಡಿದರೂ ಅದೇ ಪರಿಣಾಮವನ್ನೇ ಗಮನಿಸಿದನು. ಗಂಡು ಪತಂಗಗಳ ಆಕರ್ಷಣೆಗೆ ಹೆಣ್ಣು ಪತಂಗದ ಲೈಂಗಿಕ ವಾಸನೆ (ಫೆರೊಮೋನ್ ಎಂಬ ಜೈವಿಕ ರಸಾಯನ ವಸ್ತು)ಯೊಂದೇ

ಕಾರಣವಾಗಿರಲಿಕ್ಕಿಲ್ಲವೆಂದು ಅವನು ಭಾವಿಸಿದನು. ಹೆಣ್ಣು ಪತಂಗವು ರೇಡಿಯೋ ತರಂಗಗಳನ್ನೇನಾದರೂ ಉತ್ಸರ್ಜಿಸುವದೋ ಎಂದು ಪರೀಕ್ಷಿಸಲು ಅದನ್ನು "ಫರಡೇ ಪಂಜರ"ದಲ್ಲಿ ಇರಿಸಿದನು. ಅಂತಹ ತರಂಗಗಳನ್ನು ಈ ಪಂಜರವು ಹೀರಿಕೊಂಡು ಬಿಡುತ್ತದೆ. ಆಗಲೂ ಗಂಡು ಪತಂಗಗಳು ಮೊದಲಿನಂತೆಯೇ ಬಂದವು. ಇದರಿಂದ ರೇಡಿಯೋ ತರಂಗಗಳು ಆಕರ್ಷಣೆಗೆ ಕಾರಣವಲ್ಲವೆಂಬುದು ಕಂಡು ಬಂತು. ಕೀಟಕಗಳಲ್ಲಿ ಇಂತಹ ಆಕರ್ಷಣೆಗೆ ಕಾರಣವಾದುದು ಕೇವಲ ಲೈಂಗಿಕ ವಾಸನೆಯೋ ಅಥವಾ ಮಾನವ ನೇತ್ರಕ್ಕೆ ಗೋಚರವಾದ ಯಾವುದೋ ಕಿರಣ ಸಮುಚ್ಚಯವೋ ಎಂಬುದು ಹಾಗೆಯೆ ಉಳಿಯಿತು.

ತದನಂತರ ಅನೇಕ ಸಂಶೋಧಕರು ಈ ದಿಶೆಯಲ್ಲಿ ಕಾರ್ಯ ಪ್ರವೃತ್ತರಾದರೂ ಸಹಿತ ತೀರ ಇತ್ತೀಚಿನ ದಿನಗಳಲ್ಲಿ ನಿಶ್ಚಿತವಾಗಿ ಕಂಡು ಬಂದದ್ದೇನೆಂದರೆ, ಫ್ಯಾಬರ್ ಭಾವಿಸಿದಂತೆ ಮಾನವ ನೇತ್ರಕ್ಕೆ ಗೋಚರವಾಗದ ಕಿರಣಗಳೇ ಗಂಡು ಪತಂಗಗಳ (ಸಾಮಾನ್ಯವಾಗಿ ಕೀಟಕಗಳ) ಆಕರ್ಷಣೆಗೆ ಕಾರಣ. ಮೇಣಬತ್ತಿಯು ಉರಿಯುವಾಗ ಅದರಲ್ಲಿಯ ಕಾಯ್ದ ಹೈಡ್ರೊ-ಕಾರ್ಬನ್ ಅಣುಗಳು ಉತ್ಸರ್ಜಿಸುವ ದೀರ್ಘ ತರಂಗ ದೂರದ ರಕ್ತಾತೀತ ಕಿರಣಗಳೇ (far infrared rays) ಗಂಡು ಪತಂಗಗಳನ್ನು ಆಕರ್ಷಿಸುತ್ತವೆ. ಇಂತಹವೇ ಕಿರಣಗಳು ಹೆಣ್ಣು ಪತಂಗಗಳಿಂದ ದ್ರವಿಸಲ್ಪಟ್ಟ ಫೆರೋ-ಮೋನ್ ಅಣುಗಳಿಂದ ಉತ್ಪತ್ತಿಯಾಗುತ್ತವೆ. ಒಂದು ಜಾತಿಯ ಹೆಣ್ಣು ಕೀಟವು ದ್ರವಿಸುವ ಫೆರೊಮೋನ್ ಮತ್ತೊಂದು ಜಾತಿಯ ಹೆಣ್ಣು ಕೀಟವು ದ್ರವಿಸುವ ಫೆರೊಮೋನ್‌ಗಿಂತ ಭಿನ್ನ-ವಾಗಿರುತ್ತದೆ. ಇದರಿಂದ ಒಂದು ಫೆರೊ-ಮೋನ್‌ದಿಂದ ಉತ್ಸರ್ಜಿತವಾದ ವಿಶಿಷ್ಟ ಫಾರ್ ಇನ್‌ಫ್ರಾರೆಡ್ ಕಿರಣಗಳು ಅದೇ ಜಾತಿಯ ಗಂಡು ಕೀಟಕಗಳಿಗೆ ಮಾತ್ರ ನಿಶ್ಚಿತ ಸಂದೇಶವನ್ನು ತಲುಪಿಸುತ್ತವೆ. ಬೇರೆ ಜಾತಿಯ ಕೀಟಕಗಳು ಈ ಸಂದೇಶವನ್ನು ಗ್ರಹಿಸುವುದೇ ಇಲ್ಲ. ಯೋಗ್ಯ ವಯಸ್ಸಿನ ಹೆಣ್ಣು ಕೀಟಕಗಳು ದಿನದ ನಿಶ್ಚಿತ ಸಮಯದಲ್ಲಿ ಕೆಲ ವೇಳೆಯ ವರೆಗೆ ಲೈಂಗಿಕ ರಾಸಾಯನಿಕವನ್ನು ಉತ್ಸರ್ಜಿಸುತ್ತವೆ.

ಹೆಣ್ಣು ಪತಂಗಗಳು ತಮ್ಮ ದೇಹದ ಹಿಂಭಾಗದಲ್ಲಿರುವ ಒಂದು ಗ್ರಂಥಿಯಿಂದ ಅಸಿಟೇಟ್ ಅಣುಗಳನ್ನು ದ್ರವಿಸುತ್ತದೆ. ಈ ಅಣುಗಳಿಗೆ ಫೆರೊಮೋನ್ ಅಥವಾ ಲೈಂಗಿಕ ವಾಸನೆ ಎಂದು ಕರೆಯುವರು. ಈ ರಾಸಾಯನಿಕವು ವಾತಾವರಣದಲ್ಲಿ ಲೇಸರ ಕ್ರಿಯೆಗೆ ಒಳಪಟ್ಟು ಫಾರ್ ಇನ್‌ಫ್ರಾರೆಡ್ ಕಿರಣಗಳನ್ನು ಉತ್ಪಾದಿಸುತ್ತದೆ. ಗಂಡು ಪತಂಗಗಳು ಈ ಕಿರಣಗಳನ್ನು ತಮ್ಮ ಅಂಟೆನಾ(ಮೀಸೆ)ಗಳಿಂದ ಗ್ರಹಿಸಿ ಹೆಣ್ಣು ಪತಂಗದ ಸ್ಥಾನವನ್ನು ಗುರುತಿಸುತ್ತವೆ.

ಹೆಣ್ಣು ಪತಂಗದಿಂದ ಹೊಮ್ಮಿದ ಫೆರೊ-ಮೋನ್ ಅಣುಗಳು ವಾತಾವರಣದಲ್ಲಿಯ ನೀಲಿ ಮತ್ತು ನೇರಳಾತೀತ ಕಿರಣಗಳನ್ನು ಹೀರಿಕೊಂಡು ಹೆಚ್ಚಿನಶಕ್ತಿ ಮಟ್ಟಕ್ಕೆ (excited states) ಹೋಗುತ್ತವೆ. (ರಾತ್ರಿಯಲ್ಲಿ ವಾತಾವರಣದ ಮೇಲ್ಭಾಗದಲ್ಲಿ ನಡೆಯುವ ಕೆಲ ಕ್ರಿಯೆಗಳಿಂದ ನೀಲಿ ಮತ್ತು ನೇರಳಾತೀತ ಕಿರಣಗಳು ಉತ್ಪನ್ನವಾಗುತ್ತವೆ. ಇಂತಹ ಅಲ್ಪ ಪ್ರಕಾಶಕ್ಕೆ airglow ಎಂದು ಹೆಸರು) ವಾಯುವಿನಲ್ಲಿ ಪ್ರಸಾರವಾದಂತೆ ಹೆಚ್ಚು ಹೆಚ್ಚು ಫೆರೊಮೋನ್ ಅಣುಗಳು ಹೆಚ್ಚಿನ ಶಕ್ತಿ ಮಟ್ಟಕ್ಕೆ ಹೋಗಿ ಕೆಲ ಸಮಯದಲ್ಲಿ ಹೆಚ್ಚಿನ ಶಕ್ತಿ ಮಟ್ಟದಲ್ಲಿಯ ಈ ಅಣುಗಳ ಸಂಖ್ಯೆ ಕೆಳಗಿನ ಶಕ್ತಿ ಮಟ್ಟದಲ್ಲಿಯ ಅಣುಗಳ ಸಂಖ್ಯೆಗಿಂತ ಬಹಳ ಹೆಚ್ಚಾಗುವುದು. ಇಂತಹ ಸ್ಥಿತಿಯಲ್ಲಿ ಒಂದು ಫೆರೊಮೋನ್ ಅಣು ಕೆಳಗಿನ ಶಕ್ತಿ ಮಟ್ಟಕ್ಕೆ ಹೋದೊಡನೆ ಅದರಿಂದ ಹೊಮ್ಮಿದ ಇನ್‌ಫ್ರಾರೆಡ್ ಕಿರಣದ ಪ್ರಭಾವದಿಂದ ಉಳಿದೆಲ್ಲ ಅಣುಗಳು ಒಮ್ಮೆಲೇ ಅದೇ ಪ್ರಕಾರದ ಕಿರಣಗಳನ್ನು ಉತ್ಸರ್ಜಿಸುತ್ತವೆ. ಇದರಿಂದ ಇನ್‌ಫ್ರಾರೆಡ್ ಕಿರಣಗಳ ಕಾಂತಿ ಬಹಳ ಆಗುವದು. (ಇದೇ ತತ್ವದಿಂದ ಲೇಸರ್ ಕಿರಣಗಳನ್ನು ಉತ್ಪತ್ತಿಸಲಾಗುವುದು.) ಫೆರೊ-ಮೋನ್ ಅಣುಗಳು ಹವೆಯಲ್ಲಿ ಪ್ರಸಾರವಾದಂತೆ ಇಂತಹ ಕಿರಣಗಳನ್ನು ಉತ್ಸರ್ಜಿಸುತ್ತ ಹೋಗುತ್ತವೆ. ಹೆಣ್ಣು ಪತಂಗದ ಸಮೀಪದಲ್ಲಿ ಉತ್ಪತ್ತಿ

ಯಾದ ಕಿರಣಗಳ ತರಂಗ ದೂರ ೧೬ ರಿಂದ ೧೮ ಮೈಕ್ರೋಮೀಟರ್ ಇರುತ್ತದೆ. ಹೆಣ್ಣು ಪತಂಗದಿಂದ ದೂರ ಹೋದಂತೆ ಫೆರೊ-ಮೋನ್‌ದ ಉಷ್ಣತೆ ಮತ್ತು ಸಾಂದ್ರತೆ ಕಡಿಮೆಯಾಗುವುದರಿಂದ ಉತ್ಪತ್ತಿಯಾಗುವ ಕಿರಣಗಳ ತರಂಗ ದೂರ ಕಡಿಮೆಯಾಗುವದು (ಕಂಪನಾಂಕ freqency ಹೆಚ್ಚಾಗುವುದು) ಗಂಡು ಪತಂಗಗಳ ಮೀಸೆ ಹಾಗೂ ಅಸ್ಥಿಗಳು ಇಂತಹ ಕಾರಣಗಳನ್ನು ಗ್ರಹಿಸಲು ಯೋಗ್ಯ ವಾಗುವಂತೆ ರಚಿತವಾಗಿವೆ. ಇವು ಕಡಿಮೆ ತರಂಗ ದೂರದ ಪ್ರಕಾಶದಿಂದ ಹೆಚ್ಚು ತರಂಗ ದೂರದ ಪ್ರಕಾಶದ ಕಡೆಗೆ ಹೋಗುತ್ತ ಹೆಣ್ಣು ಪತಂಗದ ಸ್ಥಾನವನ್ನು ತಲುಪುತ್ತವೆ.

ಪ್ರಕಾಶದ ಎಲ್ಲ ಆಕರಗಳು ಕಣ್ಣಿಗೆ ಕಾಣುವ ಹಾಗೂ ಕಾಣದ ಕಿರಣಗಳನ್ನು ಹೊಮ್ಮಿಸುತ್ತವೆ. ಇಂತಹ ಪ್ರಕಾಶವನ್ನು ಕಾಜಿನ ಪಟ್ಟಕದಲ್ಲಿ (Prism) ಹಾಯಿಸಿದಾಗ ವರ್ಣಪಟಲವು ದೊರೆಯುವದು. ಪಟ್ಟಕವು ಪ್ರಕಾಶದ ಕಿರಣಗಳನ್ನು ಅವುಗಳ ತರಂಗ ದೂರಕ್ಕನುಗುಣ ವಾಗಿ ವಿಭಜಿಸಿ ಹೊಂದಿಸುತ್ತವೆ. ಈ ವರ್ಣ ಪಟಲದಲ್ಲಿ ಕಣ್ಣಿಗೆ ಕಾಣುವ ಭಾಗವೆಂದರೆ ಕಾಮನಬಿಲ್ಲಿನಲ್ಲಿಯ ಏಳು ಬಣ್ಣಗಳನ್ನೊಳ ಗೊಂಡ ದೃಶ್ಯ ಪ್ರಕಾಶ. ಕೆಂಪು ಕಿರಣಗಳ ತರಂಗ ದೂರಕ್ಕಿಂತ ಹೆಚ್ಚಿನ ತರಂಗ ದೂರವು ಳ್ಳವು ಇನ್‌ಫ್ರಾರೆಡ್, ನೇರಳೆ ಕಿರಣಗಳಿಂತ ಕಡಿಮೆ ತರಂಗ ದೂರವುಳ್ಳವು. ಇವೆರಡೂ ಪ್ರಕಾರದ ಕಿರಣಗಳು ಮಾನವ ನೇತ್ರಕ್ಕೆ ಗೋಚರವಾಗುವುದಿಲ್ಲ. ಇನ್‌ಫ್ರಾರೆಡ್ ಕಿರಣ ಗಳಿಗೆ ಉಷ್ಣ ಕಿರಣಗಳೆಂದೂ ಕರೆಯುವರು. ಸೂರ್ಯ, ಆರ್ಕ್, ಸ್ಪಾರ್ಕ್ ದೀಪಗಳಿಂದ ಸಾಕಷ್ಟು ultraviolet ಕಿರಣಗಳು ಬರುತ್ತವೆ. ಈ ಕಿರಣಗಳು ಎಲ್ಲ ಪ್ರಾಣಿಗಳ ನೇತ್ರಕ್ಕೆ ಹಾನಿ ಕಾರಕ. ಮೇಣಬತ್ತಿ ಮತ್ತು ಇತರ ಎಣ್ಣೆ ದೀಪ ಗಳಿಂದ ದೃಶ್ಯ ಪ್ರಕಾಶದ ಜೊತೆಗೆ ಬಹಳಷ್ಟು ಇನ್‌ಫ್ರಾರೆಡ್ ಕಿರಣಗಳು ಬರುತ್ತವೆ. ಫೆರೊ-ಮೋನ್ ಲೇಸರ ಕ್ರಿಯೆಗೆ ಒಳಪಟ್ಟು ಹೊಮ್ಮಿಸುವಂತಹ ಕಿರಣಗಳನ್ನೇ ಈ ದೀಪ ಗಳೂ ಉತ್ಪಾದಿಸುತ್ತವೆ. ಗಂಡು ಪತಂಗಗಳು ಇಂತಹ ದೀಪಗಳನ್ನು ಹೆಣ್ಣು ಪತಂಗವೆಂವೇ ಭಾವಿಸಿ ಅವುಗಳೆಡೆ ನೇರವಾಗಿ ನುಗ್ಗುತ್ತವೆ.

ಪತಂಗಗಳು ವಿದ್ಯುದ್ದೀಪ (ಬಲ್ಬು ಮತ್ತು ಟ್ಯೂಬ್‌ಲೈಟ್)ಗಳಿಂದಲೂ ಆಕರ್ಷಿತವಾಗು ತ್ತವೆ. ಆದರೆ ಈ ದೀಪಗಳ ಹತ್ತಿರ ಅವು ಮಾಡುವ ಚಲನವಲನ ಮೇಣಬತ್ತಿಯ ಹತ್ತಿರ ಮಾಡುವುದಕ್ಕಿಂತ ಭಿನ್ನವಾದುದು. ಮೇಣ ಬತ್ತಿಯ ದೀಪಕ್ಕೆ ಅವು ನೇರವಾಗಿ ನುಗ್ಗುತ್ತವೆ. ಮತ್ತು ದೀಪವನ್ನು ಪಕ್ಕಗಳಿಂದ ಬಡಿಯುತ್ತವೆ. ವಿದ್ಯುದ್ದೀಪಗಳಿಗೆ ನೇರವಾಗಿ ಹೋಗದೆ ಅವುಗಳ ಕೆಳಗೆ ವೃತ್ತಾಕಾರದಲ್ಲಿ ಹಾರುತ್ತವೆ. ಇದಕ್ಕೆ ಕಾರಣವೆಂದರೆ ವಿದ್ಯುದ್ದೀಪದ ಕಿರಣಗಳು ಸಮೀಪದಲ್ಲಿದ್ದ ಫೆರೊಮೋನ್ ಅಣುಗಳನ್ನು ಉದ್ರೇಕಿಸಿ ತೀವ್ರತರವಾದ ಇನ್‌ಫ್ರಾರೆಡ್ ಕಿರಣಗಳನ್ನು ಬಿಡುವಂತೆ ಮಾಡುತ್ತವೆ. ನಾವು ಉಪಯೋಗಿಸುವ 60 Hertz a. c. ಯಿಂದ ಈ ಕಿರಣಗಳ ತೀವ್ರತೆ ಇನ್ನೂ ಹೆಚ್ಚಾಗುವುದು. (ನಾವು ಉಪಯೋಗಿಸುವ ವಿದ್ಯುತ್ ತಂತಿಯಲ್ಲಿ ಪ್ರತಿ ಸೆಕಂದಿಗೆ ೬೦ ಸಾರೆ ದಿಕ್ಕು ಬದಲಾಯಿಸು ವದು). ಇದು ಗಾಳಿಯಲ್ಲಿ ತೇಲುವ ಫೆರೊ-ಮೋನನ್ನು ಹೋಲುತ್ತದೆ. ಮೇಣಬತ್ತಿಯ ದೀಪವು ಹೆಣ್ಣು ಪತಂಗವೆಂದೇ ಭ್ರಮಿಸಲ್ಪಡು ತ್ತದೆ. ವಿದ್ಯುದ್ದೀಪವು ಹೆಣ್ಣು ಪತಂಗವು ಇಲ್ಲೆಲ್ಲೋ ಸಮೀಪದಲ್ಲಿ ಇದೆ ಎಂದು ಸೂಚಿಸು ತ್ತದೆ

ಕೀಟಗಳ ದೇಹ ರಚನೆ ಮತ್ತು ಅವುಗಳ ನಡ ತೆಯ ಬಗ್ಗೆ ಸಾಕಷ್ಟು ಅಧ್ಯಯನವಾಗಿದೆ. ಅವು ಗಳ ದೇಹರಚನೆ ಇಂತಹ ಕಿರಣಗಳನ್ನು ಉತ್ಪಾ ದಿಸಲು ಮತ್ತು ಗ್ರಹಿಸಲು ಅನುಕೂಲವಾಗು ವಂತೆ ಇದೆ. ಗ್ರಹಣ ಕ್ರಿಯೆಯು ಬಹಳ ಜಟಿಲ ವಾಗಿದ್ದು ಅದರಲ್ಲಿ ಇನ್ನೂ ಸಂಶೋಧನೆಯಾಗ ಬೇಕಾಗಿದೆ. ಈ ವಿಷಯದಲ್ಲಿ ಕೀಟಶಾಸ್ತ್ರ ಮತ್ತು ಭೌತಶಾಸ್ತ್ರಗಳೆರಡೂ ಸಮ್ಮಿಲಿತವಾಗುತ್ತವೆ. ಇಂತಹ ಸಮ್ಮಿಲನವು ಲಕ್ಷಾಂತರ ಕೀಟಗಳ ಮಧ್ಯೆ ನಿತ್ಯ ನಡೆಯುವ ವಿಸ್ಮಯಕರ ಸಂದೇಶ ಪ್ರೇಷಣ ಮತ್ತು ಗ್ರಹಣ ಕ್ರಿಯೆಗಳ ರಹಸ್ಯ ವನ್ನು ವಿವರಿಸಬಹುದು. (ಸಾಧಾರ)

# ಇರುಳುಗುರುಡುತನ

ಚಿತ್ರ-ಲೇಖನ : ಡಾ. ಎಚ್. ಎಸ್. ಮೋಹನ

೨೬ ವರ್ಷದ ಮಹಮದನು ಕೊಲ್ಲಿ ರಾಷ್ಟ್ರದಲ್ಲಿ ಉದ್ಯೋಗದಲ್ಲಿರುವ ಕೇರಳದ ತರುಣ. ಚಿಕ್ಕಂದಿನಿಂದಲೂ ಅವನಿಗೆ ಕತ್ತಲೆಯಲ್ಲಿ ಮತ್ತು ರಾತ್ರಿ ಸಮಯದಲ್ಲಿ ದೃಷ್ಟಿ ಕಡಿಮೆ. ಎರಡು ಮೂರು ಬಾರಿ ಎಲ್ಲೆಲ್ಲಿಯೋ ಪರೀಕ್ಷಿಸಿ, ಕನ್ನಡಕ ಬದಲು ಮಾಡಿದರೂ ಪ್ರಯೋಜನವಾಗಲಿಲ್ಲ. ಈ ಬಾರಿ ಊರಿಗೆ ಬಂದಾಗ ವಿವರವಾಗಿ ಪರೀಕ್ಷೆ ಮಾಡಿಸಿಕೊಳ್ಳುವ ಎಂದು ನಮ್ಮ ಆಸ್ಪತ್ರೆಗೆ ಬಂದ. ಇತ್ತೀಚೆಗೆ ಅವನಿಗೆ ರಾತ್ರಿ ಸಮಯದಲ್ಲಿ ಏನೇನೂ ಕಾಣುವುದಿಲ್ಲ. ಅಲ್ಲದೆ ಹಗಲು ಸಹಿತ ಕಾಣುವುದು ಮೊದಲಿಗಿಂತ ಕಡಿಮೆಯಾಗಿದೆ ಎಂದು ಹೇಳಿದ. ವಿವರವಾಗಿ ಪರೀಕ್ಷಿಸಿದಾಗ ಅವನ ದೃಷ್ಟಿ ೩೫-೪೦% ಕಡಿಮೆಯಾಗಿದೆ ಎಂದು ಗೊತ್ತಾಯಿತು. ದೃಷ್ಟಿ ಕ್ಷೇತ್ರ ಬಹಳ ಕಿರಿದಾಗಿತ್ತು. ಇದೆಲ್ಲದರ ಕಾರಣ-ರಾತ್ರಿ ದೃಷ್ಟಿಮಾಂದ್ಯದ ಬಹು ಪ್ರಮುಖ ಕಾರಣವಾದ ರೆಟಿನೈಟಿಸ್ ಪಿಗ್‌ಮೆಂಟೊಸಾ ಕಾಯಿಲೆ ಎಂದು. ಜೀವನದಲ್ಲಿ ಬಹಳ ಮಹತ್ವಾಕಾಂಕ್ಷೆಯಿಟ್ಟುಕೊಂಡಿರುವ ಈ ತರುಣ ಇದೇ ಕಾಯಿಲೆಯಿಂದ ಬಳಲುತ್ತ ಚಿಕಿತ್ಸೆಯ ಕನಸನ್ನು ಕಾಣುತ್ತ, ಬಾಳಿನ ಸಂಜೆಯು ಮೊದಲೇ ಅಂಧರ ಗುಂಪಿಗೆ ಸೇರುತ್ತಾನಲ್ಲ ಎಂದು ಬಹಳ ವ್ಯಥೆಯಾಯಿತು.

ರಾತ್ರಿ ದೃಷ್ಟಿಮಾಂದ್ಯ (ಇರುಳುಗುರುಡುತನ) ಎಂದರೆ ವ್ಯಕ್ತಿಗೆ ಕಡಿಮೆ ಬೆಳಕು ಇರುವಾಗ, ಎಲ್ಲರಿಗೆ ಕಾಣುವಂತೆ ಕಾಣುವುದಿಲ್ಲ ಎಂದರ್ಥ. ಇದಕ್ಕೆ ಮುಖ್ಯವಾಗಿ ಕಾರಣಗಳು ಎರಡು, ೧) ರೆಟಿನೈಟಿಸ್ ಪಿಗ್‌ಮೆಂಟೋಸಾ ಹಾಗೂ ೨) 'ಎ' ಜೀವಸತ್ವದ ಕೊರತೆ.

ವ್ಯಕ್ತಿಯು ಬಾಲ್ಯದಲ್ಲಿಯೇ ಕಾಣಿಸಿಕೊಳ್ಳುವ



ರೆಟಿನೈಟಸ್ ಪಿಗ್ಮೆಂಟೋಸಾದಲ್ಲಿ ಅಕ್ಷಿಪಟಲದ ಹೊರಭಾಗದಲ್ಲಿರುವ ಕಪ್ಪು ಬಣ್ಣದ ಚುಕ್ಕೆಗಳು



'ಎ' ಜೀವಸತ್ವದ ಕೊರತೆಯಲ್ಲಿ ಕಂಜಂಕ್ಟೈವದಲ್ಲಿರುವ ಸಣ್ಣ ಸಣ್ಣ ತುಣುಕುಗಳು (ಬಿಟಾಟ್ ಸ್ಪಾಟ್‌ಗಳು)

ಈ ಕಾಯಿಲೆ ನಿಧಾನವಾಗಿ ಮುಂದುವರಿಯುತ್ತಾ, ಮಧ್ಯವಯಸ್ಸಿನಲ್ಲಿ ಇಲ್ಲವೇ ಇಳಿವಯಸ್ಸಿನಲ್ಲಿ ವ್ಯಕ್ತಿಯನ್ನು ಸಂಪೂರ್ಣ ಕುರುಡನನ್ನಾಗಿ ಮಾಡುತ್ತದೆ. ಎಲ್ಲರ ಅಕ್ಷಿಪಟಲದಲ್ಲಿ 'ಶಲಾಕೆ' (rods) 'ಶಂಖ' (cones) ಎಂಬ ದೃಷ್ಟಿಯ ಬಹು ಸೂಕ್ಷ್ಮ ಅಂಗಗಳಿರುತ್ತವೆ. ದೃಷ್ಟಿಯ ಎಲ್ಲ ಅಂಶಗಳು ಸರಿಯಿರಬೇಕಾದರೆ ಇವುಗಳು ಆರೋಗ್ಯಯುತವಾಗಿರಬೇಕು ಹಾಗೂ ಒಂದು ವ್ಯವಸ್ಥೆಯ ಪ್ರಕಾರ ವಿವಿಧ ಭಾಗಗಳಲ್ಲಿ ಹರಡಿಕೊಂಡಿರಬೇಕು. ಈ ಕಾಯಿಲೆಯಲ್ಲಿ, ಕತ್ತಲೆಯಲ್ಲಿ ವ್ಯಕ್ತಿಯ ದೃಷ್ಟಿ ಸರಿ ಇರಲು ಬಹಳ ಮುಖ್ಯವಾದ 'ಶಲಾಕೆ'ಗಳು ಕ್ಷೀಣವಾಗಿ, ರೋಗಿಗೆ ರಾತ್ರಿ ಅಥವಾ ಕತ್ತಲಿನಲ್ಲಿ ಕಾಣುವುದಿಲ್ಲ. ನಾವು ಯಾವುದೋ ವಸ್ತುವನ್ನು ನೇರವಾಗಿ ನೋಡುವಾಗ ನಾವು ದಿಟ್ಟಿಸಿರುವ ವಸ್ತುವಲ್ಲದೆ, ಅದರ ಬದಿಯ ಭಾಗದಲ್ಲಿರುವ ವಸ್ತುಗಳೂ ನಾವು ನೋಡದಿದ್ದರೂ ನಮಗೆ ಕಾಣುತ್ತಿರುತ್ತವೆ. ಆದರೆ ಈ ಕಾಯಿಲೆ ಮುಂದುವರಿದಂತೆ ಈ ಬದಿಯ ಭಾಗದ ದೃಷ್ಟಿ ಕಡಿಮೆಯಾಗುತ್ತಾ ಹೋಗುತ್ತದೆ.

ಕಣ್ಣಿನ ಅಕ್ಷಿಪಟಲವನ್ನು ವಿವರವಾಗಿ ಪರೀಕ್ಷಿಸಿದಾಗ ಗೊತ್ತಾಗುವ ಅಂಶವೆಂದರೆ ಅಕ್ಷಿಪಟಲದ ಹೊರಗಿನ ಭಾಗಗಳಲ್ಲಿ ಒಂದು ರೀತಿಯ ಕಪ್ಪು ಬಣ್ಣದ ವಿವಿಧ ಆಕಾರದ ಚುಕ್ಕೆಗಳು (ಪಿಗ್‌ಮೆಂಟ್) ಎಲ್ಲ ಕಡೆಗೂ ಇರುತ್ತವೆ. ಬಹಳ ಮುಂದುವರಿದ ರೋಗವಾದರೆ—ಎಲ್ಲರಲ್ಲಿ ಕೆಂಪು ಮಿಶ್ರಿತ ಹಳದಿ ಬಣ್ಣದಲ್ಲಿರುವ ಆಪ್ಟಿಕ್ ನರವು ಬಿಳಿಯ ಬಣ್ಣದ್ದಾಗಿ ತೋರುತ್ತದೆ. ಆಪ್ಟಿಕ್ ನರವು ನಾಶವಾದ ಲಕ್ಷಣ ಇದು. ಅಲ್ಲದೆ ಅಕ್ಷಿಪಲಟದ ಅಪಧಮನಿಗಳು ಕಿರಿದಾಗುತ್ತವೆ.

ಈ ಕಾಯಿಲೆ ಏಕೆ ಬರುತ್ತದೆ ಎಂಬ ಸ್ಪಷ್ಟ ಕಾರಣ ಇನ್ನೂ ಗೊತ್ತಿಲ್ಲ. ಆದರೆ ಇದು ಅನುವಂಶಿಕ ಕಾಯಿಲೆ. ಮನೆಯವರಲ್ಲಿ ಯಾರಿಗಾದರೂ ಈ ಕಾಯಿಲೆ ಇದ್ದಾಗ ಅವರ ಹತ್ತಿರದ



'ಎ' ಅನ್ನಾಂಗದ ಕೊರತೆಯುಳ್ಳಿರುವ ಬಿಟಾಟ್ ಸ್ಪಾಟ್

ಸಂಬಂಧಿಕರಿಗೆ ಬರುವ ಸಾಧ್ಯತೆ ಬಹಳ. ಅಲ್ಲದೆ ಇನ್ನೊಂದು ಮುಖ್ಯ ಸಂಗತಿಯೆಂದರೆ ರಕ್ತ-ಸಂಬಂಧಿಗಳನ್ನೇ ಮದುವೆಯಾದಾಗ ಅವರ ಮಕ್ಕಳಿಗೆ ಇದು ಬರುವುದು ಹೆಚ್ಚು ಎಂದು ಹೇಳಲ್ಪಡುತ್ತದೆ. ಈ ಕಾಯಿಲೆಗೆ ಮಹತ್ವ ಹೆಚ್ಚಾಗಲು ಇನ್ನೊಂದು ಕಾರಣವೆಂದರೆ ಈ ಕಾಯಿಲೆ ಇದ್ದವರಿಗೆ ಇತರ ಕಣ್ಣಿನ ಕಾಯಿಲೆಗಳಾದ ಮೋತಿಬಿಂದು (ಕಣ್ಣಿನ ಪೊರೆ) ಗ್ಲಾಕೋಮಾ, ಸಮೀಪದೃಷ್ಟಿ, ಕೆರಟೋಕೋನಸ್ ಮೊದಲಾದ ಕಾಯಿಲೆಗಳು ಬರುವ ಸಾಧ್ಯತೆ ಬಹಳ ಹೆಚ್ಚು.

ಎಲ್ಲಕ್ಕಿಂತ ದುರದೃಷ್ಟದ ಸಂಗತಿಯೆಂದರೆ, ಈ ಕಾಯಿಲೆಗೆ ಇನ್ನೂ ತೃಪ್ತಿಕರ ಚಿಕಿತ್ಸೆಯಿಲ್ಲ. ಕಾರ್ಟಿಕೋಸ್ಟೀರಾಯ್ಡ್ಸ್, ಕಡಿಮೆ ತಾಪವಿರುವ ಆಹಾರ, ಸತುವಿನೊಳಗೊಂಡ ಔಷಧಿ, ಮೊದಲಾದ ವಿವಿಧ ಔಷಧಗಳು ಕೊಡಲ್ಪಟ್ಟರೂ ಮೂಲತಃ 'ಅಕ್ಷಿಪಟಲ ಕ್ಷೀಣವಾಗುವಿಕೆಗೆ ಸಬಂಧಿಸಿದ ಕಾಯಿಲೆಯಾದ್ದರಿಂದ ಯಾವುದೂ ಪ್ರಯೋಜನವಾಗುವುದಿಲ್ಲ. ಈ ರೀತಿಯ ರೋಗಿಗಳು ಕಡಿಮೆ ವಯಸ್ಸಿಗೇ ನಮ್ಮ ಕಣ್ಣೆದುರಿಗೇ ಅಂಧತ್ವ ಹೊಂದುವುದನ್ನು ನೋಡುತ್ತಾ, ಅಂಧತ್ವದ ಯಾದಿಯಲ್ಲಿ ಅವರ ಹೆಸರನ್ನು ಸೇರಿಸುತ್ತಾ ಕುಳಿತುಕೊಳ್ಳುವ ಅಸಹಾಯಕ ಪರಿಸ್ಥಿತಿ ನಮ್ಮದಾಗಿದೆ.

ಆದರೆ 'ಎ' ಅನ್ನಾಂಗದ ಕೊರತೆಯಿಂದ ಉಂಟಾಗುವ ರಾತ್ರಿ ದೃಷ್ಟಿಮಾಂದ್ಯವನ್ನು ಸೂಕ್ತ ಚಿಕಿತ್ಸೆಯಿಂದ ಗುಣಪಡಿಸಬಹುದು. ಒಂದು ಕಾಲದಲ್ಲಿ 'ಕೆರಟೋ ಮಲೇಷಿಯಾ' ಎಂಬ ಕಾಯಿಲೆಗೆ ಮುಂದುವರಿದು ಪಾರದರ್ಶಕವಾದ ಕಣ್ಣಿನ ಮುಂಭಾಗದ ಕಪ್ಪು ಗುಡ್ಡೆ-ಕಾರ್ನಿಯವನ್ನು ನಾಶ ಮಾಡಿ ಬಹಳ ದೊಡ್ಡ ಪ್ರಮಾಣದ ಅಂಧತ್ವಕ್ಕೆ ಕಾರಣವಾಗಿತ್ತು. ಈಗ ಕಾಣಿಸಿಕೊಳ್ಳುವ ಕಾಯಿಲೆ—ಕಣ್ಣಿನ ಕಪ್ಪು ಗುಡ್ಡೆಯ ಪಕ್ಕದಲ್ಲಿ (ಕಂಜಂಕ್ಟೈವ್) ಸಣ್ಣ ಸಣ್ಣ ತುಣುಕುಗಳು (ಬೀಟಾಟ್ ಸ್ಪಾಟ್‌ಗಳು) ಕಣ್ಣೀರಿನಿಂದ ತೊಯ್ಯುವುದಿಲ್ಲವಾದ್ದರಿಂದ ಬಹಳ ಒಣಗಿದಂತೆ ಕಾಣಿಸುತ್ತವೆ.

ಕಡಿಮೆ ಬೆಳಕಿನಲ್ಲಿ ದೃಷ್ಟಿ ಸರಿ ಇರಲು ಅಕ್ಷಿ ಪಟಲದಲ್ಲಿರುವ ದೃಷ್ಟಿಯು ನೀಲಿ ಎಂಬ ವಸ್ತು ಸರಿಯಾಗಿ ಉತ್ಪತ್ತಿಸಲ್ಪಡಬೇಕು. ಇದರ ಉತ್ಪತ್ತಿಗೆ 'ಎ' ಅನ್ನಾಂಗ ಬೇಕೇ ಬೇಕು. ಅದು ಆಹಾರದಲ್ಲಿ ಕೊರತೆಯಾದಾಗ ವ್ಯಕ್ತಿಗೆ ರಾತ್ರಿ ಕಾಣುವುದಿಲ್ಲ ಎಂದಾಗುತ್ತದೆ. ಅಲ್ಲದೆ ಜೊತೆಗೆ ಚರ್ಮದ ಇತರ ಲಕ್ಷಣಗಳೂ ಕಾಣಿಸಿಕೊಳ್ಳುತ್ತವೆ.

ಈ ಕಾಯಿಲೆಯನ್ನು ನಿವಾರಿಸಬಹುದಾದ ಅಂಧತ್ವದ ಗುಂಪಿಗೆ ಸೇರಿಸಿ, ಇದರ ನಿವಾರಣೆಗಾಗಿ ಭಾರತ ಸರಕಾರ ಒಂದು ರಾಷ್ಟ್ರೀಯ ಕಾರ್ಯಕ್ರಮವನ್ನೇ ಹಮ್ಮಿಕೊಂಡಿದೆ.

ಸೂಕ್ತ ಕಾಲದಲ್ಲಿ ಇದು ಪತ್ತೆಹಚ್ಚಲ್ಪಟ್ಟಾಗ, ಆಹಾರದಲ್ಲಿ ಅಥವಾ ಗುಳಿಗೆ ಮತ್ತು ಅಗತ್ಯ ಬಿದ್ದರೆ ಇಂಜೆಕ್ಷನ್ ಮೂಲಕ 'ಎ' ಜೀವಸತ್ವ ಕೊಡುವುದರಿಂದ ಇದರ ಚಿಕಿತ್ಸೆ ಮಾಡಬಹುದು. ಪ್ರತಿದಿನ ೨೫೦೦ ರಿಂದ ೫೦೦೦ ಅಂತಾರಾಷ್ಟ್ರೀಯ ಯುನಿಟ್ 'ಎ' ಅನ್ನಾಂಗ ಅಥವಾ ೭೫೦ ಮಿಲಿ ಗ್ರಾಂ. ಬೀಟಾಕೆರೊಟೀನ್ ಕೊಡಬೇಕು. ಈ ಜೀವಸತ್ವ ಸಿಗುವ ಆಹಾರಗಳೆಂದರೆ ಬೆಣ್ಣೆ, ತುಪ್ಪ, ಹಾಲು, ಮೊಸರು, ಮೊಟ್ಟೆಯ ಹಳದಿ, ಯಕೃತ್ತು ಇತ್ಯಾದಿ.

ಮೇಲಿನ ಎರಡು ಕಾಯಿಲೆಗಳಲ್ಲದೆ ರಾತ್ರಿ ದೃಷ್ಟಿಮಾಂದ್ಯವಾಗುವ ಇತರ ಸಂದರ್ಭಗಳೆಂದರೆ ಬಹಳ ವಿರಳವಾಗಿರುವ ಹುಟ್ಟುವಾಗಲೇ ಇರುವ ರಾತ್ರಿ ದೃಷ್ಟಿಮಾಂದ್ಯ, ತೀಕ್ಷ್ಣ ಸೂರ್ಯನ ಬೆಳಕಿನಲ್ಲಿ ಬಹಳ ಹೊತ್ತು ಇದ್ದಾಗ ಉಂಟಾಗುವ ರಾತ್ರಿ ದೃಷ್ಟಿಮಾಂದ್ಯ, ಯಕೃತ್ತಿನ ಕಾಯಿಲೆ ಸಿರ್ಹೋಸಿಸ್‌ನಲ್ಲಿ ಉಂಟಾಗುವ ರಾತ್ರಿ ದೃಷ್ಟಿಮಾಂದ್ಯ— ಇತ್ಯಾದಿ. ✡



## ಮಾನದಂಡ!

ದಿನ ನಿತ್ಯದ ಆಗು ಹೋಗುಗಳಲ್ಲಿ ಶೋಷಣೆ ಯಾವ ರೀತಿಯಲ್ಲಿ ರೂಪು ಪಡೆಯುತ್ತದೆಂದರೆ ಶೋಷಿತರಾರು, ಶೋಷಕರಾರು ಎಂಬುದನ್ನು ನಿರ್ಧರಿಸುವುದೇ ಕಠಿಣವಾಗುತ್ತದೆ ಮೊನ್ನೆ ನಮ್ಮ ಸ್ನೇಹಿತರೊಬ್ಬರಿಗೆ ತಾವು ಹೊಸದಾಗಿ ಕೊಂಡ ಸೈಕಲ್ಲನ್ನು ತಮ್ಮ ಹಳ್ಳಿಗೆ ಒಯ್ಯಬೇಕಾಗಿತ್ತು. ಜಿಲ್ಲಾ ಸ್ಥಳದ ಬಸ್‌ಸ್ಟ್ಯಾಂಡಿನಲ್ಲಿ ಅದನ್ನು ಬಸ್ಸಿನ ಟಾಪ್ ಮೇಲೆ ಹಾಕಲಿಕ್ಕೆ ಹಮಾಲರು ಕೇಳಿದ 'ಹಮಾಲಿ' ಎಷ್ಟು ಗೊತ್ತೇ? ಐದು ರೂಪಾಯಿ! ಎರಡು ರೂಪಾಯಿಗಳನ್ನು ಕೊಟ್ಟರೆ ಅದು ಏನೂ ಅಲ್ಲ ಎನ್ನುವಂತೆ ಐದು ರೂಪಾಯಿಗಳೇ ಬೇಕೆಂದು ಆತ ಪಟ್ಟು ಹಿಡಿದ. ಕಂಡಕ್ಟರರಿಗೆ ಹೇಳಿದರೆ ಅವರೂ, "ನಿಮ್ಮ ನಿಮ್ಮ ವ್ಯವಹಾರ ಬೇಗನೆ ಹೊಂದಿಸಿಕೊಳ್ಳಿ ಬಸ್ಸು ಹೊರಡಬೇಕು—" ಎಂದುಬಿಟ್ಟ. ಕಂಟ್ರೋಲರ್‌ಗೆ ಹೇಳಬೇಕೆಂದರೆ ಸಮಯ ಸಾಲದು. ನಾಲ್ಕು ಹಮಾಲರು ಒಟ್ಟಾಗಿ ಬಂದು ಇವರಿಗೇ ಜಬರಿಸಿದರಂತೆ, ಸೈಕಲ್ಲನ್ನು ಕೆಳಗೆ ಇಳಿಸುವುದಾಗಿ ಹೆದರಿಸಿದರಂತೆ. ಮಾನಕ್ಕೆ ಹೆದರಿದ ಅವರು ಮತ್ತೆ ಎರಡು ರೂಪಾಯಿ ಕೊಟ್ಟರಂತೆ, ಬಸ್ಸಿನ ಪ್ರಯಾಣಿಕರು ಹಮಾಲರನ್ನು ತರಾಟೆಗೆ ತೆಗೆದುಕೊಂಡ ಮೇಲೆ ಸುಮ್ಮನೆ ಹೋದರಂತೆ.

ಮುಂದೆ ಅದೇ ಸೈಕಲನ್ನು ತಾಲೂಕಿನ ಸ್ಥಳವೊಂದರಲ್ಲಿ ಇಳಿಸಬೇಕಾದರೆ ಒಂದು ರೂಪಾಯಿ! ಮತ್ತೊಂದು ಬಸ್ ಮೇಲೆ ಹತ್ತಿಸಬೇಕಾದರೆ ಆಗಲೂ ಒಂದು ರೂಪಾಯಿ! ತಾಲೂಕಿನ ಹಮಾಲರಿಗಿಂತ ಜಿಲ್ಲಾ ಸ್ಥಳದ ಹಮಾಲರು ಐದು ಪಟ್ಟು ಜಾಸ್ತಿ ಪಡೆಯುತ್ತಾರೆನ್ನಬಹುದೇ? ಅಥವಾ ಇದರ ತಿರುವುಮುರುವೋ? ಹಮಾಲಿಯನ್ನು ನಿರ್ಧರಿಸಿ ಹಮಾಲರನ್ನು ನಿಯಂತ್ರಿಸುವವರು ಯಾರು? ಹೇಗೆ? ಯಾವುದು ಮಾನದಂಡ? ಯಾರ ಮಾನ ದಂಡ?

–ಹ. ಶಿ. ಭೈರನಟ್ಟಿ

# ಕನ್ನಡ ಬಳಕೆಯ ಬಲ

ವಿಟ್ಠಲ ಕುಲಕರ್ಣಿ

ಕನ್ನಡ ಬಳಕೆಯ ಬಗ್ಗೆ ಇತ್ತೀಚೆಗೆ ಒಂದು ಬಲವಾದ ಪ್ರಯತ್ನ ನಡೆಯುತ್ತಿದೆ. ಕನ್ನಡ ಬಳಕೆಯು ಬಲವಂತವಾಗಿ ಬರಬಾರದು ಎಂದು ಹೇಳುವವರೂ ಇದ್ದಾರೆ. ಕನ್ನಡದ ಬಳಕೆಯಲ್ಲಿಯೇ ಬಲ ಕಂಡು ಬಂದರೆ ಬಲವಂತ ಮಾಡುವ ಪ್ರಶ್ನೆಯೇ ಉಂಟಾಗಲಾರದು.

ಕನ್ನಡ ಬಳಕೆಯೆಂದೊಡನೆ ಸರಕಾರದ ಆಡಳಿತದಲ್ಲಿಯ ಸಮಸ್ಯೆಗಳೇ ಹೆಚ್ಚು ಪ್ರಾಮುಖ್ಯ ಪಡೆಯುತ್ತಿವೆ. ಸರಕಾರದ ಆಡಳಿತ ಎಂದೊಡನೆ ಬೆರಳಚ್ಚು ಯಂತ್ರಗಳ ಮಾತೂ ಕೇಳಿ ಬರುತ್ತಿದೆ. ಆಡಳಿತದಲ್ಲಿ ಬೆರಳಚ್ಚಿಗೆ ಒಂದು ದೊಡ್ಡ ಸ್ಥಾನವಿದೆ. ಆದರೆ ಅದೇ ಮಹತ್ವದ್ದೆನಿಸಬೇಕಾಗಿಲ್ಲ. ಕನ್ನಡ ಬೆರಳಚ್ಚು ಯಂತ್ರಗಳನ್ನು ಒದಗಿಸುವುದೇ, ಕನ್ನಡದ ಬಳಕೆಯ ಲೆಕ್ಕ ನೂರಕ್ಕೆ ಇಷ್ಟು (ಶೇಕಡಾವಾರು ಲೆಕ್ಕ ಎನ್ನಬೇಕೆ? ಹಿಂದಿಯಲ್ಲಿ ಪ್ರತಿಶತವೆನ್ನುತ್ತಾರೆ.) ಎಂದು ಸಾಧನೆಗಳನ್ನು ತೋರಿಸುವಂತಾಗಬಾರದು. ಸರಕಾರದ ಕ್ರಮಬದ್ಧ ಕಾರ್ಯಗಳಿಗೆಲ್ಲ ನಮೂದಿತ—ಅಚ್ಚಾದ—ಫಾರ್ಮುಗಳಿರುತ್ತವೆ. ಇಂಥ ನಮೂನೆಗಳಿಂದಲೇ ನೂರಕ್ಕೆ ೭೦-೭೫ರಷ್ಟು ಕಾರ್ಯಕಲಾಪಗಳು ಸಾಗುತ್ತಿವೆ. ಇವುಗಳ ಉಪಯೋಗದಲ್ಲಿ ಬೆರಳಚ್ಚಿನ ಪಾತ್ರ ಕಡಿಮೆಯೇ. ಭಾರತ ಸರಕಾರದ ಆಡಳಿತದಲ್ಲಿಯೂ ಎಷ್ಟೋ ಆಂಗ್ಲ ನಮೂನೆಗಳು—ಕೆಲವೆಡೆಗಳಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ ಪಟ್ಟಾಗಿ ಹಿಂದಿಯಲ್ಲಿ ಅಚ್ಚಾದ ರೀತಿಗಳಲ್ಲಿ ದೊರೆಯುತ್ತಿವೆ. ಇನ್ನೂ ಕೆಲವೆಡೆಗಳಲ್ಲಿ ದ್ವಿಭಾಷಾ ನಮೂನೆಗಳೂ ಇವೆ. ಇಂಥ ನಮೂನೆಗಳ ಉಪಯೋಗದಲ್ಲಿ ಬೆರಳಚ್ಚಿನ ಸಹಾಯ ಅವಶ್ಯವಾಗಿಲ್ಲ. ಕರ್ನಾಟಕದಲ್ಲಿಯ ಆಡಳಿತದಲ್ಲಿಯೂ ಇದೇ ರೀತಿ ಕನ್ನಡ, ಕನ್ನಡ-ಆಂಗ್ಲ ಇಲ್ಲವೆ ಕನ್ನಡ-ಹಿಂದಿ ನಮೂನೆಗಳನ್ನು ಉಪಯೋಗಿಸಿದರೆ ಬೆರಳಚ್ಚಿನ ಪ್ರಾಧಾನ್ಯ ಅಷ್ಟೊಂದು ಕಂಡುಬರಲಾರದು. ಹೆಚ್ಚು ಪ್ರತಿಗಳು ಬೇಕಾದರೆ ಹೊಸ ಯಂತ್ರೋಪಕರಣ (Xerox)ಗಳನ್ನು ಉಪಯೋಗಿಸಬಹುದು. ಸ್ವಚ್ಛ, ಅಚ್ಚುಕಟ್ಟಾದ ಕೈ ಬರೆಹದ ಪತ್ರ-ಪರಿಪತ್ರಗಳಿಗೂ ಸೂಕ್ತ ಮಹತ್ವವಿದೆಯಲ್ಲವೇ?

ರಾಜ್ಯ ಸರಕಾರದಲ್ಲಿ ಕನ್ನಡ ಬಳಕೆ ಮಹತ್ವದ್ದೇ. ಆದರೆ ಸರಕಾರದ್ದೊಂದೇ ಮಹತ್ವದ್ದಲ್ಲ. ನಮ್ಮ ಸಾರ್ವಜನಿಕ ಜೀವನದಲ್ಲಿ ಕನ್ನಡದ ಬಳಕೆ ವಿಧವಿಧವಾಗಿ ಬಲ ಪಡೆಯಬೇಕಾಗಿದೆ. ಕಡ್ಡಿಪೆಟ್ಟಿಗೆಯ ಮೇಲೆ ಕನ್ನಡದ ಅಕ್ಷರಗಳನ್ನು ನಾವು ಕಾಣುವುದು ತೀರ ಕಡಿಮೆ. ಸಾರ್ವತ್ರಿಕವಾಗಿರುವ ಸಿಗರೇಟುಪ್ಯಾಕ್‌ಗಳ ಮೇಲೆ, ಔಷಧಿಗಳ ಚೀಟಿಗಳ ಮೇಲೆ, ಸಿನಿಮಾ ಟಿಕೆಟ್‌ಗಳಿಗೆ, ಲಾಟರಿ ಟಿಕೆಟ್‌ಗಳಿಗೆ ಕನ್ನಡದ ದೀಕ್ಷೆ ಸಿಕ್ಕದ್ದು ಕಡಿಮೆ. ದ್ವಿಭಾಷಾ ಉಪಯೋಗ

ಕಂಡುಬರುವುದೂ ಕಡಿಮೆ. ಪಟಾಕ್ಷಿ, ಕಡ್ಡಿ ಪೆಟ್ಟಿಗೆಗಳಿಗೆ ಪ್ರಸಿದ್ಧಿ ಪಡೆದ ತಮಿಳುನಾಡಿನ ಶಿವಕಾಶಿಯ ಜನ ಒಮ್ಮೊಮ್ಮೆ ಕನ್ನಡ ಅಕ್ಷರಗಳನ್ನು ಉಪಯೋಗಿಸುವುದುಂಟು. ಆಕಸ್ಮಾತ್ತಾಗಿ ಇಂತಹ ಕಡ್ಡಿಪೆಟ್ಟಿಗೆಯ ಮೇಲೆ ಕನ್ನಡದ ಹೆಸರನ್ನು ನಾನು ನೋಡಿದ್ದೇನೆ. ಆದರೆ ಕನ್ನಡ ಪತ್ರಿಕೆಗಳು ಕೂಡ ಇಂಗ್ಲೀಷಿನಲ್ಲಿ ಪತ್ರ ವ್ಯವಹಾರ ಮಾಡುತ್ತಿರುವ ನಿದರ್ಶನಗಳೂ ಕರ್ನಾಟಕದಲ್ಲಿವೆ. ಮದುವೆ-ಆಮಂತ್ರಣ ಪತ್ರಿಕೆಗಳು ಇಂಗ್ಲೀಷಿನಲ್ಲಿದ್ದರೆ ಪ್ರತಿಷ್ಠೆಯ ಸೂಚಕವೆನಿಸಿದಂತೆ. ಕನ್ನಡದ ಕರೆಯೋಲೆಗಳಿಗೆ ಮನ್ನಣೆ ಸಿಕ್ಕಿಲ್ಲ. ತಮಿಳುನಾಡಿನಲ್ಲಿಯ ಇಂಗ್ಲೀಷ್ ಪತ್ರಿಕೆಗಳು ಕೂಡ ಪೂರ್ತಿ ತಮಿಳಿನಲ್ಲಿ ಜಾಹಿರಾತನ್ನು ಪ್ರಕಟಿಸುವುದನ್ನು ಕಾಣಬಹುದಾದರೆ, ಕರ್ನಾಟಕದ ಕನ್ನಡ ಪತ್ರಿಕೆಗಳು ಇಡೀ ಪುಟದ ಇಂಗ್ಲೀಷಿನ ಪ್ರಕಟಣೆಗಳಿಗೆ ಸ್ವಾಗತವೀಯುತ್ತಿರುವುದನ್ನು ನೋಡುತ್ತೇವೆ. ಕನ್ನಡ ನಾಡಿನಿಂದ ಹೊರಗೆ ಹೋಗುತ್ತಿರುವ ದಿನಸಿಗಳ ಪ್ಯಾಕೆಟ್ ಮೇಲೆಯೂ ಕನ್ನಡ ಕಾಣುತ್ತಿರಬೇಕು. ಬೇರೆ ಭಾಷೆಯ ಉಪಯೋಗದ ಜೊತೆಗೆ ಕನ್ನಡವೂ ಕಾಣಬೇಕು. ಸೀಗೆಕಾಯಿಪುಡಿ, ಅರಿಷಿಣಪುಡಿ, ಮೆಣಸಿನಪುಡಿ, ಚಟ್ನಿಪುಡಿ, ಸೇವಿಗೆ ಮೊದಲಾದವುಗಳು ಪರದೇಶಕ್ಕೂ ಹೋಗುತ್ತಿವೆ. ರೇಷ್ಮೆ ಸೀರೆಗಳೂ ಕನ್ನಡದ ಹೆಸರು ಹೊತ್ತು ಕನ್ನಡದ ಪರಿಚಯ ಬೆಳೆಸುತ್ತಿರಬೇಕು.

## ಕೇಂದ್ರ ಭಾಷಾ ನೀತಿ

ಕೇಂದ್ರ ಸರಕಾರದ ಭಾಷಾ ನೀತಿಯೂ ಕರ್ನಾಟಕದಲ್ಲಿ ಕನ್ನಡದ ಪರವಾಗಿ ಇರಬೇಕು. ಹಿಂದಿ ಬಳಕೆಯನ್ನು ಕ್ರಮವಾಗಿ ಹೆಚ್ಚಿಸಬೇಕೆಂಬ ಅಭಿಪ್ರಾಯದ ಜೊತೆಗೆ ಕನ್ನಡವೂ ಬೆಳೆಯಬೇಕು. ಹಿಂದಿಯೇತರ ಪ್ರದೇಶದವರು ಹಿಂದಿ ಬಳಕೆಯ ಪ್ರಯತ್ನಗಳಿಗೆ ಆಗಾಗ ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಈ ಸಂಬಂಧದಲ್ಲಿ ತಮಿಳುನಾಡಿನವರದೇ ವಿಶಿಷ್ಟ ರೀತಿ. ಪ್ರಧಾನ ಮಂತ್ರಿಗಳು ಹಿಂದಿಯನ್ನು ಒತ್ತಾಯವಾಗಿ ಯಾರ ಮೇಲೂ ಹೇರುವದಿಲ್ಲ ಎಂದು ಆಶ್ವಾಸನೆ ಕೊಡುತ್ತಾರೆ. ಹಿಂದಿಯೇತರ ಜನರು ಒಪ್ಪಿಕೊಳ್ಳುವವರೆಗೆ ಇಂಗ್ಲೀಷಿನ ಉಪಯೋಗ ಮುಂದುವರಿಯುತ್ತದೆಂದೂ ಹೇಳುತ್ತಾರೆ. ಆದರೂ ಹಿಂದಿ ಪ್ರಭಾವ ಸಿನೇಮಾ-ದೂರದರ್ಶನಗಳ ಮೂಲಕ ಬೆಳೆಯುತ್ತಲೇ ಇದೆ. ಹಿಂದೀ ಜೊತೆಗೆ ಆಯಾ ಭಾಗದ ಭಾಷೆಗಳಿಗೂ ಉತ್ತೇಜನ ದೊರೆಯುತ್ತಿರಬೇಕು.

ಕೇಂದ್ರ ಸರಕಾರದವರು ಭಾಷೆಯ ಬಗ್ಗೆ ತಳೆದ ಧೋರಣೆಯನ್ನು ವಿಪರೀತವಾಗಿ ಬಳಸುವ ಅಧಿಕಾರಿಗಳೂ ನಮ್ಮಲ್ಲಿ ಕಡಿಮೆ ಇಲ್ಲ. ಹಿಂದಿ ಉತ್ಸಾಹಿಗಳಿಗೂ ಕೊರತೆ ಇಲ್ಲ. ಕರ್ನಾಟಕ ಹಿಂದಿಯೇತರ ರಾಜ್ಯವಾಗಿದೆ. ಎಂದರೆ ಈ ರಾಜ್ಯದಲ್ಲಿ ಕೇಂದ್ರ ಸರಕಾರದ ಆಡಳಿತ ಕ್ರಮದಲ್ಲಿ ಕನ್ನಡಕ್ಕೆ ಆದ್ಯತೆ ಕೊಟ್ಟು ಹಿಂದಿಗೆ ಎರಡನೇ ಸ್ಥಾನ ಕೊಡಬೇಕು. ಭಾರತದ ರಾಜ್ಯ ಭಾಷಾ ನೀತಿ ಇದನ್ನು ಹೇಳುತ್ತದೆ. ಜೊತೆಗೆ ಇಂಗ್ಲೀಷ್ ಕೂಡ ಇರಬಹುದು. ಕೇಂದ್ರ ಸರಕಾರದ ಕಚೇರಿಗಳ ನಾಮಫಲಕಗಳಿಗೆ ಕೂಡ ಈ ಮಾತು ಅನ್ವಯಿಸುತ್ತದೆ. ಆದರೆ ಕರ್ನಾಟಕದಲ್ಲಿರುವ ಕೇಂದ್ರ ಸರಕಾರದ ಕಚೇರಿಗಳಿಗೆ ಇಂತಹ ನೀತಿ ಸ್ಪಷ್ಟವಾದಂತಿಲ್ಲ. ಕರ್ನಾಟಕದಲ್ಲಿರುವ ಆಕಾಶವಾಣಿ ಕೇಂದ್ರಗಳು, ರೈಲು ನಿಲ್ದಾಣಗಳು, ಅಂಚೆ ಕಚೇರಿಗಳು ಈ ನೀತಿಯನ್ನು ಅನುಸರಿಸುತ್ತಿವೆಯೇ? ಅವುಗಳು ಉಪಯೋಗಿಸುವ ರಬ್ಬರಿನ ಅಚ್ಚೊತ್ತುಗಳು ಇಲ್ಲವೆ ಮುದ್ರೆಗಳು ಕನ್ನಡವನ್ನು ಬಳಸುತ್ತಿವೆಯೇ? ಅಂಚೆ ಕಚೇರಿಗಳ ಮೊಹರುಗಳು ಹಿಂದಿ-ಇಂಗ್ಲೀಷಿನಲ್ಲಿ ಮಾತ್ರ ಇರುವುದು ಸರಿಯೇ? ಇಂಗ್ಲೀಷಿನ ಬಳಕೆ ಬಿಟ್ಟರೂ ಕನ್ನಡ-ಹಿಂದಿಗಳಲ್ಲಿರಬೇಕಾದದ್ದು ನ್ಯಾಯವಲ್ಲವೇ? ಅಂಚೆ ಚೀಟಿಗಳು ಭಾರತದಲ್ಲಿ ಸಾರ್ವತ್ರಿಕವಾಗಿ ಇಂಗ್ಲೀಷ್ ಹಿಂದಿಗಳಲ್ಲಿ ಮಾತ್ರ ಇರಬೇಕೆ? ತಮಿಳುನಾಡಿನಲ್ಲಿ ತಮಿಳು ಭಾಷೆಯ ಚೀಟಿಗಳು ಇರುವದು ನ್ಯಾಯ. ಅದರ ಜೊತೆಗೆ ಹಿಂದಿ ಇದ್ದರೂ ಅಡ್ಡಿಯಿಲ್ಲ. ಅದರ ಜೊತೆಗೆ ಕನ್ನಡ ಇಲ್ಲವೆ ತೆಲಗು ಇದ್ದರೂ ಸರಿಯೇ. ಈ ಎಲ್ಲ ಸೋದರ ಭಾಷೆಗಳಿಗೆ ಅಲ್ಲಲ್ಲಿ ಪ್ರಚಾರ-ಪ್ರಸಾರ ಸಿಕ್ಕಬೇಕು.

ಪ್ರತಿಯೊಂದು ಪತ್ರಿಕೆಯಲ್ಲಿ ಫಾರ್ಮು ನಾಲ್ಕರಲ್ಲಿ (IV) ತಮ್ಮ ಪತ್ರಿಕೆಯ ಒಡೆತನ–ಮುದ್ರಕರು ಇತ್ಯಾದಿಗಳ ವಿವರಗಳನ್ನು ವೃತ್ತ ಪತ್ರಿಕೆಯ ನಿಯಮಾನುಸಾರವಾಗಿ ಫೆಬ್ರುವರಿ ತಿಂಗಳಲ್ಲಿ ಪ್ರಕಟಿಸುವ ಪರಿಪಾಠವಿದೆ. ಇದು ಇಂಗ್ಲೀಷಿನಲ್ಲಿಯೇ ಇರಬೇಕೇ? ಹಿಂದಿ ಉತ್ಸಾಹಿಗಳು ಇಂಥ ಪ್ರಕಟಣೆ ಆಯಾ ಭಾಷೆಗಳಲ್ಲಿ ಬಂದರೆ ಸಾಕು ಎನ್ನುತ್ತಾರೆಯೇ?

ಹಿಂದೀ ಬಳಕೆಯ ಬಗ್ಗೆ ತೋರುವ ಆಸ್ಥೆ ರಾಜ್ಯ ಭಾಷೆಗಳ ಬಗ್ಗೆಯೂ ಕಂಡುಬರಬೇಕು. ಮನಿ ಆರ್ಡರ್ ಫಾರ್ಮುಗಳು ಆಯಾ ರಾಜ್ಯ ಭಾಷೆಗಳಲ್ಲಿ ಜೊತೆ ಜೊತೆಯಾಗಿ ಹಿಂದಿ ಅಥವಾ ಇಂಗ್ಲೀಷಿನಲ್ಲಿ ಇರಬೇಕು. ಇಂಥ ಫಾರ್ಮುಗಳು ಭಾರತ ಸ್ವತಂತ್ರವಾಗುವದಕ್ಕೆ ಮೊದಲೇ ಇದ್ದವು ಎಂಬುದನ್ನು ಮರೆಯಬಾರದು. ಈಗಲೂ ರಾಜ್ಯಭಾಷೆಗಳ ಹೆಚ್ಚಿನ ಬಳಕೆಗೆ ಪ್ರೋತ್ಸಾಹ ಸಿಕ್ಕಬೇಕು. ಹಿಂದಿ ಉಪಯೋಗ ಭಾರತದ ಆಡಳಿತದಲ್ಲಿ ಬೆಳೆಯಬೇಕಾದರೆ ರಾಜ್ಯಭಾಷೆಗಳಿಗೂ ತಕ್ಕ ಸ್ಥಾನ, ಬಳಕೆಗೆ ಪ್ರಾಧಾನ್ಯ ಸಿಕ್ಕಬೇಕು. ಹಿಂದಿ ಮತ್ತು ಇತರ ಭಾರತೀಯ ಭಾಷೆಗಳಲ್ಲಿ ಶಬ್ದಸಂಪತ್ತು ಎಷ್ಟೋ ಮಟ್ಟಿಗೆ ತದ್ರೂಪವಾಗಿದೆ. ಅನೇಕ ಶಬ್ದಗಳಿಗೆ ವ್ಯತ್ಯಾಸವೇ ಇಲ್ಲ. ತಮಿಳು, ಮಲೆಯಾಳಂಗಳಲ್ಲಿಯೂ ಏಕರೂಪದ ಶಬ್ದಗಳ ಉಪಯೋಗವಾಗುತ್ತಿದೆ. ಭಿನ್ನತೆಗಳಲ್ಲಿಯೂ ಏಕತೆ ಕಂಡುಬರುತ್ತಿದೆ. ಆದ್ದರಿಂದ ಹಿಂದಿಯೇತರ ಭಾಷೆಗಳಿಗೆ ಕೇಂದ್ರ ಸರಕಾರವೂ ತಕ್ಕ ಬಲ ಒದಗಿಸಿದರೆ ಹಿಂದಿ ಭಾಷೆಯ ಉಪಯೋಗವೂ ತ್ವರಿತವಾಗಿ ಬೆಳೆಯಬಹುದು.

ಅಂಚೆಕಚೇರಿಗಳ ಮುದ್ರೆಗಳಲ್ಲಿ ಕನ್ನಡ ನಗರಗಳ ಹೆಸರುಗಳು ವಿಕೃತವಾಗಿ ಹಿಂದಿಯಲ್ಲಿ ಕಾಣುತ್ತಿರುವದು ಯೋಗ್ಯವಲ್ಲ. ಇಂಗ್ಲೀಷ್ ಲಿಪಿಯ ಅಸಮರ್ಥತೆ ಇಂಥ ವಿಕೃತ ಹೆಸರುಗಳಲ್ಲಿ ಕಂಡುಬರುತ್ತದೆ. ಹಿಂದಿಯಲ್ಲಿ ಬರೆಯುವಾಗಲೂ ನಾವು ಇಂಗ್ಲೀಷಿನ ಬರೆಹದ ಮಾಧ್ಯಮದಿಂದ ನೋಡುತ್ತಿದ್ದೇವೆ. ಸಾರಸ್ವತಪುರ'ವು ಹಿಂದಿಯಲ್ಲಿ 'ಸಾರಸ್ವತಪೂರ' ಎಂದಾಗಬಾರದು, ವಿಜಾಪುರ ಇಲ್ಲವೆ ಬಿಜಾಪುರ ಹಿಂದಿ ಅಕ್ಷರಗಳಲ್ಲಿ 'ಪೂರ' ಎಂದು ದೀರ್ಘ ಪಡೆಯಬಾರದು. ಬೆಂಗಳೂರು, ಬೆಂಗಲೋರ್ ಎಂದಾಗಬಾರದು. ಮೈಸೂರು ಮೈಸೋರ್ ಎಂದೂ ಬರೆಯಲ್ಪಡಬಾರದು, ಆಲಮಟ್ಟಿ 'ಆಲ್‌ಮೇಟಿ'ಯಾಗಬಾರದು. ಹುಬ್ಬಳ್ಳಿಯು 'ಹೂಬ್ಲಿ' ಎಂದೆನಿಸಬಾರದು.

## ಅಂಚೆಯಲ್ಲಿ ಕನ್ನಡ

ಕನ್ನಡದ ಅಕ್ಷರಗಳನ್ನು ಪಡೆದ ಅಂಚೆಚೀಟಿ–ಹಿಂದಿಯೊಂದಿಗೆ ಸ್ಥಾನ ಪಡೆದು ಉತ್ತರ ಭಾರತದಲ್ಲಿಯೂ ಪ್ರಯೋಜನ ಪಡೆದರೆ ಆಶ್ಚರ್ಯಪಡಬೇಕಾಗಿಲ್ಲ, ತಾತ್ಸಾರ ಮಾಡಬೇಕಿಲ್ಲ, ಸ್ವಾಗತಿಸಬೇಕು. ದಕ್ಷಿಣದ ಭಾಷೆಗಳಿಗೆ ಉತ್ತರ ಭಾರತದಲ್ಲಿ ಇಂಥ ರೀತಿಯಲ್ಲಿ ಪ್ರಚಾರ ದೊರೆತರೆ, ಆ ಭಾಷೆಗಳ ಬಗ್ಗೆ ಗೌರವವು ಬೆಳೆದೀತು. ಹಿಂದಿಯೇತರ ಭಾಷೆಗಳಿಗೆ ಹಿಂದಿ ಪ್ರದೇಶದಲ್ಲಿ ಸಮಾನ ಗೌರವ ಸಿಕ್ಕುವಂತಾದರೆ, ಭಾರತದ ಆಡಳಿತ ಭಾಷೆ ಹಿಂದಿ ಆಗುವದು ತಡವಿಲ್ಲ. ಹಿಂದಿ ಭಾಷೆ ಇತರರಿಗೆ ಅನ್ಯಭಾಷೆಯೆನಿಸುವುದಿಲ್ಲ. ಏಕರೀತಿಯ ಶಬ್ದ ಪ್ರಯೋಗಗಳನ್ನು ಎಲ್ಲ ಭಾಷೆಗಳಲ್ಲಿಯೂ ಪ್ರಯೋಜನದಲ್ಲಿ ತರುವ ಹೊಣೆ ಕೇಂದ್ರ ಸರಕಾರದ್ದು. ದಕ್ಷಿಣದ ಭಾಷೆಯೆಂದರೆ ತಮಿಳು ಮಾತ್ರವಲ್ಲ, ಇತರ ಭಾಷೆಗಳೂ ಉತ್ತರ ಭಾರತದಲ್ಲಿ— ವಿಶೇಷವಾಗಿ ಹಿಂದಿ ಪ್ರದೇಶದಲ್ಲಿ–ಅನ್ಯಭಾಷೆಗಳೆನಿಸಬಾರದು. ಅವು ಸೋದರ ಭಾಷೆಗಳು— ಭಾರತದ ರಾಷ್ಟ್ರಭಾಷೆಗಳೇ ಎಂಬುದನ್ನು ಅಲ್ಲಿಯ ಜನ ಮನಗಾಣಬೇಕು. ಭಾರತ ಸಂವಿಧಾನ ಹದಿನಾಲ್ಕು ಭಾಷೆಗಳಿಗೆ ರಾಷ್ಟ್ರಭಾಷೆಯ ಸ್ಥಾನ ಕೊಟ್ಟಿದೆ. ಹಿಂದಿ ಆಡಳಿತ ಭಾಷೆಯಾಗುವುದೆಂದರೆ ಬಹು ಜನಕ್ಕೆ ಪರಿಚಯವಿದ್ದ ಅರ್ಥದಲ್ಲಿ ಮಾತ್ರ.

ಅಂಚೆ–ತಂತಿ ವಿಭಾಗದವರು (ಹಿಂದಿಯಲ್ಲಿ ಡಾಕ-ತಾರ ವಿಭಾಗವೆನ್ನುತ್ತಾರೆ) ಶುಭಾಶಯಗಳನ್ನು (Greetings) ಹಿಂದಿಯಲ್ಲಿಯೂ ಕಳಿಸುವ ವ್ಯವಸ್ಥೆ ಮಾಡಿದ್ದಾರೆ. ಇವುಗಳಲ್ಲಿ ಸಂಖ್ಯೆಯ ಸಂಕೇತವೇ ಪ್ರಧಾನವಾಗಿದೆ. ಹಿಂದಿಯೇತರ ಭಾಷೆಗಳಲ್ಲಿಯೂ ಆಯಾ ರಾಜ್ಯಗಳಲ್ಲಿ ದೊರಕುವಂತೆ ಮಾಡುವದು ಕಠಿಣವೇನಲ್ಲ.

ಅಲ್ಲಲ್ಲಿಯ ವಿಭಾಗೀಯ ಕಚೇರಿಗಳು ಇವುಗಳನ್ನು ಹಿಂದಿಯೇತರ ರಾಜ್ಯಗಳಲ್ಲಿ ಬಳಕೆಗೆ ತರಬೇಕು. ಕರ್ನಾಟಕದಲ್ಲಿ ಕನ್ನಡದ ಶುಭಾಶಯಗಳು ಸಾಧ್ಯವಾಗಬೇಕು. ಕೆಲವೆಡೆ ಈ ಶುಭಾಶಯಗಳನ್ನು ಹಿಂದಿ-ಕನ್ನಡ-ದ್ವಿಭಾಷಾ ಮುದ್ರೆಯೊತ್ತುವ ರೀತಿಯಲ್ಲಿಯೂ ಬಳಕೆಯಲ್ಲಿ ತರಬಹುದು. ಕೇಂದ್ರ ಸರಕಾರದ ಹಿಂದಿಪರ ಧೋರಣೆಗೆ ಶಕ್ತಿ ಬರಬೇಕಾದರೆ ರಾಜ್ಯಭಾಷೆಗಳ ಬಳಕೆ ಹೆಚ್ಚು ಕ್ರಮಬದ್ಧವಾಗಿ ಬೆಳೆಯಬೇಕು. ಇಂಥ ಬೆಳೆವಣಿಗೆ ಕಠಿಣವೂ ಅಲ್ಲ, ಅಸಾಧ್ಯವೂ ಅಲ್ಲ. ನಮ್ಮ ಭಾಷೆಗಳಲ್ಲೆಲ್ಲ ಅನೇಕ ಸಾಮ್ಯಗಳಿವೆ. ಏಕರೂಪತೆಗಳಿವೆ; ಉಚ್ಚಾರಗಳಲ್ಲಿ—ರೀತಿಗಳಲ್ಲಿ ಸಾಮ್ಯಗಳಿವೆ. ನಮ್ಮ ದೇಶ ಇಂಗ್ಲೀಷಿನ ಸ್ವಾಮಿತ್ವ ಬರುವದಕ್ಕೆ ಮೊದಲೇ— ಏಕರೂಪದ ಸಾಂಸ್ಕೃತಿಕ ಲಕ್ಷಣಗಳನ್ನು ಪಡೆದಿತ್ತು. ಮಧ್ಯಯುಗದಲ್ಲಿ ಭಾರತದಲ್ಲಿ ಅನೇಕ ರಾಜರುಗಳನ್ನು – ರಾಜ್ಯಗಳನ್ನು – ಕಾಣಬಹುದಾದರೂ ಭಾರತ ಒಂದು ವಿಶಿಷ್ಟ ಸಂಸ್ಕೃತಿಯ ದೇಶವೆಂದು ಯಾವಾಗಲೂ ಗುರುತಿಸಲ್ಪಟ್ಟಿದೆ.

ನಮ್ಮ ಪತ್ರಗಳಿಗೆ ಬರೆಯುವ ವಿಳಾಸದ ಬಗ್ಗೆ ನೋಡಬಹುದು. ಹಿಂದಿಯಲ್ಲಿ 'ಪತಾ' ಎನ್ನುತ್ತಾರೆ; ಅರ್ಥ 'ಗೊತ್ತು' ಎಂತಲೆ. ಆದರೂ ವಿಳಾಸದ ಅರ್ಥದಲ್ಲಿ ಪ್ರಯೋಜನ ಪಡೆಯುತ್ತಿದೆ. ಉತ್ತರ ಕರ್ನಾಟಕದಲ್ಲಿ 'ಪತ್ತೆ' ಎಂದೂ ಹೇಳುತ್ತಾರೆ. ಮೈಸೂರು ವಿಭಾಗದಲ್ಲಿ 'ಅಡ್ರೆಸ್' ಎಂಬುದೇ ಹೆಚ್ಚು ಪ್ರಚಲಿತವಾಗಿದೆ. ಈ ವಿಳಾಸ ಬರೆಯುವ ರೀತಿಯಲ್ಲಿಯೂ ಕನ್ನಡದ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳಬೇಕು. ಅಚ್ಚುಕಟ್ಟಾಗಿ ಬರೆಯುವದನ್ನೇ ರೂಢಿಸಿಕೊಳ್ಳಬೇಕು. ಕನ್ನಡ ವಿಳಾಸ ಪಡೆದ ಪತ್ರಗಳು ದೆಹಲಿಯಲ್ಲಿ ತಡಮಾಡಿ ತಲಪುತ್ತವೆಂಬುದು ಸುಳ್ಳಲ್ಲ. ಆದರೆ ದೆಹಲಿಯಿಂದ ಕರ್ನಾಟಕಕ್ಕೆ ಬರುವ ಪತ್ರದ ವಿಳಾಸ ಕನ್ನಡದಲ್ಲಿರಬಹುದು. ಊರು ಮತ್ತು ಪಿನ್ ಸಂಖ್ಯೆ ಮಾತ್ರ ಇಂಗ್ಲೀಷ್‌ಲಿಪಿಯಲ್ಲಿದ್ದರೆ ಸಾಕಲ್ಲವೇ? ಹಿಂದಿಯಲ್ಲಿದ್ದರೂ ಸರಿಯೇ. ಮುಂಬಯಿಯಿಂದ ಪತ್ರ ಬರೆಯುವಾಗ ವಿಳಾಸವನ್ನು ಕೂಡ ಕನ್ನಡದಲ್ಲಿ ಬರೆದು ಊರನ್ನು ಮಾತ್ರ ಇಂಗ್ಲೀಷಿನಲ್ಲಿ ಬರೆದು ಬೆಂಗಳೂರಿಗೆ ಕಳಿಸಿದ ಉದಾಹರಣೆಗಳೂ ಇವೆ. ಇಂತಹ ಪತ್ರಗಳು ತಡವಾಗಿ ತಲುಪುವದಿಲ್ಲವೆಂಬುದನ್ನು ಗಮನಿಸಬೇಕು. ಆದರೆ ಇಂಗ್ಲಿಷಿನಲ್ಲಿ ವಿಳಾಸ ಬರೆದ ಪತ್ರವೊಂದು ಇಂಗ್ಲಂಡಿಗೆ ಹೋಗಿಬಂದ ಸ್ವಾರಸ್ಯಕರ ವಿಷಯವನ್ನು ನೋಡಬಹುದು. ಆ ಪತ್ರದ ವಿಳಾಸಕ್ಕೆ ನಮ್ಮವರೊಬ್ಬರು U.K. ಎಂದು 'ಉತ್ತರ ಕನ್ನಡ'ದ ಸಂಕ್ಷಿಪ್ತಾಕ್ಷರಗಳನ್ನು ಬರೆದಿದ್ದರಂತೆ! U.K. ಗೆ ಹೋಗಿ, "ಉತ್ತರ ಕನ್ನಡದಲ್ಲಿ ಪ್ರಯತ್ನಿಸಿ ನೋಡಿ" ಎಂಬ ಸೂಚನೆಯೊಂದಿಗೆ ಆ ಪತ್ರ ಭಾರತಕ್ಕೆ ಬಂತಂತೆ!!

ಕನ್ನಡದ ಬಳಕೆ ನಮ್ಮ ಜನಾಂಗದಲ್ಲಿ, ಸರಕಾರದಲ್ಲಿ, ಸಂಸ್ಥೆಗಳಲ್ಲಿ ಬೆಳೆದರೆ ಅದು ಭಾರತದ ಭಾಷಾನೀತಿಗೇ ಬಲಕೊಡುತ್ತದೆ. ರಾಜ್ಯ ಸರಕಾರದ ಪ್ರಯತ್ನ ಕನ್ನಡದ ಬಳಕೆಯನ್ನು ಒತ್ತಾಯದಿಂದ ಹೇರುವಂತಾಗಬಾರದು. ಆದರೆ ರಾಜ್ಯ ಸರಕಾರದ ನೀತಿ ಸ್ಪಷ್ಟವಾಗಿ ಕನ್ನಡ ಪರವಾಗಿರಬೇಕು. ಇತರ ರಾಜ್ಯಗಳಲ್ಲಿಯೂ ಗೌರವ ಪಡೆಯುವಂತಹ ಕನ್ನಡದ ಉಪಯೋಗ ನಮ್ಮ ರಾಜ್ಯದಲ್ಲಿ ಬೆಳೆಯಬೇಕು. ಕನ್ನಡ-ತಮಿಳುಗಳನ್ನು ದೇವನಾಗರಿ ಲಿಪಿಯಲ್ಲಿ ಕಲಿಯುವ-ಬರೆಯುವ ಪ್ರಯತ್ನಗಳೂ ಸಾಗುತ್ತಿವೆ. ಅದರಂತೆ ಹಿಂದಿಯನ್ನು ಕನ್ನಡ ಲಿಪಿಯಲ್ಲಿ ಬರೆದರೂ ತಪ್ಪಲ್ಲ. ಲಿಪಿಯ ಬಂಧನ ಭಾರತೀಯ ಭಾಷೆಗಳಿಗೆ ಅವಶ್ಯವಲ್ಲ. ಸಾರ್ವತ್ರಿಕವೆನಿಸುವಂತಹ ಉಪಯೋಗ ಕನ್ನಡ ಲಿಪಿಯಲ್ಲಿಯೂ ಸಾಧ್ಯವಾಗಬಾರದೆಂದಿಲ್ಲ. ಭಾರತೀಯ ಭಾಷೆಗಳಿಗೆ ಒಂದಕ್ಕಿಂತ ಹೆಚ್ಚು ಲಿಪಿಗಳು ಇದ್ದರೂ ಸ್ವಾಗತವೇ. ಆದರೆ ರೋಮನ್ ಲಿಪಿ ಮಾತ್ರ ನಮ್ಮ ಭಾಷೆಗಳ ಶಬ್ದಗಳಿಗೆ ಯೋಗ್ಯ ಉಚ್ಚಾರ ಶಕ್ತಿಯನ್ನು ಕೊಡಲಾರದು!

ಕನ್ನಡ ಬಳಕೆಯ ಬಲ ಹಿಂದಿಯನ್ನೂ ಬೆಳೆಸಬಲ್ಲದು. 



# ಐನ್‌ಸ್ಟೈನ್ ಪತ್ರ-ಪರಮಾಣು ಅಸ್ತ್ರ

**ಜಿ. ಟಿ. ನಾರಾಯಣರಾವ್**

ಪರಮಾಣುಬಾಂಬ್ ನಿರ್ಮಾಣ ಕುರಿತ ಸಂಶೋಧನೆಯನ್ನು ಅಮೆರಿಕ ಸಂಯೋಜಿಸಬೇಕೆಂದು ಅಂದಿನ ಅಧ್ಯಕ್ಷ ಫ್ರ್ಯಾಂಕ್ಲಿನ್ ಡಿ. ರೂಸ್ವೆಲ್ಟ್ ಅವರಿಗೆ ಆಲ್ಬರ್ಟ್ ಐನ್‌ಸ್ಟೈನ್ ೧೯೩೯ ಆಗಸ್ಟ್ ಎರಡರಂದು ಬರೆದ ಆಗ್ರಹಪೂರ್ವಕ ಪತ್ರ ಕಳೆದ ೧೯–೧೨–೧೯೮೬ ರಂದು ನ್ಯೂಯಾರ್ಕಿನ ಕ್ರಿಸ್ಟೀಸ್ ಆಕ್ಷನ್ ಹೌಸಿನ ವತಿಯಿಂದ ನಡೆದ ಹರಾಜಿನಲ್ಲಿ ೨೨,೦೦೦ ಡಾಲರುಗಳ (ರೂ ೨೮.೬ ಲಕ್ಷ) ಬೆಲೆಗೆ ವಿಕ್ರಯವಾಯಿತು. ಅಮೆರಿಕದ ಕೋಟ್ಯಧೀಶ ಪ್ರಕಾಶಕ ಮಾಲ್ಕಮ್ ಫೋರ್ಬ್‌ಸ್ ಇದರ ಖರೀದಿದಾರ. ಇತಿಹಾಸದ ಗತಿಯನ್ನೇ ಬದಲಿಸಿದ್ದ ಈ ಪತ್ರ ಅತಿ ಮುಖ್ಯ ದಾಖಲೆಯೆಂದು ಈತ ವರ್ಣಿಸಿದ್ದಾನೆ.

ಈ ಸುದ್ದಿ ೧೯೮೬ರ ಡಿಸೆಂಬರ್ ೨೨ರಂದು ರಾಷ್ಟ್ರೀಯ ದೈನಿಕಗಳಲ್ಲಿ ಪ್ರಕಟವಾಗಿದೆ. ಪರಮಾಣುಶಕ್ತಿ ವರವೋ ಶಾಪವೋ ಎಂಬುವರ ಬಗ್ಗೆ ತೀವ್ರ ಅಭಿಪ್ರಾಯಮಂಥನ ನಡೆಯುತ್ತಿರುವ ಈ ದಿನಗಳಂದು ಸಹಜವಾಗಿ ಇದು ವಿಶೇಷ ಮಹತ್ವ ಪಡೆಯುತ್ತದೆ.

ಐನ್‌ಸ್ಟೈನ್ ಪತ್ರದ ಪೂರ್ಣ ಪಾಠ ಹೀಗಿದೆ:

ಆಲ್ಬರ್ಟ್ ಐನ್‌ಸ್ಟೈನ್
ಓಲ್ಡ್ ಗ್ರೂವ್ ರೋಡ್
ನಾಸ್ಸೌ ಪಾಯಿಂಟ್
ಪೆಕೋನಿಕ್, ಲಾಂಗ್ ಐಲೆಂಡ್
ಆಗಸ್ಟ್ ೨, ೧೯೩೯

ಎಫ್. ಡಿ. ರೂಸ್ವೆಲ್ಟ್
ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ
ವೈಟ್ ಹೌಸ್
ವಾಷಿಂಗ್ಟನ್, ಡಿ. ಸಿ.

ಮಾನ್ಯರೇ

ಇ. ಫರ್ಮಿ ಮತ್ತು ಎಲ್. ಝೀಲಾರ್ಡ್ ಇವರ ಈಚಿನ ಸಂಶೋಧನೆಯ ಹಸ್ತಪ್ರತಿಯನ್ನು ನಾನು ನೋಡಿದ್ದೇನೆ. ಇದರ ಪ್ರಕಾರ ಸದ್ಯೋಭವಿಷ್ಯದಲ್ಲೇ ಯುರೇನಿಯಮ್ ಧಾತು

ವನ್ನು ಶಕ್ತಿಯ ನೂತನ ಮತ್ತು ಪ್ರಮುಖ ಆಕರವಾಗಿ ಪರಿವರ್ತಿಸುವುದು ಸಾಧ್ಯವಾದೀತೆಂದು ನಿರೀಕ್ಷಿಸುತ್ತೇನೆ. ಈ ಸನ್ನಿವೇಶದ ಕೆಲವೊಂದು ಮುಖಗಳನ್ನು ಜಾಗರೂಕತೆಯಿಂದ ಪರಿಶೀಲಿಸುವುದೂ, ಮತ್ತು ಅವಶ್ಯವಾದರೆ, ಆಡಳಿತ ವಿಭಾಗ ಈ ದಿಶೆಯಲ್ಲಿ ಒಡನೆ ಕಾರ್ಯೋದ್ಯುಕ್ತವಾಗುವುದೂ ಅಗತ್ಯವೆಂದು ತೋರುತ್ತದೆ. ಆದ್ದರಿಂದ ಈ ಮುಂದಿನ ವಾಸ್ತವಾಂಶಗಳನ್ನೂ, ಶಿಫಾರಸುಗಳನ್ನೂ ನಿಮ್ಮ ಗಮನಕ್ಕೆ ತರುವುದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

ಯುರೇನಿಯಮ್ಮಿನ ಭಾರೀ ಒಂದು ರಾಶಿಯಲ್ಲಿ ಬೈಜಿಕ ಕ್ರಿಯೆಗಳನ್ನು ಪ್ರವರ್ತಿಸುವುದು ಸಾಧ್ಯವಾದೀತು ಮತ್ತು ಈ ಕ್ರಿಯೆಗಳಿಂದ ಭಾರಿ ಮೊತ್ತದ ಸಾಮರ್ಥ್ಯ ಹಾಗೂ ರೇಡಿಯಮ್‌ಸದೃಶ ನೂತನ ಧಾತುಗಳು ಸಂಜನಿಸಬಹುದು ಎಂಬ ಸಂಗತಿಗಳು, ಕಳೆದ ನಾಲ್ಕು ತಿಂಗಳ ಅವಧಿಯಲ್ಲಿ, ಫ್ರಾನ್ಸಿನಲ್ಲಿ ಜೂಲಿಯೋ ಅಂತೆಯೇ ಅಮೆರಿಕದಲ್ಲಿ ಫರ್ಮಿ ಮತ್ತು ಝಿಲಾರ್ಡ್ ಮಾಡಿರುವ ಸಂಶೋಧನೆಗಳಿಂದ ಸಂಭಾವ್ಯವಾಗಿವೆ. ಸದ್ಯೋಭವಿಷ್ಯದಲ್ಲೇ ಇದು ಸಿದ್ಧಿಸುವುದು ಹೆಚ್ಚು ಕಡಿಮೆ ಖಚಿತ ಎಂದು ಈಗ ತೋರುತ್ತಿದೆ.

ಈ ನೂತನ ವಿದ್ಯಮಾನ ಬಾಂಬುಗಳ ನಿರ್ಮಾಣಕ್ಕೆ ಕೂಡ ಕಾರಣವಾಗಬಹುದು. ಜೊತೆಗೆ ಹೊಸ ಮಾದರಿಯ ಅತಿ ಸಾಮರ್ಥ್ಯಯುತ ಬಾಂಬುಗಳು ಈ ತೆರನಾಗಿ ನಿರ್ಮಿಸಲ್ಪಡುವುದನ್ನು — ಖಾತರಿ ಹೀಗೆಯೇ ಆದೀತೆಂದು ಹೇಳಲಾಗದಿದ್ದರೂ—ನಾವು ಕಲ್ಪಿಸಿಯೂ ಕೊಳ್ಳಬಹುದು ದೋಣಿಯಲ್ಲಿ ಒಯ್ದು ರೇವಿನಲ್ಲಿ ಸ್ಫೋಟಿಸಬಹುದಾದ ಈ ಮಾದರಿಯ ಕೇವಲ ಒಂದು ಬಾಂಬ್, ಆಸುಪಾಸಿನ ಒಂದಿಷ್ಟು ಪ್ರದೇಶವನ್ನೂ ಒಳಗೊಂಡಂತೆ, ಇಡೀ ರೇವನ್ನೇ ನಾಶಗೊಳಿಸುವುದು ಸಾಧ್ಯವಿದೆ. ವಾಯುಸಾಗಣೆಗೆ ಮಾತ್ರ ಇಂಥ ಬಾಂಬುಗಳು ಅತಿ ಭಾರವೆನಿಸಬಹುದು.

ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಕೆಳದರ್ಜೆಯ ಯುರೇನಿಯಮ್ ಅದುರು ಮಿತ ಪ್ರಮಾಣದಲ್ಲಿ ಮಾತ್ರ ಲಭ್ಯವಿದೆ. ಕೆನಡಾದಲ್ಲಿಯೂ ಈ ಮೊದಲಿನ ಚೆಕೊಸ್ಲೋವಾಕಿಯಾದಲ್ಲಿಯೂ ಒಂದಿಷ್ಟು ಒಳ್ಳೆಯ ಅದುರುಂಟು. ಬೆಲ್ಜಿಯಮ್‌ನ ಕಾಂಗೋವೇ ಯುರೇನಿಯಮ್ಮಿನ ಅತಿ ಪ್ರಮುಖ ಆಕರ.

ಪರಿಸ್ಥಿತಿ ಹೀಗಿರುವಾಗ ಆಡಳಿತ ವಿಭಾಗಕ್ಕೂ ಅಮೆರಿಕದಲ್ಲಿ ಶೃಂಖಲಾಕ್ರಿಯೆ ಮೇಲೆ ಕಾರ್ಯವೆಸಗುತ್ತಿರುವ ಭೌತ ವಿಜ್ಞಾನಿಗಳ ತಂಡಕ್ಕೂ ನಡುವೆ ಒಂದು ವಿಧವಾದ ಶಾಶ್ವತ ಸಂಪರ್ಕ ಏರ್ಪಡಿಸುವುದು ಅಪೇಕ್ಷಣೀಯವೆಂದು ನೀವು ಭಾವಿಸಬಹುದು. ನಿಮ್ಮ ವಿಶ್ವಾಸಕ್ಕೆ ಪಾತ್ರನಾಗಿರುವ ಒಬ್ಬ ವ್ಯಕ್ತಿಗೆ ಈ ಹೊಣೆ ವಹಿಸಿಕೊಡುವುದು ಇದನ್ನು ಸಾಧಿಸಬಹುದಾದ ಒಂದು ಮಾರ್ಗ. ಪ್ರಾಯಶಃ ಈತ ಒಬ್ಬ ಖಾಸಗಿ ಅಧಿಕಾರಿಯಾಗಿ ವ್ಯವಹರಿಸಬೇಕಾದೀತು. ಈತನ ಹೊಣೆ ಈ ಮುಂದಿನವನ್ನು ಒಳಗೊಂಡಿರಬಹುದು:

೧. ಸರ್ಕಾರದ ಇಲಾಖೆಗಳ ಜೊತೆ ಸಂಪರ್ಕ ಇಟ್ಟುಕೊಳ್ಳುವುದು, ಮುಂದಿನ ಅಭಿವರ್ಧನೆಗಳನ್ನು ಕುರಿತ ಮಾಹಿತಿಯನ್ನು ಅವುಗಳಿಗೆ ಒದಗಿಸುವುದು, ಮತ್ತು ಸಂಯುಕ್ತ ಸಂಸ್ಥಾನಗಳು ಯುರೇನಿಯಮ್ ಅದುರಿನ ಸರಬರಾಜು ಪಡೆಯುವ ಸಮಸ್ಯೆ ಕುರಿತು ನಿರ್ದಿಷ್ಟ ಗಮನ ಹರಿಸಿ ಯುಕ್ತ ಕಾರ್ಯವೆಸಗಲು ಸರ್ಕಾರಕ್ಕೆ ಶಿಫಾರಸುಗಳನ್ನು ಒಪ್ಪಿಸುವುದು.

೨. ಸದ್ಯದಲ್ಲಿ ವಿಶ್ವವಿದ್ಯಾಲಯಗಳ ಪ್ರಯೋಗಾಲಯಗಳು ತಮ್ಮ ಆರ್ಥಿಕ ಮಿತಿಯೊಳಗೆ ನಿರ್ವಹಿಸುತ್ತಿರುವ ಪ್ರಾಯೋಗಿಕ ಕಾರ್ಯವನ್ನು, ಅವಶ್ಯವೆನಿಸಿದರೆ, ಅವುಗಳಿಗೆ ಅಧಿಕ ಮೊಬಲಗು ಭರಿಸಿ ತ್ವರೆಗೊಳಿಸುವುದು. ಇದನ್ನು ಈತ ಇಂಥ ಕೆಲಸಕ್ಕೆ ದೇಣಿಗೆಗಳನ್ನು ನೀಡಲು ಮುಂಬರುವ ಖಾಸಗಿ ವ್ಯಕ್ತಿಗಳನ್ನು ಸಂಪರ್ಕಿಸಿ ಒದಗಿಸಬೇಕು; ಅಲ್ಲದೇ ಅಗತ್ಯ ಸಲಕರಣೆಗಳನ್ನು ಹೊಂದಿರುವ

ಕೈಗಾರಿಕೋದ್ಯಮಗಳ ಪ್ರಯೋಗಾಲಯಗಳ ಸಹಕಾರವನ್ನೂ ಪಡೆಯಬಹುದು.

ಈಗ ಜರ್ಮನಿ ವಶಪಡಿಸಿಕೊಂಡಿರುವ ಚೆಕೊಸ್ಲೋವಾಕಿಯದ ಗಣಿಗಳಿಂದ ಯುರೇನಿಯಮ್ ವಿಕ್ರಯವನ್ನು ಜರ್ಮನಿ ರದ್ದುಗೊಳಿಸಿದೆಯೆಂದು ನನಗೆ ತಿಳಿದುಬಂದಿದೆ. ಜರ್ಮನ್ ಅಂಡರ್‌ಸೆಕ್ರೆಟರಿ ಆಫ್ ಸ್ಟೇಟ್ ಇವರ ಮಗ ಫಾನ್ ವೈಟ್ಸೇಕರ್ ಎಂಬವರು ಬರ್ಲಿನ್ನಿನ ಕೈಸರ್ ವಿಲ್ಹೆಲ್ಮ್ ಇನ್‌ಸ್ಟಿಟ್ಯೂಟಿಗೆ ಲಗತ್ತಾಗಿದ್ದಾರೆ; ಮತ್ತು ಆ ಇನ್‌ಸ್ಟಿಟ್ಯೂಟಿನಲ್ಲಿ ಅಮೆರಿಕ ಯುರೇನಿಯಮ್ಮಿನ ಮೇಲೆ ನಡೆಸುತ್ತಿರುವ ಕೆಲವು ಪ್ರಯೋಗಗಳನ್ನು ಪುನರಾವರ್ತಿಸಲಾಗುತ್ತಿದೆ— ಈ ಸಂಗತಿಗಳನ್ನು ಹಿನ್ನೆಲೆಯಲ್ಲಿಟ್ಟುಕೊಂಡರೆ ಜರ್ಮನಿ ಇಷ್ಟು ಕ್ಷಿಪ್ರವಾಗಿ ಕಾರ್ಯಪ್ರವೃತ್ತವಾಗಿರುವುದೇಕೆಂಬುದನ್ನು ಅರ್ಥವಿಸುವುದು ಸಾಧ್ಯವಿದೆ.

ನಿಮ್ಮ ಅತ್ಯಂತ ವಿಶ್ವಾಸಿ
ಎ. ಐನ್‌ಸ್ಟೈನ್

ಪತ್ರಲೇಖಕ ಸಾಕ್ಷಾತ್ ಐನ್‌ಸ್ಟೈನರೇ ಆಗಿದ್ದರೂ, ಇದು ಸರ್ಕಾರದ ನೀತಿ ಧೋರಣೆಗಳ ಮೇಲೆ ಗಹನ ಪರಿಣಾಮ ಬೀರಬಲ್ಲದಾದ್ದರಿಂದ, ಇದನ್ನು ಅಧ್ಯಕ್ಷರ 'ಕಿವಿ ಮೇಲೆ ಹತೋಟಿ ಇರುವ' ಮಿತ್ರನೊಬ್ಬ ಯೋಗ್ಯ ಮುಹೂರ್ತದಲ್ಲಿ ಅವರ ಗಮನಕ್ಕೆ ತರುವುದು ಅಗತ್ಯವಾಗಿತ್ತು. ಈ ಎಚ್ಚರ ವಹಿಸದಿದ್ದರೆ ಐನ್‌ಸ್ಟೈನರ ರುಜು ನೋಡಿದ ಅಧ್ಯಕ್ಷರು, ಪ್ರಾಯಶಃ ಕಡುಕೆಂಪು ಶಾಯಿಯಲ್ಲಿ "x ಇಲಾಖೆಯ ತುರ್ತು ಗಮನಕ್ಕೆ" ಎಂಬ ಷರಾ ಗೀಚಿ ಇಡೀ ವಿಷಯವನ್ನೇ ಮರೆತುಬಿಡುವ ಅಪಾಯವಿತ್ತು. ಅಲ್ಲದೇ ಐನ್‌ಸ್ಟೈನ್ ಪತ್ರ ಕೆಲವೊಂದು ವಿಶಾಲ ತತ್ತ್ವಗಳನ್ನು ಉಲ್ಲೇಖಿಸಿತ್ತೇ ವಿನಾ ಆ ಕುರಿತ ವಿವರಗಳನ್ನು ಒಳಗೊಂಡಿರಲಿಲ್ಲ.

ಈ ಪತ್ರದ ಪ್ರೇರಕಬಲವಾದ ಝೀಲಾರ್ಡ್* ಇದಕ್ಕೊಂದು ಸುದೀರ್ಘ ತಾಂತ್ರಿಕ ಟಿಪ್ಪಣಿ ಲಗತ್ತಿಸಿದರು. ಅಧ್ಯಕ್ಷರ 'ಕರ್ಣರಕ್ಷಕ' ಅಥವಾ 'ಕರ್ಣನ್ಯಾಸಧಾರಿ' ಮಿತ್ರರಾದ ಅಲೆಕ್ಸಾಂಡರ್ ಸ್ಯಾಕ್ಸ್ ಎಂಬವರನ್ನು ಅಧ್ಯಕ್ಷರಲ್ಲಿಗೆ ಶಾಂತಿಯ ರಾಯಭಾರಿಯಾಗಿ ಹೋಗಲು ಒಪ್ಪಿಸಿದರು.

ಇಷ್ಟೆಲ್ಲ ಸನ್ನಾಹಗಳಾಗುವ ವೇಳೆಗೆ ಸೆಪ್ಟೆಂಬರ್ ಒಂದು ಬಂದಿತ್ತು (೧೯೩೯). ಹಿಟ್ಲರ್ ಪೋಲೆಂಡಿನ ಮೇಲೆ ದಂಡು ಹಾಯಿಸಿ ಎರಡನೆಯ ಮಹಾಯುದ್ಧ ಸಾರಿಯೇ ಬಿಟ್ಟಿದ್ದ. ಪ್ರಪಂಚ ವಿಡೀ ಯುದ್ಧ ಕಂಪನದಿಂದ ತತ್ತರಿಸಿ ಹೋಯಿತು. ರೂಸ್ವೆಲ್ಟ್ ವಿರಾಮರಹಿತರಾಗಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ವ್ಯವಹರಿಸಬೇಕಾಯಿತು.

ಸ್ಯಾಕ್ಸರಿಗೆ ಅಕ್ಟೋಬರ್ ೧೧ರಂದು ಅನುಕೂಲ ಮುಹೂರ್ತ ಒದಗಿ ಬಂದಿತು. ಅಧ್ಯಕ್ಷರಿಗೆ ಅಂದು ಕೊಂಚ ವಿರಾಮವಿತ್ತು. ಪರಿಸ್ಥಿತಿಯ ಗಹನತೆಯನ್ನು ಅವರಿಗೆ ಚೆನ್ನಾಗಿ ಮುಂದಟ್ಟು ಮಾಡಲೋಸ್ಕರ ಸ್ಯಾಕ್ಸ್ ತಾವೇ ದಾಖಲೆಗಳನ್ನು ಓದಿ ಹೇಳತೊಡಗಿದರು: ಮೊದಲು ಐನ್‌ಸ್ಟೈನ್ ಪತ್ರ, ಬಳಿಕ ಝೀಲಾರ್ಡ್ ಟಿಪ್ಪಣಿ, ಕೊನೆಗೆ ಸ್ವಂತ ಸುದೀರ್ಘ ವಿವರಣೆ. ಈ ಅವ್ಯಾಹತ ವಾಗ್ಝರಿಯನ್ನು ಅಧ್ಯಕ್ಷರು ಉತ್ಸಾಹದಿಂದ ಸ್ವೀಕರಿಸಲಿಲ್ಲ. ಅವರಿಗೆ ಬಿಡಿಚಲು ಬಿಡಿದದ್ದು

---

* "ನಿಮ್ಮಲ್ಲಿ ಎಷ್ಟು ಮಂದಿಗೆ ಝೀಲಾರ್ಡ್ ಅವರ ಪರಿಚಯವಿದೆಯೋ ತಿಳಿಯೆ. ಹೆಚ್ಚು ಮಂದಿಗೆ ತಿಳಿದಿದೆ ಎಂಬುದಂತೂ ನಿಜ. ಖಂಡಿತನಾಗಿಯೂ ಅವರೊಬ್ಬ ವಿಚಿತ್ರ ವ್ಯಕ್ತಿ. ಅತ್ಯಂತ ಧೀಮಂತ— ಇಲ್ಲ, ಇದು ಅವನಿರೂಪಣೆ (under statement). ಅವರು ಅತ್ಯಂತ ಉಜ್ವಲ ಜನ ಬೆಚ್ಚಿಬೀಳುವಂತೆ ಮಾಡುವುದರಲ್ಲಿ ಅವರೊಂದು ತೆರನಾದ ಸಂತೃಪ್ತಿ ಪಡೆಯುವರೆಂದು ತೋರುತ್ತದೆ— ಅಂತೂ ಇಂಥ ಚಿತ್ರವನ್ನು ಅವರು ನನ್ನಲ್ಲಿ ಪಡಿಮೂಡಿಸಿದ್ದಾರೆ."

ಇ. ಫರ್ಮಿ (ಒಂದು ಭಾಷಣದಲ್ಲಿ)

ಸ್ಪಷ್ಟವಾಗಿತ್ತು. "ವಿಷಯ ತುಂಬ ಕುತೂಹಲ ಕಾರಿಯಾಗಿದೆ. ಆದರೆ ಸರ್ಕಾರ ಹಸ್ತಕ್ಷೇಪ ಮಾಡಲು ಕಾಲವಿನ್ನೂ ಪಕ್ವವಾಗಿಲ್ಲ" ಎಂದು ಹೇಳಿ ಎದ್ದರು.

ಬರೆಯುಂಚಿನಿಂದ ದರೆಗೆ ಕೆಡೆದಂತಾದರು ಸ್ಯಾಕ್ಸ್. ಅಧ್ಯಕ್ಷರೊಡನೆ ಇವರು ಕೂಡ ಏಳ ಬೇಕಾಯಿತು. ಆದರೆ ಮರು ಹೊತ್ತಾರೆಯ ನಾಷ್ಟಾಕ್ಕೆ ಕರೆಗಿಟ್ಟಿಸಿಕೊಳ್ಳುವ ಮೊದಲು ಅಲ್ಲಿಂದ ಕಂಬಿ ಕೀಳಲಿಲ್ಲ.

ಮರುಮುಂಜಾನೆ ಅಧ್ಯಕ್ಷರನ್ನು ಪಳಗಿಸಿ ಒಲಿಸುವುದು ಹೇಗೆ? ಸಮಸ್ಯೆಯ ತೀವ್ರತೆ ಅವರಿಗೆ ತಟ್ಟುವಂತೆ ವಿವರಿಸುವುದು ಹೇಗೆ? ಸ್ಯಾಕ್ಸ್ ರಾತ್ರಿ ಇಡೀ ಚಿಂತಿಸಿದರು. ಹೂದೋಟ ದಲ್ಲಿ ಶತಪಥ ಅಡ್ಡಾಡಿದರು. ಅರಿಲುಗಳ ಅಡಿ ಯಲ್ಲಿ ಕಲ್ಲು ಚಪ್ಪಡಿ ಮೇಲೆ ಕುಳಿತು ಮಾನವ ಜನಾಂಗದ ಭವಿಷ್ಯದ ಬಗ್ಗೆ ಗಾಢ ಚಿಂತಾಮಗ್ನ ರಾದರು. ಹಠಾತ್ತಾಗಿ ಸ್ಫೂರ್ತಿ ಉಕ್ಕಿತು. ಹೊಸ ಹಾದಿ ಹೊಳೆಯಿತು. ಹಗುರಾದ ಒಡಲಿನಿಂದ ಮೇಲೆದ್ದರು.

ಯೋಚನಾಕ್ರಾಂತ ರೂಸ್ವೆಲ್ಟ್ ಉಪಾಹಾರ ಮೇಜದ ಎದುರು ಒಬ್ಬಂಟಿಗರಾಗಿ ಕುಳಿತಿದ್ದಾರೆ. ಅವರಿಗೆ ಸುಪ್ರಭಾತ ಕೋರುತ್ತ ಸ್ಯಾಕ್ಸ್ ಒಳ ಪ್ರವೇಶಿಸಿದ್ದಾರೆ.

ಅಧ್ಯಕ್ಷ "ಈ ಶುಭ ಭವ್ಯ ಪ್ರಾತಃಕಾಲ ನವೋಜ್ವಲ ಭಾವನೆ ಏನನ್ನು ಧರಿಸಿ ಆಗಮಿಸಿದ್ದೀರಿ? ಅದನ್ನು ಮಂಡಿಸಿ ವಿವರಿಸಲು ಕಾಲಾವಕಾಶ ಎಷ್ಟು ಬೇಕಾದೀತು?" ನುಡಿಯ ಕೊಂಕು ಸ್ಯಾಕ್ಸರನ್ನು ಕುಟುಕದಿರಲಿಲ್ಲ.

ಸ್ಯಾಕ್ಸ್ "ನಾನೇನೂ ಹೆಚ್ಚು ಕಾಲ ತೆಗೆದು ಕೊಳ್ಳುವುದಿಲ್ಲ. ಆದರೆ ನಿಮಗೊಂದು ಕತೆ ಹೇಳಬೇಕೆಂಬುದು ನನ್ನಾಸೆ. ನೆಪೋಲಿಯನ್ [1769-1821] ಹೂಡಿದ ಹಿರಿ ಕಾಳಗದ ದಿನಗಳು. ಅಮೆರಿಕದ ಉಪಜ್ಞೆಕಾರ (inventor) ಮತ್ತು ಎಂಜಿನಿಯರ್ ರಾಬರ್ಟ್ ಫಲ್ಟನ್ [1765-1815] ಚಕ್ರವರ್ತಿ ಮಹಾ ಪ್ರತಾಪನ ಭೇಟಿ ಕೋರಿ ಪಡೆದ. ತಾನು ಚಕ್ರವರ್ತಿಗೆ ಉಗಿ ಹಡಗು ಪಡೆ ಕಟ್ಟಿ ಕೊಡುವುದಾಗಿಯೂ ಅದರ ನೆರವಿನಿಂದ ನೆಪೋಲಿಯನ್ ಎಂಥ ಪ್ರತಿಕೂಲ ಹವೆಯಲ್ಲಿ ಕೂಡ ಯಶಸ್ವಿಯಾಗಿ ಸಮುದ್ರಯಾನಗೈದು ಇಂಗ್ಲೆಂಡಿನಲ್ಲಿ ಲಂಗರು ಹೂಡಬಹುದಾಗಿಯೂ ನಿವೇದಿಸಿದ. ಹಾಯಿ ಪಟಗಳಿಲ್ಲದ ಹಡಗುಗಳು? ಎಲ್ಲಾದರೂ ಉಂಟೇ! ಚಾಣಾಕ್ಷ ಮಹಾಪ್ರಭುವಿಗೆ ಇದೊಂದು ಹುಚ್ಚು ಯೋಜನೆಯೆಂದು ಖಚಿತವಾಗಿತ್ತು. ಫಲ್ಟನ್ನನನ್ನು ಪುರಸ್ಕರಿಸಿ ಗೌರವಿಸುವುದರ ಬದಲು ತಿರಸ್ಕರಿಸಿ ಅಪಮಾನಿಸಿದ. ವಿರೋಧಿಯ ಅದೂರದರ್ಶಿತ್ವ ಹೇಗೆ ಇಂಗ್ಲೆಂಡನ್ನು ರಕ್ಷಿಸಿತು ಎನ್ನುವುದಕ್ಕೆ ಇದೊಂದು ನಿದರ್ಶನವೆಂದು ಇಂಗ್ಲೆಂಡಿನ ಇತಿಹಾಸಕಾರ ಲಾರ್ಡ್ ಆಕ್ಟನ್ [1834-1902] ಅಭಿಪ್ರಾಯಪಟ್ಟಿದ್ದಾನೆ. ಅಂದು ನೆಪೋಲಿಯನ್ ಏನಾದರೂ ಅಧಿಕ ಕಲ್ಪನಾ ಸಾಮರ್ಥ್ಯವನ್ನೂ ವಿನಯ ಸೌಜನ್ಯವನ್ನೂ ಪ್ರದರ್ಶಿಸಿದುದಾಗಿದ್ದರೆ ಹತ್ತೊಂಬತ್ತನೆಯ ಶತಮಾನದ ಚರಿತ್ರೆ ಪೂರ್ತಿ ಭಿನ್ನ ಮಾರ್ಗಗಾಮಿಯಾಗಿರುತ್ತಿತ್ತು."

ಸ್ಯಾಕ್ಸರ ವಾದ ವೈಖರಿ ಲಗಾಯಿಸಿದ ಚಾಟಿಯ ಚುರುಕು ರೂಸ್ವೆಲ್ಟರ ಬ್ರಹ್ಮ ರಂಧ್ರವನ್ನೇ ಇರಿದು ಹಂದಾಡಿಸಿತು. ಕೆಲವು ಕ್ಷಣ ನೀರವ, ನಿಸ್ಪಂದ. ಚೂರು ಕಾಗದ ಎತ್ತಿಕೊಂಡರು. ಅದರ ಮೇಲೇನೋ ಗೀಚಿ ದೂತನ ಕೈಗಿತ್ತರು. ಆತ ಒಡನೆ ಹೊರಗೆ ಓಡಿದ. ಭಯಭಕ್ತಿಸಹಿತ ದೊಡ್ಡದೊಂದು ಭಾಂಗಿ ಹೊತ್ತು ತಂದ. ಮೇಜಿನ ಮೇಲೆ ಮೃದುವಾಗಿ ಇಟ್ಟ. ಸಾವಕಾಶವಾಗಿಯೂ ನಯವಾಗಿಯೂ ಅದನ್ನು ಬಿಚ್ಚತೊಡಗಿದ. ಅದರೊಳಗೇನಿತ್ತು? ಅನಾದಿ ಕಾಲದ ಅಮೂಲ್ಯ ಅಮೃತ! ನೆಪೋಲಿಯನ್‌ಯುಗದ ಶೀತಲ ಫ್ರೆಂಚ್ ಬ್ರ್ಯಾಂಡಿ. (ಹಳೆಯ ಬ್ರ್ಯಾಂಡಿಗೆ ಅಧಿಕ kick 'ಉ'!) ಅಧ್ಯಕ್ಷರ ಕೈಕರಣ ಸೂಚನೆ. ದೂತ ಎರಡು

ಚಷಕ ಭರ್ತಿ ಮಾಡಿದ. ಇತಿಹಾಸನಿರ್ಮಾಪಕ ಪುರುಷರು ಬಟ್ಟಲುಗಳನ್ನೆತ್ತಿದರು, ಕರಚಾಚಿದರು, ಕ್ಲಿಕ್ಕಿಸಿದರು, ಉತ್ಸಾಹದಾಯಕ ಮಾರ್ಗದರ್ಶಕ ಅಮೃತಪಾನೋದ್ಯುಕ್ತರಾದರು.

ಅಧ್ಯಕ್ಷರೇ ಮೌನ ಸೀಳಿದರು "ಅಲೆಕ್ಸ್! ನಾಟ್ಸಿಗಳು ನಮ್ಮನ್ನು ಸರ್ವನಾಶಗೊಳಿಸತಕ್ಕದ್ದಲ್ಲವೆಂಬುದು ತಾನೇ ನಿಮ್ಮ ಇಂಗಿತ?"

"ಅದೇ!"

ಅಧ್ಯಕ್ಷರು ತಮ್ಮ ಸೇನಾ ಸಲಹೆಗಾರ ಜನರಲ್ ಪಾ ವಾಟ್ಸನ್ ಅವರನ್ನು ಬುಲಾಯಿಸಿದರು. ಜನರಲ್ ಬಂದರು. ಲಕ್ಷ್ಮನೆ ನಿಂತರು. ಮಿಂಚು ಬಿರಿದಂತೆ ಸಲಾಮು ಹೊಡೆದರು. ಅಪ್ಪಣೆ ಕಾದರು.

ಅಧ್ಯಕ್ಷ "ಪಾ! ಇದು ಕ್ರಿಯೆ ಬೇಡುತ್ತದೆ."

ಇದು = ಸ್ಯಾಕ್ಸ್ ರೂಸ್ವೆಲ್ಟರಿಗೆ ಒಪ್ಪಿಸಿದ ಐನ್‌ಸ್ಟೈನ್ ಪತ್ರವನ್ನು ಒಳಗೊಂಡಿದ್ದ ಸಮಸ್ತ ದಾಖಲೆಗಳು.

ಪರಮಾಣು ಬಾಂಬ್ ನಿರ್ಮಾಣಕ್ಕೆ ಅಸ್ತು ಮುದ್ರೆ ಒತ್ತಿದ ಬೀಜ ಮಂತ್ರ: ಪಾ! ಇದು ಕ್ರಿಯೆ ಬೇಡುತ್ತದೆ.

ಐನ್‌ಸ್ಟೈನ್ ಪತ್ರಕ್ಕೆ ರೂಸ್ವೆಲ್ಟ್ ಮಾರೋಲೆ ಬರೆದರು. ಅದರ ಪೂರ್ಣ ಪಾಠ ಹೀಗಿದೆ:

ದಿ ವೈಟ್ ಹೌಸ್, ವಾಷಿಂಗ್ಟನ್
ಅಕ್ಟೋಬರ್ ೧೯, ೧೯೩೯

ಪ್ರಿಯ ಪ್ರಾಚಾರ್ಯರೇ,

ನಿಮ್ಮ ಈಚಿನ ಪತ್ರ ಮತ್ತು ಅದಕ್ಕೆ ಲಗತ್ತಾಗಿದ್ದ ಅತ್ಯಂತ ಕುತೂಹಲಕಾರಿ ಹಾಗೂ ಗಹನ ದಾಖಲೆಗಳಿಗಾಗಿ ನಿಮಗೆ ವಂದನೆಗಳು.

ಈ ಮಾಹಿತಿಗಳು ಅತ್ಯಂತ ಗಮನಾರ್ಹವಾದುವೆಂದು ನನಗೆ ಅನ್ನಿಸಿದೆ. ಎಂದೇ ಯುರೇನಿಯಮ್ ಧಾತು ಕುರಿತಂತೆ ನಿಮ್ಮ ಸೂಚನೆಯ ಸಾಧ್ಯತೆಗಳನ್ನು ಆದ್ಯಂತ ಅನ್ವೇಷಿಸಲು ನಾನು ಬ್ಯೂರೋ ಆಫ್ ಸ್ಟ್ಯಾಂಡರ್ಡ್ಸ್‌ನ ಮುಖ್ಯಸ್ಥ ಹಾಗೂ ಸೇನೆ ಮತ್ತು ನೌಕೆ ಆಯ್ದ ಒಬ್ಬ ಪ್ರತಿನಿಧಿ ಇವರನ್ನು ಒಳಗೊಂಡಿರುವ ಒಂದು ಮಂಡಳಿಯನ್ನು ರೂಪಿಸಿದ್ದೇನೆ.

ಡಾ. ಸ್ಯಾಕ್ಸ್ ಈ ಮಂಡಳಿಯ ಜೊತೆ ಸಹಕರಿಸಿ ಕೆಲಸ ಮಾಡಲಿದ್ದಾರೆಂದು ನಿಮಗೆ ತಿಳಿಸಲು ಸಂತೋಷವಾಗುತ್ತದೆ. ಪ್ರಸಕ್ತ ವಿಷಯ ಕುರಿತಂತೆ ಇದು ಅತ್ಯಂತ ವ್ಯಾವಹಾರಿಕ ಹಾಗೂ ಪರಿಣಾಮಕಾರಿ ವಿಧಾನವೆಂದು ಭಾವಿಸಿದ್ದೇನೆ.

ನನ್ನ ತುಂಬು ಹೃದಯದ ಧನ್ಯವಾದಗಳನ್ನು ದಯವಿಟ್ಟು ಸ್ವೀಕರಿಸಿ.

ನಿಮ್ಮ ಅತ್ಯಂತ ವಿಶ್ವಾಸಿ
**ಫ್ರ್ಯಾಂಕ್ಲಿನ್ ಡಿ. ರೂಸ್ವೆಲ್ಟ್**

ಡಾ. ಆಲ್ಬರ್ಟ್ ಐನ್‌ಸ್ಟೈನ್
ಓಲ್ಡ್ ಗ್ರೂವ್ ರೋಡ್
ನಾಸೌ ಪಾಯಿಂಟ್, ಪೆಕೋನಿಕ್
ಲಾಂಗ್ ಐಲೆಂಡ್, ನ್ಯೂಯಾರ್ಕ್

ಮುಂದೆ ಏನಾಯಿತೆಂಬುದು ಈಗ ಇತಿಹಾಸದ ಕರಾಳ ದಾಖಲೆಯಾಗಿಹೋಗಿದೆ. ಪ್ರಮುಖ ಹಂತಗಳಿವು:

* ಪರಮಾಣುಬಾಂಬಿನ ನಿರ್ಮಾಣಕ್ಕೆ ಅಮೆರಿಕ ಸರ್ಕಾರದ ಅಧಿಕೃತ ಒಪ್ಪಿಗೆ (೬-೮-೧೯೪೧)

* ಪರಮಾಣುಬಾಂಬ್ ನಿರ್ಮಾಣದ ಸಾಧ್ಯತೆಯನ್ನು ರೂಪಿಸಲು ಸಮರ್ಥ ಹಾಗೂ ವಿಶ್ವಾಸಾರ್ಹ ವಿಜ್ಞಾನಿಗಳ ಹಾಗೂ ಆಡಳಿತಗಾರರ ಶೋಧನೆ

* DSM (Development of Substitute Materials) ಎಂಬ ಸಾಂಕೇತಿಕ ನಾಮಹೊತ್ತ ಮನಹಟ್ಟನ್ ಯೋಜನೆಯ ಸ್ಥಾಪನೆ (೧೩-೮-೧೯೪೨)

ಶೃಂಖಲಾಕ್ರಿಯೆಯಲ್ಲಿ ಪರಮಾಣು ಬಾಂಬಿನ

ಯಶಸ್ಸು—ಮಾನವ ಪ್ರಜ್ವಲಿಸಿದ ಪ್ರಥಮ ಪರಮಾಣವಿಕಾಗ್ನಿ (೨-೧೨-೧೯೪೨);

* ನ್ಯೂ ಮೆಕ್ಸಿಕೋದ ನಿರ್ಜನ ಪ್ರದೇಶದಲ್ಲಿ ಪ್ರಥಮ ಪರಮಾಣು ಬಾಂಬಿನ ಯಶಸ್ವಿ ಸ್ಫೋಟನೆ ಮತ್ತು ಅಣಬೆ ರೂಪದ ವಿಕಿರಣ ಪಟು ಮೇಘದ ಉತ್ಪಾಟನೆ (ನಾಗರಿಕತೆಗೆ ತೊಡಿಸಿದ ಶವ ವಸ್ತ್ರ) (೧೬-೭-೧೯೪೫)

ಎಂದಿನಂತೆ ಅಂದು ಕೂಡ ಐನ್‌ಸ್ಟೈನ್ ಮಲಗುಕೊಠಡಿಯಿಂದ ಸಂಜೆ ಚಹಾಸೇವನೆಗಾಗಿ ಪಾವಟಿಗೆ ಇಳಿದು ಕೆಳಗೆ ಬಂದರು. ಕಾರ್ಯದರ್ಶಿ ಹೆಲನ್ ಡ್ಯೂಕಾಸ್ ತಾವು ತತ್ಪೂರ್ವ ಆಲಿಸಿದ್ದ ರೇಡಿಯೊ ದುರ್ವಾರ್ತೆಯನ್ನು ಇವರಿಗೆ ಅರುಹಿದರು: ಜಪಾನಿನ ಹಿರೊಶಿಮಾದ ಮೇಲೆ ಪರಮಾಣು ಬಾಂಬಿನ ತಾಡನೆ. ಇದನ್ನು ಕೇಳಿ ತೀವ್ರಾಘಾತಕ್ಕೆ ತುತ್ತಾದ ಈ ಶಾಂತಿದೂತ ಕೋಮಲ ಹೃದಯ ಬಿಟ್ಟ ಉದ್ಗರಿಸಿದ್ದು ಕೇವಲ ಎರಡೇ ಪದಗಳನ್ನು: Oh weh (ಅಯ್ಯೋ೦೦೦) — ಮಾನವಾಂತಃಕರಣದ ಕರುಣಾಕ್ರಂದನವದಾಗಿತ್ತು (೬-೮-೧೯೪೫)

'ದಿವಿಸೂರ್ಯ ಸಹಸ್ರಸ್ಯ' (ಏಕ ಕಾಲದಲ್ಲಿ ಒಂದೆಡೆ ಸಾವಿರ ಸೂರ್ಯರ ಪ್ರಭೆ) ವಾಸ್ತವ ಘಟನೆಯಾಗಿತ್ತು (೬-೮-೧೯೪೫).

ಪರಮಾಣುಬಾಂಬ್ ನಿರ್ಮಾಣ ಪ್ರಕರಣದಲ್ಲಿ ಐನ್‌ಸ್ಟೈನರ ಪಾತ್ರವೇನು? ನೈತಿಕಾಪರಾಧದಿಂದ ಅವರು ಮುಕ್ತರಾಗಲಾರರೆಂದು ಮರಣೋತ್ತರ ಕ್ರಿಯೆ ಎಸಗುವವರ ವಾದದ ಧಾಟಿ ಇದು:

ಐನ್‌ಸ್ಟೈನ್—

$E = mc^2$ ಶಕ್ತಿ-ರಾಶಿ ಸಮಾನತಾ ಸಂಬಂಧ ಶೋಧಿಸದೆ ಇದ್ದಿದ್ದರೆ

ತಮ್ಮ ಸಂಶೋಧನೆಗಳಿಂದ ಭೌತವಿಜ್ಞಾನಕ್ಕೆ ಹೊಸ ತಿರುವು ಕೊಡದೆ ಇದ್ದಿದ್ದರೆ

ಅಧ್ಯಕ್ಷ ರೂಸ್ವೆಲ್ಟರಿಗೆ ಆ ಇತಿಹಾಸಪ್ರವರ್ತಕ ಪತ್ರ ಬರೆಯದೆ ಇದ್ದಿದ್ದರೆ— ಪರಮಾಣು ಬಾಂಬ್ ನಿರ್ಮಾಣ ಅಸಾಧ್ಯವಾಗಿರುತ್ತಿತ್ತು. ಆಗ ಹಿರೊಶಿಮಾ–ನಾಗಸಾಕಿ ಮಾರಣಹೋಮ ಸಂಭವಿಸಿರುತ್ತಿರಲಿಲ್ಲ.

ಇದು ಮೊಂಡು ವಾದವೆಂಬುದು ಸ್ಪಷ್ಟ. ಇದೇ ಧಾಟಿಯಲ್ಲಿ ಇನ್ನೂ ಹಿಂದಕ್ಕೆ ಹೋಗಿ "ಐನ್‌ಸ್ಟೈನ್ ಹುಟ್ಟದೆ ಇದ್ದಿದ್ದರೆ, ನ್ಯೂಟನ್ ಜನಿಸದೆ ಇದ್ದಿದ್ದರೆ, ಮಾನವ ಪೀಳಿಗೆ ವಿಕಸಿಸದೆ ಇದ್ದಿದ್ದರೆ" ಎಂಬ ಶೂನ್ಯ ವಾದವನ್ನು ಮಂಡಿಸುವುದು ಕಷ್ಟವಲ್ಲ. ಐನ್‌ಸ್ಟೈನ್ ವ್ಯಕ್ತಿತ್ವದ ಅಲೌಕಿಕತ್ವ, ಜನಹಿತ ಕಾಳಜಿ, ಅಂತಾರಾಷ್ಟ್ರೀಯತೆ, ಮೂಲ ತತ್ತ್ವದ ಬಗ್ಗೆ ನಿಲುವು ಮುಂತಾದ ಮೌಲ್ಯಗಳ ಪರಿಚಯವಿರುವವರು ಯಾರೂ ಈ ತೆರನಾಗಿ ಯೋಚನೆ ಮಾಡಲಾರರು.

"ನಿಜಕ್ಕೂ ನಾನು ಟಪ್ಪಾಲು ಪೆಟ್ಟಿಗೆಯಂತೆ ವರ್ತಿಸಿದ್ದು ಮಾತ್ರ. ಪೂರ್ತಿಗೊಳಿಸಲಾಗಿದ್ದ ಪತ್ರವನ್ನು ಅವರು ತಂದರು. ನಾನದಕ್ಕೆ ಸುಮ್ಮನೆ ರುಜುವಿಕ್ಕಿದೆ." ಎರಡನೆಯ ಮಹಾಯುದ್ಧಾನಂತರ ಐನ್‌ಸ್ಟೈನ್ ಈ ಮಾತುಗಳಲ್ಲಿ ತಮ್ಮ ನೋವು ತೋಡಿಕೊಂಡರು. ❁

(ಈ ಲೇಖನದ ಉತ್ತರಾರ್ಧ ಮುಂದಿನ ಸಂಚಿಕೆಯಲ್ಲಿ)



ನಾಯಿಗೂ ಒಂದು ಕಾಲವೆಂಬ ಮಾತು ಕೇಳಿದ್ದೀರಲ್ಲವೆ? ಚೀನದಲ್ಲಿ ಪ್ರತಿ ಹೊಸ ವರ್ಷವನ್ನೂ ಯಾವುದಾದರೊಂದು ಪ್ರಾಣಿಯ ಹೆಸರನ್ನಿಟ್ಟು ಸ್ವಾಗತಿಸಲಾಗುತ್ತದೆ. ೧೯೮೨ 'ನಾಯಿಯ ವರ್ಷ'ವಾಗಿದ್ದರೆ, ೧೯೮೧ 'ಪಕ್ಕಿನ ವರ್ಷ'ವಾಗಿತ್ತು.

# ಏಕ ರೀತಿ ಪ್ರೀತಿಯೇ ಮುಖ್ಯ

ವರದರಾಜ ಹುಯಿಲಗೋಳ

ರಾಷ್ಟ್ರಕವಿ ಗೋವಿಂದ ಪೈ ಅವರ ಪ್ರಕಾಂಡ ಪಾಂಡಿತ್ಯದ ಬಗ್ಗೆ ಆಲೂರ ವೆಂಕಟರಾಯರು ಹೇಳಿದುದನ್ನು ಅನೇಕ ಬಾರಿ ಕೇಳಿದ್ದೆ. ಅವರ ಉದಾತ್ತ ವ್ಯಕ್ತಿತ್ವದ ಬಗ್ಗೆ ಸಲೀಸಾಗಿ ತಮ್ಮ ಹರಟೆಯಲ್ಲಿ ದ. ಬಾ. ಕುಲಕರ್ಣಿ ಮಾತನಾಡುತ್ತಿರುವುದನ್ನೂ ಕೇಳಿದ್ದೆ. ಸಂಶೋಧನಾತ್ಮಕ ಉಪನ್ಯಾಸವನ್ನು ನೀಡುತ್ತಿರುವ 'ಪೈ'ಗಳನ್ನು ನಾನು ಕಾಲೇಜ ವಿದ್ಯಾರ್ಥಿಯಾಗಿದ್ದಾಗ ಧಾರವಾಡದಲ್ಲಿ ನೋಡಿದ್ದೆ. ಇಂಥ ಗೋವಿಂದ ಪೈಗಳ ಜೊತೆಗೆ ೧೯೫೫ರಲ್ಲಿ ಪತ್ರ ವ್ಯವಹಾರ ಮಾಡುವ ಪ್ರಸಂಗವೂ ಬಂದದ್ದು, ಒಂದು ರೀತಿಯಿಂದ ಸುಯೋಗವೇ.

ಹಲವು ದಿನಗಳ ಹಿಂದೆ ನನ್ನ ಕಾದಿಟ್ಟ ಹಳೆಯ ಪತ್ರಗಳನ್ನು ತೆರೆದು ನೋಡುತ್ತಿರುವಾಗ, ಗೋವಿಂದ ಪೈಗಳ ಆ ಪತ್ರವನ್ನು ಕಂಡು ವಿಸ್ಮಯಗೊಂಡೆ. ನಮ್ಮ ಪತ್ರವ್ಯವಹಾರದ ವಿಷಯ ಅಂಥ 'ಗಹನ'ವಾದದ್ದೇನೂ ಅಲ್ಲ. ಯಾವ ಸಂಶೋಧನೆಯ ಸಮಸ್ಯೆಯನ್ನೂ ಅವರಿಗೆ ತಿಳಿಸಿರಲಿಲ್ಲ. ಆದರೂ ಅವರ ಆ ಪತ್ರದಲ್ಲಿ ಅದೆಂಥ ಉದಾತ್ತ ಮಾತು ಅಡಕವಾಗಿವೆಯಲ್ಲಾ ಎಂಬುದು ಮಹತ್ವವಾದುದು. ಒಂದು ದೃಷ್ಟಿಯಿಂದ ಅವರ ವ್ಯಕ್ತಿತ್ವದ ಚಿತ್ರವೂ ಅದರಲ್ಲಿ ಮೂಡಿಬಂದಿದೆ.

೧೯೫೫ ರಲ್ಲಿ ನಾನಿನ್ನೂ ಚಿಕ್ಕವ. ಕನ್ನಡ ಪದ್ಯಗಳ ಸಂಪಾದಕೀಯ ಕಾರ್ಯ ಮಾಡುತ್ತಿದ್ದೆ ಆಗ. ಗೋವಿಂದ ಪೈಗಳ ಕವನವೊಂದು ಆಯ್ಕೆಮಾಡಿ, ಅದರ ಪ್ರಕಟಣೆಯ ಬಗ್ಗೆ, ಅಪರಿಚಿತನಾದ ನಾನು, ಅವರಿಗೆ ಕಾಗದ ಬರೆದಿದ್ದೆ. ಆಲೂರು ವೆಂಕಟರಾಯರು ನನ್ನ ಮಾವಂದಿರು ಎಂಬುದನ್ನು ತಿಳಿದು, ಅತ್ಯಂತ ಅಭಿಮಾನದಿಂದ ಅವರು ನನಗೆ ಉತ್ತರಿಸತೊಡಗಿದರು. ಅವರಿಗೆ ಕೇವಲ ರೂ. ೨೦ ಸಂಭಾವನೆ (ಆಗ ಪ್ರಕಾಶಕರಿಂದ ಅಷ್ಟು ಹಣ ದೊರಕಿಸುವುದೇ ಕಠಿಣವಿತ್ತು) ಕಳಿಸಲು ಬಹಳ ಹಿಂದೆ ಮುಂದೆ ನೋಡುತ್ತ ಕಳಿಸಿಕೊಟ್ಟಿದ್ದೆ. ಆದರೂ ಅವರಿಗೆ ಅದೆಷ್ಟು ಕೃತಜ್ಞತೆಯ ಭಾವನೆ! "ತಮ್ಮ ಉಪಕಾರವನ್ನು ಸ್ಮರಿಸುತ್ತೇನೆ" ಎಂದು ಆ ಹಿರಿಯರು ಉತ್ತರಿಸಿದ್ದರು.

ಆಲೂರು ವೆಂಕಟರಾಯರನ್ನು ಸ್ಮರಿಸುತ್ತ ೮-೮-೫೫ ರಂದು ಮಂಜೇಶ್ವರದಿಂದ ಗೋವಿಂದ ಪೈಗಳು ಬರೆದ ಆ ಪತ್ರದ ಒಕ್ಕಣಿಕೆ ಹೀಗಿದೆ—

"ಪೂಜ್ಯ ಹಿರಿಯರಾದ ಶ್ರೀ ಆಲೂರು ವೆಂಕಟರಾಯರಿಗೆ ನಾನು ಅವರ ಕಾಲುಗಳನ್ನು ಮನಸ್ಸಿನಲ್ಲಿ ಹಿಡಿದು ವಂದಿಸಿರುತ್ತೇನೆ ಎಂದು ದಯಮಾಡಿ ತಿಳಿಸುವ ಉಪಕಾರ

**(ರಾಷ್ಟ್ರ ಕವಿ ಗೋವಿಂದ ಪೈ ಅವರ ಪತ್ರವೊಂದರಿಂದ)**

ವನ್ನು ಮಾಡಬೇಕಾಗಿ ಬಿನ್ನಹ."

ಗೌರವ ಸೂಚನೆ, ಅವರ ಮೃದು ಸ್ವಭಾವ, ಭಕ್ತಿ ಭಾವ ಅಲ್ಲದೆ ವಿಶಿಷ್ಟ ಗದ್ಯ ಶೈಲಿಯನ್ನು ನಾವಿಲ್ಲಿ ಕಾಣುತ್ತೇವೆ.

ಮುಂಬೈಯಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಪೈಗಳು ಆಲೂರು ವೆಂಕಟರಾಯರನ್ನು ಮುಂಬೈಯಲ್ಲಿ ಕಂಡ ಸಂದರ್ಭ ಸರ್ವವಿದಿತವಾಗಿದೆ. ಅದರ ಬಗ್ಗೆಯೂ ಈ ಪತ್ರದಲ್ಲಿ ಹೀಗೆ ಇದೆ—

"ಕಳೆದ ೧೯೫೦ನೆಯ ಡಿಶಂಬರ್ ೨೪ನೆಯ ತಾರೀಕಿನಂದು ಮುಂಬಯಿಯಲ್ಲಿ ಆರಂಭಿಸಿದ ಕನ್ನಡ ಸಾಹಿತ್ಯ ಸಮ್ಮೇಲನದ ೩೪ನೆಯ ಅಧಿ- ವೇಶನದ ಅಧ್ಯಕ್ಷನಾಗಿ ನಾನು ಆ ಸಭಾ ಮಂಟಪ ವನ್ನು ಹೊಕ್ಕು ವೇದಿಕೆಯನ್ನು ಏರಿ ನನ್ನ ಆಸನದ ಕಡೆ ಹೋಗುವಾಗ ಅಲ್ಲಿ ನೆರೆಯಲ್ಲೇ ಮಂಡಿಸಿದ ಆ ವಯೋವೃದ್ಧ, ಜ್ಞಾನವೃದ್ಧರಾದ ಪೂಜ್ಯ ಮಹನೀಯರ ಕಾಲು ಹಿಡಿದು ಆ ಮೇಲೆ ನನ್ನ ಪೀಠದಲ್ಲಿ ನಾನು ಮಂಡಿಸಿದ ನೆನಪು ನನಗೆ ಈಗಲೂ ಚೆನ್ನಾಗಿದೆ... ಶ್ರೀದೇವರು ಅವರಿಗೆ ದೀರ್ಘಾಯುರಾರೋಗ್ಯಾದಿ ಸಕಲ ಭಾಗ್ಯವಿತ್ತು ಚಿರಕಾಲ ಬಾಳುವಂತೆ ಅವರನ್ನು ಕಾಪಾಡುತ್ತಿರಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ..."

ಈ ಪತ್ರದಲ್ಲಿ ಕೊನೆಗೆ ಬಂದಿರುವ ಮಾತುಗಳು ಗೋವಿಂದ ಪೈ ಅವರ ಜೀವನದ ದೃಷ್ಟಿಯನ್ನು ಮಾರ್ಮಿಕವಾಗಿ ವ್ಯಕ್ತಪಡಿಸುತ್ತಿವೆ.

"ಪ್ರೀತಿ ಏಕ ರೀತಿಯಾಗಿ ಇರಲಿ! ಅದೇ ಮುಖ್ಯವಾಗಿ ಬೇಕಾದುದು."

ಗೋವಿಂದ ಪೈ ಅವರ ಪತ್ರದಲ್ಲಿ ಬಂದಿರುವ ಇವಿಷ್ಟೇ ವಾಕ್ಯಗಳು, ಅದೆಷ್ಟು ಬೆಳಕನ್ನು ನನ್ನ ಬಾಳಿನಲ್ಲಿ ಚಿಮ್ಮುತ್ತಿವೆ! ಮಹಾಪುರುಷರ ಜೀವನದ ರೀತಿಯೇ ಹೀಗಿದೆ. ❁



# ತೇಲಿದ್ದೆಷ್ಟು ಈಸಿದ್ದೆಷ್ಟು?

## ಜೀವನದ ಒಂದು ಸಿಂಹಾವಲೋಕನ

ಪಾವೆಂ ಆಚಾರ್ಯ

ಇತ್ತೀಚೆ ನಡೆದ ದ. ಕ. ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಪಾವೆಂ ವಹಿಸಿದ್ದರು. ಆ ಸಂದರ್ಭದಲ್ಲಿ ಆಹ್ವಾನಿಸಲಾದ ವಿಶೇಷ ಲೇಖನ.

ಎಪ್ಪತ್ತೆರಡನೇ ವಯಸ್ಸು ಒಬ್ಬನಿಗೆ ತಾನು ಬಾಳಿದ ಬದುಕನ್ನು ಹಿಂದಿರುಗಿ ನೋಡಿ, ಮಾಡಿದ್ದೆಷ್ಟು ಆದದ್ದೆಷ್ಟು, ಗಳಿಸಿದ್ದೆಷ್ಟು ಕಳೆದದ್ದೆಷ್ಟು, ಎಂಬ ಲೆಕ್ಕಾಚಾರ ನೋಡಲು ತೀರ ಅಕಾಲವೆನಿಸಲಿಕ್ಕಿಲ್ಲವೆಂದು ನನ್ನೆಣಿಕೆ. ಅಷ್ಟು ಹೊತ್ತಿಗೆ ನಮಗೆ ಬದುಕಿನ ದಾರವಂದ ಸಾಕಷ್ಟು ಸಲ ಹಣೆಗೆ ಬಡಿದು ಅಹಂಕಾರವನ್ನು ತಗ್ಗಿಸಿರುತ್ತದೆ. ಅಹಂಕಾರದ ಮೇಲೆ ನನ್ನ ದೂರೇನೂ ಇಲ್ಲ. ತನ್ನ ಕಾಲ ದೇಶಗಳಲ್ಲಿ ಅದಕ್ಕೆ ಮಹತ್ತರವಾದ ಸ್ಥಾನವಿದೆ. ಅದು ಇಲ್ಲದೆ ನಮ್ಮಿಂದ ಏನೂ ಸಾಧಿಸದು. ಆದರೆ ಅದು ರಾಜಸ. ರಜಸ್ಸು ಎಂದರೆ ಧೂಳಿನ ಕಣಗಳು. ಅಹಂಕಾರದ ರಜಸ್ಸು ನಮ್ಮ ಕಣ್ಣುಗಳಿಂದ ನಮ್ಮ ದೋಷ-ದೌರ್ಬಲ್ಯಗಳನ್ನು ಮರೆಸುತ್ತದೆ. ಆಕಾಶಕ್ಕೆ ತನ್ನ ನೀಲಿ ಬಣ್ಣವನ್ನು ಕೊಟ್ಟದ್ದು ರಜಸ್ಸಿನ ಕಣಗಳು ಎಂದು ವಿಜ್ಞಾನಿಗಳು ಹೇಳುತ್ತಾರೆ. ಬದುಕಿಗೆ ಬಣ್ಣ ಕೊಡುವುದೂ ಈ ರಜಸ್ಸೇ. ಆದರೆ ನಾವು ನಮ್ಮ ಬದುಕನ್ನು ನಿಜವಾದ ಅರ್ಥದಲ್ಲಿ ಬಾಳಿದ್ದರೆ ಈ ರಜಸ್ಸಿನ ಕಣಗಳು ಮೆಲ್ಲಮೆಲ್ಲನೆ ಸೋಸಲ್ಪಟ್ಟು ನಮ್ಮ ನಿಜದ ನೆಲೆ ತಿಳಿಯಬೇಕು. ಇದು ಸಾತ್ವಿಕದ ಕಡೆ ಪಯಣ. ನಮ್ಮನ್ನು ನಾವು ಬಣಗು ಬಣ್ಣ ಕಟ್ಟಿ ನೋಡಿಕೊಳ್ಳುವುದನ್ನು ಸಾಕಷ್ಟು ಬಿಡಿಸಿ. ನಮ್ಮನ್ನು ನಾವು ಮೂಲ ಬಿಂಬದಲ್ಲಿ ಕಾಣಲು ನೆರವಾಗುವುದು ಅನುಭವದ ಒಂದು ದಾಯ. ಹಾಗೆ ನಾವು ನಮ್ಮ ಕೈಯ ತುತ್ತನ್ನು ನಮ್ಮ ಬಾಯಲ್ಲೇ ಇಕ್ಕಿಕೊಂಡಿರುವ ತನಕ ಒಂದಿಷ್ಟು ಅಹಂಕಾರ

ಇದ್ದೇ ಇರುತ್ತದೆ. ಕನ್ನಡಿಯಲ್ಲಿ ಪ್ರತಿಬಿಂಬ ಕಾಣಬೇಕಾದರೂ ಅದರ ಹಿಂದೆ ಒಂದಿಷ್ಟು ಪಾರಜ ಲೇಪ ಬೇಕಾಗುತ್ತದೆ. ನಾವು ಆದರ್ಶದ ಹತ್ತಿರ ಹತ್ತಿರಕ್ಕೆ ಬರಲಾಪವೇ ಹೊರತು ಆದರ್ಶವನ್ನೇ ತಲಪಲಾರೆವು. ಹಾಗೆ ನನ್ನ ಬದುಕನ್ನು ಸಿಂಹಾವಲೋಕನ ಮಾಡಿಕೊಳ್ಳುತ್ತೇನೆ.

ಹುಟ್ಟಿದ್ದು ೧೯೧೫, ಉಡುಪಿಯಲ್ಲಿ. ತಂದೆ ಪಾಡಿಗಾರು ಲಕ್ಷ್ಮೀನಾರಾಯಣಾಚಾರ್ಯರು. ತಾಯಿ ಸೀತಮ್ಮ. ಉಭಯತರೂ ವೈದಿಕ ಬ್ರಾಹ್ಮಣ ಕುಲದವರು. ತಂದೆ ಋಗ್ವೇದದ ಎಂಟೂ ಅಷ್ಟಕಗಳನ್ನು ಪುಸ್ತಕದ ನೆರವಿಲ್ಲದೆ ಪಠಿಸಬಲ್ಲವರಾಗಿದ್ದರಂತೆ. ವೇದಗಳ ಹೊರಗೂ ಸಾಕಷ್ಟು ಸಂಸ್ಕೃತ ಮತ್ತು ಮುಂದೆ ಕನ್ನಡ ಓದಿದವರಂತೆ. ಅವರ ವೈದಿಕ ವಿದ್ಯೆ ಅವರನ್ನು ಜಡರಾಗಿ ಮಾಡಲಿಲ್ಲ. ಅವರು ಆ ಕಾಲದಲ್ಲಿ 'ರಸಿಕ' ಶಬ್ದಕ್ಕಿದ್ದ ಎಲ್ಲ ಅರ್ಥಗಳಲ್ಲಿ ರಸಿಕರಾಗಿದ್ದರು; ದಿಟ್ಟರೂ ಆಗಿದ್ದರು. ಅವರಿಗೆ ನಾಟಕ, ಹರಿಕಥೆಗಳ ಹವ್ಯಾಸವಿತ್ತು. ಇದನ್ನು ನಮ್ಮ ತಾಯಿ ಕಷ್ಟ ಸಮಯದಲ್ಲಿ ಕೋಪದಿಂದ, ಉಳಿದ ವೇಳೆಯಲ್ಲಿ ಮೆಚ್ಚಿಕೆಯಿಂದ ಹೇಳುತ್ತಿದ್ದರು. ತಂದೆ ಧಾರಾಳವಾಗಿ ಗಳಿಸಿದ್ದರೂ ನಮ್ಮನ್ನು ಬಡತನದಲ್ಲಿ ಬಿಟ್ಟು ಹೋಗಲು ಈ ರಸಿಕತೆ ಕಾರಣವೆಂದು ನಮ್ಮ ತಾಯಿ ಹೇಳುತ್ತಿದ್ದರು. ನಾಲ್ಕು ಹೆಣ್ಣು ಮಕ್ಕಳ ನಂತರ ಉಳಿದುಕೊಂಡ ಏಕಮಾತ್ರ ಪುತ್ರನಾದ ನನ್ನಿಂದ ಪಿತೃಗಳು ಲುಪ್ತಪಿಂಡೋದಕರಾಗುವುದು ತಪ್ಪಿತು. ಆದರೆ ನಾನು ಅವರಿಗೆ ಬಿಡುತ್ತ ಬಂದ ತರ್ಪಣದ ಉದಕ ಬಹುಕಾಲ ನಮ್ಮ ತಾಯಿಯ ಕಣ್ಣೀರಿನಿಂದ ಕವೋಷ್ಣವಾಗಿರುತ್ತಿತ್ತು, ಎನ್ನದಿರಲಾರೆ.

ನನಗೆ ಐದಾಗುವಾಗ ನಮ್ಮನ್ನಗಲಿದ ಇಂಥ ತಂದೆಯ ಬಗ್ಗೆ ನನಗೇನನಿಸುತ್ತದೆ? ಇಷ್ಟು ದೂರದಿಂದ ನನಗೆ ದೂಎತಕ್ಕದ್ದೇನೂ ಕಾಣುವುದಿಲ್ಲ. ಅವರ 'ರಸಿಕತೆ' ನನಗೆ ಬರಲಿಲ್ಲ. ಆದರೆ ಅವರು ನನ್ನನ್ನು ಅಷ್ಟು ಬಾಲ್ಯದಲ್ಲೇ ಬಿಟ್ಟು ಹೋಗಿದ್ದರೂ ನನ್ನ ಬದುಕಿನಲ್ಲಿ (ಬದುಕಿಗೆ ಜೀವನವೆಂದೂ, ಸೊತ್ತು ಎಂದೂ ಅರ್ಥಗಳುಂಟಲ್ಲ!) ನನ್ನ ತಂದೆಯ ಎಷ್ಟು ಅಂಶ ಇದೆ, ಎಂದು ಯೋಚಿಸಿದರೆ ನಾನು ಏನೇನಾಗಿದೆನೋ ಅದರಲ್ಲಿ ಅವರು ದೊಡ್ಡ ಅಂಶವಾಗಿದ್ದಾರೆಂದೇ ನನಗೆ ತೋರುತ್ತದೆ. ಅವರು ಆ ಅವರಾಗಿರದಿದ್ದರೆ ನಾನು ಈ ನಾನಾಗಿರುತ್ತಿದ್ದಿಲ್ಲ. ನನ್ನ ಸಾಹಿತ್ಯ, ಕಲಾಸಕ್ತಿಯಲ್ಲಿ, ನನ್ನ ಕುತೂಹಲ ಮಯ ಮಿದುಳಿನಲ್ಲಿ ನನ್ನ ತಂದೆ ಇದ್ದಾರೆ. ನಮ್ಮ ಕುಲದ ಪರಂಪರೆಯನ್ನು ಮುರಿದು ಅವರು ನನ್ನ ಅಕ್ಕಂದಿರಿಗೆ ಓದುಬರಹ ಕಲಿಸಿದ್ದರು. ಹರಿಕಥೆ, ನಾಟಕಗಳ ವಾತಾವರಣವನ್ನು ಮನೆಯಲ್ಲಿ ಕಲ್ಪಿಸಿದ್ದರು. ಈ ಅಕ್ಕಂದಿರು ನನ್ನ ಮೊದಲ ಶಿಕ್ಷಕರಾದರು (ತಾಯಿ ಧೀರೆಯಾದರೂ ನಿರಕ್ಷರಿಯಾಗಿದ್ದರು). ಅವರು ನನ್ನನ್ನು ತಮಗರಿಯದೆಯೇ ನನ್ನ ಭವಿಷ್ಯದತ್ತ ಮುಖಮಾಡಿ ತಳ್ಳಿದರು. ಕಡು ಬಡತನದಲ್ಲಿ ನಾನು ಓದಿ ಸಾಹಿತಿಯಾದೆನೆಂದುಕೊಳ್ಳುವಾಗ ಈ ಮೂಲಭೂತ ಉಪಕರಣಗಳಿದ್ದಿಲ್ಲವಾದರೆ ನಾನು ಏನಾಗ ಬಹುದಿತ್ತು? ಎಂಬ ಯೋಚನೆ ಬಾರದಿರುವುದಿಲ್ಲ.

ಬಡತನದ ಮಾತು ಹೇಳಿದೆ. ನಾನು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದೆನೆಂದು ಹೇಳಿದೆ. ನಾನು ಉಡುಪಿಯಲ್ಲಿ ಹುಟ್ಟಿದೆನೆಂದು ಹೇಳಿದೆ. ಬಡತನದಲ್ಲಿ ಜನಿಸಿದೆ, ಹೌದು; ಆದರೆ ಐದನೇ ಇಯತ್ತೆಯಲ್ಲಿ ತಿಂಗಳ ಎಂಟಾಣೆ ಶಾಲಾ ಶುಲ್ಕ ಕೊಡಲಾರದೆ ಶಾಲೆ ಬಿಡುವ ಪ್ರಸಂಗವನ್ನೆದುರಿಸಿ ಅಳುತ್ತಾ ಶಾಲೆಯ ಕಡೆ ಹೊರಟಿದ್ದಾಗ ಶಾಲೆಯಿಂದ ಇಪ್ಪತ್ತೈದೋ ಮೂವತ್ತೋ ಗಜ ಮುಂಚಿತವಾಗಿ ನಮ್ಮ ನೆರೆಮನೆಯ ಆಸ್ತಿಕ ವಿಧವೆ ಸರಸ್ವತಿಯಮ್ಮ ಎದುರಿಗೆ ಸಿಕ್ಕಿರದಿದ್ದರೆ ಮತ್ತು ಅವರು ನನ್ನ ಅಳು ನೋಡಿ ತತ್ಕ್ಷಣ ತಮ್ಮ ಶ್ರೀಮುದ್ರೆಯ ಸಂಪುಷ್ಟದಿಂದ ಎಂಟಾಣೆ ತೆಗೆದುಕೊಟ್ಟು ತಿಂಗಳು ತಿಂಗಳೂ ಫೀ ಕೊಡುವುದಾಗಿ ಮಾತುಕೊಟ್ಟಿರದಿದ್ದರೆ? ಬದುಕಿನ ಆಗುಹೋಗುಗಳು ಎಷ್ಟು ಆಕಸ್ಮಿಕ! ಅವರು ಶ್ರೀಕೃಷ್ಣಮಠದಿಂದ ಎರಡು ಮಿನಿಟು ತಡವಾಗಿ ಹೊರಟಿದ್ದರೆ ಅವರು ನನ್ನನ್ನು ಸಂಧಿಸುತ್ತಲೇ ಇರಲಿಲ್ಲ. ಅದು ನನ್ನ ಲೌಕಿಕ ಶಿಕ್ಷಣದ ಅವಸಾನವಾಗಬಹುದಿತ್ತು. ನಾನು ಬ್ರಾಹ್ಮಣ ವಟುವಾಗಿರದಿದ್ದರೆ ಅವರು ಈ ಔದಾರ್ಯ ತೋರಿಸುತ್ತಿದ್ದರೇ? ನಾನರಿಯೆ. ಉಡುಪಿಯಲ್ಲಿ ಹುಟ್ಟಿ ಬೆಳೆದೆನೆಂದೆನಲ್ಲ. ನನ್ನ ಶಿಕ್ಷಣ ಮುಗಿಯುವವರೆಗೆ

ನನ್ನ ತಾಯಿ ತಮ್ಮ ಅನ್ನವನ್ನು ನನಗೆ ಹಾಕಿ ತಾವು ಕೃಷ್ಣಮಠದಲ್ಲಿ ಹೋಗಿ ಊಟಮಾಡಿ ಏಕ ಭುಕ್ತಿಯಲ್ಲಿ ಬದುಕಿದರು. ಹೌದು. ಕ್ವಚಿದಪಿ ಕುಮಾತಾ ನ ಭವತಿ. ಆದರೂ ನಾವು ಉಡುಪಿಯಲ್ಲಿದ್ದಿಲ್ಲವಾದರೆ ಮತ್ತು ನಾವು ಬ್ರಾಹ್ಮಣರಾಗಿದ್ದಿಲ್ಲವಾದರೆ ಈ ಉಚಿತ ಭೋಜನ ತಾಯಿಗೆ ಸಿಗುತ್ತಿರಲಿಲ್ಲ; ಬಹುಶಃ ನಾವಿಬ್ಬರೂ ಗದ್ದೆಗಳಲ್ಲಿ ದುಡಿಯಬೇಕಾಗುತ್ತಿತ್ತು; ವಿದ್ಯೆ ಕಲಿಯಬೇಕೆಂಬ ಐಡಿಯವೇ ನನ್ನ ತಲೆಯಲ್ಲಿ ಹೊಕ್ಕುತ್ತಿರಲಿಲ್ಲ. ಅದಕ್ಕೇ ಶೂದ್ರನ ಬಡತನವನ್ನೂ ಬ್ರಾಹ್ಮಣನ ಬಡತನವನ್ನೂ ಒಂದೇ ತೂಕದ ಕಲ್ಲಿನಿಂದ ತೂಗಲಾಗುವುದಿಲ್ಲವೆಂದು ನಾನು ಹೇಳುವುದು.

ವೈದಿಕ ಬ್ರಾಹ್ಮಣರೆಲ್ಲ — ಅನುಕೂಲವಂತರೂ ಸೇರಿ–ಸಂಸ್ಕೃತ ಶಾಲೆಗೆ ಹೋಗುತ್ತಿರುವಾಗ ನನಗೊಬ್ಬನಿಗೆ ಇಂಗ್ಲಿಷ್ ಶಾಲೆಗೆ ಹೋಗುವ ಹುಚ್ಚು ಹೇಗೆ ತಗಲಿತೋ ನನಗೆ ನೆನಪಾಗುವುದಿಲ್ಲ. ಕ್ಲಾಸಿನಲ್ಲಿ ಯಾವಾಗಲೂ ಮೊದಲಿಗನಾಗಿದ್ದರಿಂದ ಎಲಿಮೆಂಟರಿ ಶಾಲೆಯ ಉಪಾಧ್ಯಾಯರು ಆ ಬೀಜ ಬಿತ್ತಿರಬಹುದು. ಸರಿ, ಬೋರ್ಡ್ ಹೈಸ್ಕೂಲಿನಲ್ಲಿ ಸಂಸ್ಕೃತ ಪಂಡಿತರಾಗಿದ್ದ ನನ್ನ ಹಿರಿಯಣ್ಣ (ದೊಡ್ಡಪ್ಪನ ಮಗ) ವೆಂಕಟದಾಸಾಚಾರ್ಯರು ನನ್ನನ್ನು ಹೈಸ್ಕೂಲಿಗೆ ಹಾಕುವ ಹೊಣೆಯನ್ನು ಹೊತ್ತಿರದಿದ್ದರೆ (ಅವರೂ ಶ್ರೀಮಂತರಲ್ಲ) ನನ್ನ ಆಸೆ ಬಯಲಾಸೆಯಾಗಿ ಉಳಿದು. ಆಗ ಬ್ರಾಹ್ಮಣ ಹುಡುಗರ ಆಕರ್ಷಣೆಯಾಗಿದ್ದ ಗಟ್ಟದ ಮೇಲಿನ ಹೋಟೆಲ್ ಉದ್ಯೋಗಕ್ಕೋ ಅಥವಾ ಸಂಸ್ಕೃತ ಶಾಲೆಯ ಶಿರೋಮಣಿಯಾಗಿ ನಿರಾಮಿಷವಾದ ಪಂಡಿತವೃತ್ತಿಗೋ ಆತುಕೊಳ್ಳಬೇಕಾಗುತ್ತಿತ್ತು. ಅಲ್ಲಿಯಾದರೂ ನಾನು ನಾಲಾಯಖನಾಗಿರುತ್ತಿರಲಿಲ್ಲ. ನನ್ನ ಕಥೆ ಬೇರೆಯಾಗಿರುತ್ತಿತ್ತು, ಅಷ್ಟೆ.

ಶಾಲೆಗೆ ಮೊದಲನೆಯವನಾಗಿ ಎಸ್. ಎಸ್. ಎಲ್. ಸಿ. ಯಲ್ಲಿ ಪಾಸಾದೆ. ಓದಿ ಓದಿ ಅಲ್ಲ, ಏನನ್ನೂ ಒಂದೇ ಶ್ರುತಕ್ಕೆ, ಒಂದೇ ಪಠಿತಕ್ಕೆ ಗ್ರಹಿಸುವ ಜನ್ಮಸಿದ್ಧ ಶಕ್ತಿ ಇದ್ದದ್ದರಿಂದ. ಹೌದು, ಪಠ್ಯಗಳ ಹೊರಗಿನ ಕಥೆ, ಕಾದಂಬರಿ, ಕವಿತೆಗಳನ್ನು ಹಗಲಿರುಳೂ ಓದುತ್ತಿದ್ದೆ. ಹುಬ್ಬಳ್ಳಿಯಲ್ಲಿ ಹೋಟೆಲ್ ವ್ಯವಸಾಯ ಮಾಡುತ್ತಿದ್ದ ನೆರೆಮನೆಯವರಿಂದ ಎರವಲು ತಂದು. ಇದು ನನ್ನ ಮನಸ್ಸನ್ನು ಅರಳಿಸಿತು. ನಾನೂ ಬರೆಯಬೇಕೆಂಬ ಹಂಬಲ ಹುಟ್ಟಿಸಿತು. ಈ ನಡುವೆ ಯಾರ ನೆರವೂ ಇಲ್ಲದೆ ಔಷಧದ ರದ್ದಿ ಕ್ಯಾಟಲಾಗ್ ಸಹಾಯದಿಂದ ಬಂಗಾಲಿ ಕಲಿತೆ. ಐದನೇ ಇಯತ್ತೆಯಲ್ಲಿ, ಸಿಲಬಸ್ಸಿನಲ್ಲಿಲ್ಲದಿದ್ದ ಭಾಮಿನೀ ಷಟ್ಪದಿಯ ಲಕ್ಷಣವನ್ನು ಕಲಿಸಿದ ಹಂಗಾಮಿ ಮಾಸ್ತರ್ ಭಾಂಡಾರಕರ್ ಅವರ ಅವ್ಯಾಪಾರದ ಪ್ರಯೋಜನ ಪಡೆದು ತತ್‌ಕ್ಷಣವೇ ಪದ್ಯರಚನೆ ಆರಂಭಿಸಿದೆ (ವಯಸ್ಸು ೧೧). ಎರಡನೇ ಫಾರ್ಮಿನ ಪಠ್ಯ ಪುಸ್ತಕದಲ್ಲಿದ್ದ ರನ್ನನ ಗದಾಯುದ್ಧದ "ಯಮರಾಜಪ್ರಿಯ ಸೂಮಗಂ ನಿನಗವಾ ಗಾಂಡೀವ ಧನ್ವಂಗವಾ ಯಮಳರ್ಗಂ" ಎಂಬಲ್ಲಿಂದಾರಂಭವಾಗಿ "ಗತಕಾಲಂ ಲಯಕಾಲಮಾಯ್ತು ನಿನಗಿನ್ನಾಯ್ತಂತ್ಯ ಕಾಲಂ ಗಡಾ!" ಎಂಬಲ್ಲಿವರೆಗಿನ ಭಾಗದಿಂದ ಸ್ಫೂರ್ತಿ ಹೊಂದಿ ಕಂದ ವೃತ್ತಗಳಲ್ಲಿ ಪದ್ಯ ಬರೆಯತೊಡಗಿದೆ. ಒಂದು ಚಂಪೂ ಮಹಾಕಾವ್ಯ ಬರೆಯುವ ಹುಮ್ಮಸದಲ್ಲಿ "ವಿಲಸತ್ ಸಾಹಿತ್ಯ ಕಾಂತಾ ಕುಚಯುಗಲ ಸಮಾಕ್ರಾಂತ ಸದ್ರತ್ನ ಹಾರಕ್ಕೆ ಲಲಾಮಪ್ರಾಯಮಪ್ಪಾ" ಎಂದಾರಂಭ ಮಾಡಿ ಹತ್ತೈವತ್ತು ಕಂದವೃತ್ತಗಳನ್ನು ಬರೆದೆ. ನಮ್ಮ ದೊಡ್ಡಣ್ಣ ವಿದ್ವಾನ್ ಪರೀಕ್ಷೆಗೆ ಕಟ್ಟಿ ತಮ್ಮ ಮನೆಯಲ್ಲಿ ತಂದಿಟ್ಟುಕೊಂಡಿದ್ದ ಛಂದೋಂಬುಧಿ, ಶಬ್ದ ಮಣಿದರ್ಪಣ, ಭಿಕ್ಷಾಟನ ಚರಿತೆ ಮೊದಲಾದವನ್ನು ತಂದು, ಇಡಿ ಇಡಿಯಾಗಿ ನುಂಗಿ ಹಾಕಿದೆ. ವಿರೂಪಾಕ್ಷಪಂಡಿತನ ಋತು ವರ್ಣನೆಯನ್ನು ಪದ್ಯದಲ್ಲಿ ಓದಿ ವಾರ್ಧಕ ಷಟ್ಪದಿಗಳನ್ನು ಬರೆದೆ. ಶಾಲೆಯಲ್ಲಿ ಏನೇನು ಬರೆಯಬಾರದೋ ಅದನ್ನೆಲ್ಲ ಬರೆದೆ. ಮತ್ತು ಒಳ್ಳೆಯ ಮಟ್ಟದಲ್ಲಿ ತೇರ್ಗಡೆಯಾದೆ.

ಸಾಧನೆಗಳಲ್ಲವೆ? ನಿಜ. ಆದರೆ ಕೇಳಿ. ತಾವು

ಹೆಡ್ಮಾಸ್ತರರಾಗಿ ಬಂದ ಮೇಲೆ ಎಸ್. ಎಸ್. ಎಲ್. ಸಿ. ಗೆ ಕೂತ ಮೊದಲನೆಯ ಬ್ಯಾಚಿನ ಹುಡುಗರಲ್ಲಿ ಮೊದಲನೆಯವನಾಗಿ ತೇರ್ಗಡೆಯಾದ ನನ್ನ ಮೇಲೆ ಅಭಿಮಾನದಿಂದ, ದಿವಂಗತ ರಾಕಿ ಫರ್ನಾಂಡೀಸರು (ಆಸ್ಕರ್ ಫರ್ನಾಂಡೀಸರ ತಂದೆ) ಮಂಗಳೂರಿನ ಅಲೋಸಿಯಸ್ ಕಾಲೇಜಿಗೆ ಹೋಗು, ಅಲ್ಲಿಯ ಪ್ರಿನ್ಸಿಪಾಲರಿಗೆ ಹೇಳಿ ಫ್ರಿಶಿಪ್ ಕೊಡಿಸುತ್ತೇನೆ–ಎಂದಾಗ, ನಾನು ಆ ಅವಕಾಶವನ್ನು ಉಪಯೋಗಿಸಿಕೊಳ್ಳದಾದೆ. ಇದಕ್ಕೆ ನನ್ನ ಹತ್ತಿರ ಸಬೂಬುಗಳೇನೋ ಇವೆ. ಮನೆಯ ಆರ್ಥಿಕ ಸಂಕಟ, ಮಂಗಳೂರಲ್ಲಿ ಊಟಕ್ಕೇನು ಗತಿ ಇತ್ಯಾದಿ. ಆದರೆ ಹೆಚ್ಚು ಸಾಹಸಿಕರು ಈ ಅವಕಾಶದ ಸದುಪಯೋಗ ಮಾಡಿಕೊಳ್ಳಬಹುದಿತ್ತು. ಯಾವುದೊಂದು ಹೋಟೆಲಿನ ಮಾಲಿಕರನ್ನು ಹಿಡಿದು ಊಟ ಗಿಟ್ಟಿಸಬಹುದಿತ್ತೇನೋ. ಅವರ ಮಗಳ ಗಂಡನಾಗಿ ಕಾರಿನಲ್ಲಿ ತಿರುಗುವ ಕನಸು ಕಾಣಬಹುದಿತ್ತೇನೋ. ಆದರೆ ಆ ಸಾಹಸ ನನ್ನಲ್ಲಿರಲಿಲ್ಲ. ಅದೊಂದು ಊನಾಂಶ— Minus point.

ಇಲ್ಲಿಂದ ಎರಡನೇ ಊನಾಂಶ. ಅದು ನನ್ನ ಪ್ರಥಮ ಉದ್ಯೋಗದ ಸೋಲು. ಯಾವ ವಿದ್ಯೆಯನ್ನೂ ಹೆಚ್ಚು ಕಷ್ಟವಿಲ್ಲದೆ ಕರಗತ ಮಾಡಿಕೊಳ್ಳುವ ಶಕ್ತಿ ಇದ್ದ ನಾನು ಉಡುಪಿಯ ಕಡಿಯಾಳಿ ಶಾಲೆಯಲ್ಲಿ ಒಂದು ವರ್ಷ ಉಪಾಧ್ಯಾಯ ವೃತ್ತಿ ಮಾಡಿದ ಮೇಲೆ ನಾನು ಅದರಲ್ಲಿ ಸಂಪೂರ್ಣ ಅಪ್ರಯೋಜಕನೆಂದು ನನಗೇ ಅನಿಸಿತು. ನನ್ನ ತೊಂದರೆಯೆಂದರೆ ಮಕ್ಕಳ ಮಟ್ಟದಲ್ಲಿ ಅವರಿಗೆ ಹೇಳಿ ಕೊಡಲು ಸಾಧ್ಯವಾಗುತ್ತಿರಲಿಲ್ಲ. ಅದೂ ಎರಡನೇ ತರಗತಿಗೆ! ಶಿಕ್ಷಕನಿಗೆ ಉತ್ತಮ ಮೇಧಾಶಕ್ತಿ ಸಾಲುವುದಿಲ್ಲ, ಮತ್ತೇನೋ ಒಂದು ಬೇಕು. ಆ ಒಂದು ನನಗಿಲ್ಲ. ಇಂದಿಗೂ ನಾನು ಮಕ್ಕಳಿಗೆ ಪಾಠ ಹೇಳಲಾರೆ. ನಮೋ ಉಪಾಧ್ಯಾಯಾಯ! ಆಗಲೇ "ಜಯ ಕರ್ನಾಟಕ" "ಪ್ರಬುದ್ಧ ಕರ್ನಾಟಕ"ದಂಥ ಪ್ರಬುದ್ಧ ಪತ್ರಿಕೆಗಳು ಸ್ವೀಕರಿಸುವಂಥ ಕವಿತೆ ಬರೆದವನು, ಎಳೆ ಕರುಗಳಿಗೆ ಎಳೆ ಹುಲ್ಲು ತಿನ್ನಿಸಲಾರದೆ ಶಿಕ್ಷಕವೃತ್ತಿ ಬಿಟ್ಟು ಸ್ವದೇಶಿ ಅಂಗಡಿಯಲ್ಲಿ ಮಾರಾಟಗಾರ-ಕಂ-ಕಾರಕೂನ–ಕಂ–ಕಸಗುಡಿಸುವವ-ಕಂ–ಗ್ಯಾಸ್ ದೀಪ ಹಚ್ಚುವವನಾಗಿ ಸೇರಿದೆ.

ಮೊದಲು ಅಂಗಡಿ ಕೆಲಸಗಾರನಾಗಿ, ಮುಂದೆ ಪ್ರೆಸ್ ಲೆಕ್ಕಿಗನಾಗಿ, ಆ ಮೇಲೆ ಕಂಪನಿ ಸೆಕ್ರೆಟರಿಯಾಗಿ ನಾನು, ತುಳು ಚಳವಳಿಯ ಅಧ್ವರ್ಯು, ಕಾಂಗ್ರೆಸ್ ನಾಯಕ, ಮೀಮಾಂಸಾ ಶಿರೋಮಣಿಯಾಗಿಯೂ ಕ್ರಾಂತಿಕಾರಕ ವಿಚಾರಕ, ಸಾಹಸಿ ಆದ ಎಸ್. ಯು. ಪಣಿಯಾಡಿಯವರೊಡನೆ ಕಳೆದ ಸುಮಾರು ಏಳು ವರ್ಷಗಳು ಮೊದಲು ವ್ಯಥೆಯಲ್ಲಿ, ಆ ಮೇಲೆ ಸಾರ್ಥಕತೆಯಲ್ಲಿ ಮತ್ತು ಕೊನೆಯಲ್ಲಿ ಅನಾಹುತದಲ್ಲಿ ಕಳೆಯಿತು. ವ್ಯಥೆಯ ಕಾರಣ, ಅವಿದ್ಯಾವಂತ ಸಹಕಾರಿಗಳೊಡನೆ ನೀಗದಿದ್ದದ್ದು; ಸಾರ್ಥಕತೆ ಯಾವ ಕೆಲಸ ಕೊಟ್ಟರೂ ಕೆಲ ದಿನಗಳಲ್ಲಿ ಅದರಲ್ಲಿ ಸಹಜವಾದ ಪ್ರಾವೀಣ್ಯ ತೋರಿಸುವ ತೈಲ ಬುದ್ಧಿಯದ್ದು, ಅನಾಹುತ, ಪಣಿಯಾಡಿಯವರ ವ್ಯಾಪಾರ ವ್ಯವಹಾರಗಳು ಸೋಲು ಕಂಡು ಅವರು ಊರು ಬಿಟ್ಟು ಹೊರಟು ಹೋದದ್ದು. ಈ ಅವಧಿಯಲ್ಲಿ ಯಾವ ವಾಣಿಜ್ಯ ಶಾಲೆಗೆ ಹೋಗದೇನೇ ತುಂಬ ಜಿಗುಟಾದ ಲೆಕ್ಕ ಪತ್ರ ಮತ್ತು ಕಂಪನಿ ಕಾನೂನಿನಲ್ಲಿ ಸಾಕಷ್ಟು ಪರಿಜ್ಞಾನ ಪಡೆದೆ. ಅವರು ಆರಂಭಿಸಿದ ಲಿಮಿಟೆಡ್ ಕಂಪನಿಗಳ ಮೆಮೊರ್ಯಾಂಡಂ–ಆರ್ಟಿಕಲ್ಸನ್ನು ತಯಾರಿಸಿ ರಿಜಿಸ್ಟ್ರಿ ಮಾಡಿಸಲು ಸಮರ್ಥನಾದೆ. ಅದೆಲ್ಲ ನೀರು ಪಾಲಾದಾಗ ಒಮ್ಮೆಲೇ ಈಸುಬಾರದೆ ಹೊಳೆಯಲ್ಲಿ ಬಿದ್ದಂತಾದೆ.

ಆಗಲೇ ಮದುವೆಯಾಗಿ ಎರಡು ಮಕ್ಕಳ ತಂದೆಯಾಗಿದ್ದ ನನಗೆ ಈ ಕಂಪನಿಯೊಡನೆ ಬರೇ ನೌಕರನೆಂಬುದಕ್ಕಿಂತ ಹೆಚ್ಚಿನ ತೊಡಕಾಟವಿದ್ದುದರಿಂದ ಊರಲ್ಲಿ ಬೇರೆ ನೌಕರಿ ಸಿಗುವುದೂ ಕಷ್ಟವಿತ್ತು. ಆರು ತಿಂಗಳು ಅರೆ ಬರೆ ಕೆಲಸ ಮಾಡುತ್ತ ಕಡೆಗೆ ಮದ್ರಾಸಿನ ಒಂದು ಹೋಟೆಲಿಗೆ

ಬಿಲ್ ರೈಟರಾಗಿ ಹೋಗಬೇಕಾಯಿತು.

ಈ ಏಳು ವರ್ಷಗಳಲ್ಲಿ ವಾಣಿಜ್ಯ ಪ್ರಪಂಚದಲ್ಲಿದ್ದರೂ ಸಾಕಷ್ಟು ಬರವಣಿಗೆ ಪದ್ಯ-ಗದ್ಯ ಎರಡೂ ಸಾಗಿತ್ತು. ಅವುಗಳಲ್ಲಿ ಹೆಚ್ಚಂಶ "ಜಯ ಕರ್ನಾಟಕ"ದಲ್ಲಿ, ಕೆಲವಂಶ ಪಣಿಯಾಡಿಯವರು ಪ್ರಾರಂಭಿಸಿದ್ದ ಜನಪ್ರಿಯ "ಅಂತರಂಗ" ಪತ್ರಿಕೆಯಲ್ಲಿ (ಅದರ ಸಂಪಾದಕ ಮಂಡಲಿಯಲ್ಲಿ ನಾನಿದ್ದೆ) ಪ್ರಕಟವಾಗಿದ್ದವು. "ಅಂತರಂಗ"ದಲ್ಲಿ ಜನಪ್ರಿಯ ಬರವಣಿಗೆ ಹೇಗಿರಬೇಕೆಂಬ ಅನುಭವ ಸಿಕ್ಕಿತು. ಎಲ್ಲಕ್ಕಿಂತ ಹೆಚ್ಚಾಗಿ ಪಣಿಯಾಡಿಯವರ ಕ್ರಾಂತಿಕಾರಕ ವಿಚಾರಗಳು ಮನಸ್ಸಿನ ಅಧಿಕಾಂಶ ವೈದಿಕ ಬೇಡಿಕೆಗಳನ್ನು ಬಿಚ್ಚಿ ಹಾಕಿದ್ದವು- ಮತ್ತು ವಹಿಸಿಕೊಂಡ ಜವಾಬ್ದಾರಿಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸುವುದೂ, ದಿನಕ್ಕೆ ಹದಿನಾರು-ಹದಿನೆಂಟು ಗಂಟೆ ದುಡಿಯುವುದೂ ಅಭ್ಯಾಸವಾಗಿತ್ತು.

ಮದ್ರಾಸಿನಲ್ಲಿಯೂ ಒಳ್ಳೇ ಕೆಲಸಗಾರನೆಂಬ ಮನ್ನಣೆ ಸಿಕ್ಕಿತು. ಸಂಬಳವೇನೂ ಬಹಳ ಹೆಚ್ಚಲ್ಲಿಲ್ಲ. ಆಗಿನ (೧೯೪೧) ೨೨ ರೂಪಾಯಿ! ಅಲ್ಲಿಂದ ನನ್ನ ಬಿಡುಗಡೆಗೆ ಕಾರಣ ಜಪಾನೀಯರು. ಅವರು ೧೯೪೨ ಏಪ್ರಿಲಿನಲ್ಲಿ ಕಾಕಿನಾಡ ಮತ್ತು ವಿಶಾಖಪಟ್ಟಣದ ಮೇಲೆ ಬಾಂಬು ಹಾಕಿದರು. ಮದ್ರಾಸಿನ ಮೇಲೂ ಹಾರಾಡಿದರು. ಮದ್ರಾಸಿನಲ್ಲಿ ಎಂದೂ ಇಲ್ಲದ ಕೋಲಾಹಲವೆದ್ದಿತು. ದಿನಕ್ಕೆ ೨೫,೦೦೦ದಂತೆ ಜನ ಪಟ್ಟಣತ್ಯಾಗ ಮಾಡಿದರು. ನನ್ನ ಹೆಂಡತಿಯ ಅಣ್ಣಂದಿರು ಧಾರವಾಡದಲ್ಲಿ ಒಂದು ಹೊಟೆಲ್ ಪ್ರಾರಂಭಿಸಿದ್ದರು. ಅವರು ನನಗೆ ಅಪಾಯಕರ ಮದ್ರಾಸು ಬಿಟ್ಟು ಧಾರವಾಡಕ್ಕೆ ಬರಲು ಒತ್ತಾಯಿಸಿದರು. ಬಾಂಬಿಗೆ ನಾನೇನು ಅಂಜಿದೆನೆಂದಲ್ಲ. ಸಾಮೂಹಿಕ ವಿಪತ್ತಿನಲ್ಲಿ ವ್ಯಕ್ತಿ ಅಪಾಯವನ್ನು ಸ್ವಾಗತಿಸಲು ಕಲಿಯುತ್ತಾನೆಂಬ ಆಶ್ಚರ್ಯಕರ ಅನುಭವ ನನಗಾಯಿತು. ಆದರೆ ಮದ್ರಾಸಿನಲ್ಲಿ ಹೋಟೆಲುಗಳಿಗೆ ಭವಿಷ್ಯ ಕರಾಳವೆಂದೆನಿಸಿತ್ತು. ಹೀಗೆ ನಾನು ಧಾರವಾಡಕ್ಕೆ ಬಂದೆ. ನಾಲ್ಕಾರು ತಿಂಗಳೊಳಗೆ "ಸಂಯುಕ್ತ ಕರ್ನಾಟಕ"ದ ನಿರ್ವಾಹಕ ಸಂಪಾದಕರ ಆಮಂತ್ರಣದಂತೆ, ಅದರ ಮುದ್ರಣಾಲಯದ ನಿರ್ವಾಹಕನಾಗಿ ಹುಬ್ಬಳ್ಳಿಗೆ ಹೋದೆ, (೧೯೪೨ ನವಂಬರ್).

"ಸಂಯುಕ್ತ ಕರ್ನಾಟಕ" ಸಂಸ್ಥೆಯೊಡನೆ ನಾನು ನನ್ನ ಬದುಕಿನ ಬಹು ಭಾಗವನ್ನು ಕಳೆದೆ. ಸಾವಕಾಶವಾಗಿ ನಾನು ವ್ಯವಸ್ಥಾಪಕ ವಿಭಾಗದಿಂದ ಸಂಪಾದಕೀಯ ವಿಭಾಗಕ್ಕೆ ಸರಿದೆ. ಇಲ್ಲಿ ನನ್ನ ಇನ್ನೊಂದು ದೌರ್ಬಲ್ಯವನ್ನು ಹೇಳಬೇಕು; ಅದು ಇನ್ನೊಂದು ರೀತಿಯಲ್ಲಿ ಸೌಬಲ್ಯವೂ ಆಗಿತ್ತೆನ್ನುವುದು ಬೇರೆ ಮಾತು. ನನ್ನ ಅಧೀನದಲ್ಲಿ ಕೆಲಸ ಮಾಡುವವರನ್ನು ಮೆನೇಜ್ ಮಾಡುವುದು ನನ್ನ ಗಂಟಲ ತುತ್ತಾಗಿರಲಿಲ್ಲ. ಇದಕ್ಕೆ ಬಳಸಬೇಕಾದ ತಂತ್ರಗಳು ನನ್ನ ಬುದ್ಧಿಯ ಥಿಯರೆಟಿಕಲ್ ಅಳವಿನೊಳಗಿನವಾದರೂ ನನ್ನ ಭಾವನೆಯ ಅಳವಿಗೆ ಹೊರಗಿನವಾಗಿದ್ದವು. ವ್ಯವಹಾರದಲ್ಲಿ ನಾನೊಬ್ಬ ಭೋಳೇ ಶಂಕರ. ಹೀಗೆ ನಾನು ಒಂಟಿಸಲಗನಾಗಲು ಹೆಚ್ಚು ಅವಕಾಶವಿರುವ ಸಂಪಾದಕೀಯ ವಿಭಾಗವನ್ನೇ ಇಷ್ಟಪಟ್ಟೆ. ಸಂಪ್ರದಾಯವಂತ ಸಂಸ್ಥೆಯಲ್ಲಿ ನಾನೊಬ್ಬ "ಕಮ್ಯುನಿಸ್ಟ್" ಎನಿಸಿದರೂ ಅಲ್ಲಿ ನನಗೆ ಯಾರೂ ಅಡ್ಡಗಾಲು ಹಾಕಲಿಲ್ಲ. ನನ್ನ ಅಪರಿಮಿತ ಕುತೂಹಲದಿಂದಾಗಿ, ಅಲ್ಲಿ ಬರುತ್ತಿದ್ದ ದೇಶಿ ವಿದೇಶಿ ಪತ್ರಿಕೆ, ಪುಸ್ತಕಗಳನ್ನು ಕಬಳಿಸುತ್ತ ೧೯೫೦ರೊಳಗೆ ನಾನೊಬ್ಬ "ಸರ್ವಜ್ಞ" ಎನಿಸಿದ್ದೆ. ಅದೇ ವರ್ಷದಲ್ಲಿ ನನ್ನದೇ ಸ್ವಂತ ನಿರ್ಣಯದಿಂದ ಲಾಂಗೂಲಾಚಾರ್ಯ ಎಂಬ ಹೆಸರಿನಿಂದ ಒಂದು ಲಘು ಬರಹದ ಸ್ತಂಭವನ್ನು "ಕರ್ಮವೀರ"ದಲ್ಲಿ ಆರಂಭಿಸಿದೆ. ಅದು ಓದುಗರ ಕಲ್ಪನೆಯನ್ನು ಸೆರೆಹಿಡಿಯಿತು. ಕೆಲ ವರ್ಷಗಳವರೆಗೆ ಶ್ರೀರಂಗರೇ ಅದನ್ನು ಬರೆಯುತ್ತಾರೆಂಬ ತಿಳಿವಳಿಕೆ ಓದುಗರಲ್ಲಿ ಹಬ್ಬಿತ್ತು. ನಾನು ಅದನ್ನು ತಿದ್ದಲು ಹೋಗಲಿಲ್ಲ. ಉದಾತ್ತ ತ್ಯಾಗದ ಮುಖವಾಡ ಹೊತ್ತು ರಾಜಕಾರಣ ಮಾಡುವವರ ಒಳ ಇರಾದೆಗಳನ್ನು ಗಾಳಿಗೆ ಹಿಡಿಯುವ ಪ್ರವೃತ್ತಿಯಿಂದಾಗಿ "ಹೇಸಿ

ಲಾಂಗೂಲಾಚಾರ್ಯ" ಎಂಬ ಬಿರುದನ್ನೂ ಪಡೆದೆ. ಲಾಂಗೂಲಾಚಾರ್ಯನ ಪ್ರಾಬಲ್ಯ ದಿಂದಾಗಿ ನಾನು ಬೇರೆ ಗಂಭೀರ ವಿಷಯಗಳ ಮೇಲೆ, ಮತ್ತು ಕಥೆ ಕವಿತೆಗಳನ್ನೂ, ಬರೆಯ ಬಲ್ಲೆನೆಂಬುದೂ, ಬರೆದಿದ್ದೇನೆಂಬುದೂ ಮರೆತು ಹೋಗುವಂತಾಯಿತು. ಆದರೆ "ಕರ್ಮವೀರ" ದಲ್ಲಿ ಕಳೆದ ಸುಮಾರು ಹನ್ನೆರಡು ವರ್ಷಗಳಲ್ಲಿ ನಾನು ಪುಸ್ತಕ, ಸಿನೆಮಾ ವಿಮರ್ಶೆಯಿಂದಾರಂಭಿಸಿ ಜಟಿಲ ವೈಜ್ಞಾನಿಕ ವಿಷಯುಗಳವರೆಗೆ ಕಂಡ ಕಂಡ ವಿಷಯ ಗಳ ಮೇಲೆ ಬರೆದೆ. ನನ್ನ ಕುತೂಹಲದ ದಶ ಮುಖಗಳಿಗೆ ಅನ್ನ ಕೊಡಲು ನಾನು ಬಹಳ ಕಾಲವನ್ನು ಅಧಿಕ ಪ್ರಸಂಗದ ಓದಿನಲ್ಲಿ ಕಳೆಯು ತ್ತಿದ್ದುದರಿಂದ ಪ್ರಸ್ತುತ ಕಾರ್ಯವನ್ನು ಪೂರೈ ಸಲು ಬೇರೆಯೆ ದುಡಿಯಬೇಕಾಗುತ್ತಿದ್ದು ದಿನಕ್ಕೆ ೧೨-೧೪ ಗಂಟೆ ಕೆಲಸ ಬೀಳುತ್ತಿತ್ತು. ದುಡಿ ಯಲು ನಾನು ಗಟ್ಟಿಯಾಗಿದ್ದೆ. ಆ ದುಡಿಮೆ ನನಗೆ ಇಷ್ಟವಾಗಿದ್ದಾಗ.

೧೯೫೮ರಲ್ಲಿ ಡೈಜೆಸ್ಟ್ ಮಾದರಿಯ "ಕಸ್ತೂರಿ" ಪ್ರಾರಂಭವಾದಾಗ ಬೇಕಾದ ವಿಷ ಯದ ಮೇಲೆ ತಿಳಿಯಾಗಿ ಬರೆಯುಬಲ್ಲ ಶಕ್ತಿ ನನ್ನ ದಾಗಿತ್ತು. ಹೊಸ ಪತ್ರಿಕೆಯ ಸಂಪಾದಕತ್ವ ನನ್ನ ಕೊರಳಿಗೆ ಬಿತ್ತು. ೧೮ ವರ್ಷ ಅದನ್ನು ಯಾರೂ "ಹೆಸರಿಡ"ದಂತೆ ನಿರ್ವಹಿಸಿ, ೧೯೭೪-೭೫ ರಲ್ಲಿ ಬಂದ ಕಡು ಕಾಯಿಲೆಯಿಂದ ಸತ್ತು ಸತ್ತು ಬದುಕಿದ ಮೇಲೆ ರಾಜೀನಾಮೆಯಿತ್ತು ಮುಕ್ತನಾದೆ.

ನನ್ನ ಕೆಲಸಕ್ಕೆ ಮಾನ್ಯತೆ "ಕಸ್ತೂರಿ"ಗೆ ಮೂರು ವರ್ಷವಾಗುವುದರೊಳಗೆ ಸಿಕ್ಕಿತ್ತು. ನನ್ನ ಲೇಖನ ವೃತ್ತಿಗೆ "ಕರ್ಮವೀರ"ದಲ್ಲಿರುವಾ ಗಲೇ ಮನ್ನಣೆ ದೊರಕಿತ್ತು. ನನ್ನ ಕವಿತಾ ಸಂಗ್ರಹ "ನವನೀರದ"ಕ್ಕೆ ಮುಂಬಯಿ ಸರಕಾ ರದ ಬಹುಮಾನವೂ ಬಂದಾಗಿತ್ತು. ನನ್ನ ಹರಟೆ ಗಳ ಒಂದು ಸಂಗ್ರಹ "ಪ್ರಹಾರ" ಏಳನೇ ದಶಕ ದಲ್ಲಿ ಪ್ರಕಟವಾಗಿತ್ತು. ನಾನು ಭೋಳೇ ಮನುಷ್ಯ ಅಂದೆನಲ್ಲ. ಈ ಕೊರತೆಗಳಲ್ಲಿ ನನ್ನ ಯೋಗ್ಯತೆ ಯನ್ನು ನಾನು ಸಾಕಷ್ಟು ಬೇಗ ಮನಗಾಣದಿ ದ್ದದ್ದೂ ಒಂದು. ಅದನ್ನು ಮನಗಂಡವರು ಬೇರೆ ಯವರು; ಮತ್ತು ಅವರಿಂದಲೇ ನನ್ನ ವೃತ್ತಿ ಯಲ್ಲಿ ಮೇಲೇರಲು ಸಾಧ್ಯವಾದದ್ದು. ೧೯೫೮ರ ಸುಮಾರಿಗೆ ಒಂದು ಪತ್ರಿಕೋದ್ಯೋಗಿ ತಂಡ ದೊಡನೆ ನಾನು ಉತ್ತರ ಭಾರತ ಪ್ರವಾಸ ಕೈಕೊಂಡ ಮೂರು ವಾರಗಳ ಅವಧಿಯಲ್ಲಿ ತಾನೇ, ನನಗೆ ನಾನು ಸ್ವಲ್ಪ ಅಸಾಧಾರಣ ಮನುಷ್ಯ ಎಂದು ಪ್ರತೀತವಾದದ್ದು. ವಿದೇಶೀ ರಾಯಭಾರ ವರ್ಗದವರು ನಮ್ಮ ಕಚೇರಿಗೆ ಭೆಟ್ಟಿ ಕೊಟ್ಟಾಗಲೂ ನನ್ನ ಪ್ರಶ್ನೆಗಳಿಂದ ಅವರು ಪ್ರಭಾವಿತರಾಗುತ್ತಿದ್ದದ್ದು ಗೋಚರಕ್ಕೆ ಬರು ತ್ತಿತ್ತು. ಆದರೆ ಇದೆಲ್ಲದರ ಪ್ರಯೋಜನ ತೆಗೆದು ಕೊಳ್ಳುವ ಚಾಕಚಾಕ್ಯ ನನಗಿರಲಿಲ್ಲ.

ನಾನು ಆಸ್ಪತ್ರೆಯಲ್ಲಿ ಎರಡೂವರೆ ತಿಂಗಳು ಸಾವು ಬದುಕುಗಳ ನಡುವೆ ಡೋಲಾಯಮಾನ ನಾಗಿ ಮಲಗಿದ್ದಾಗ ನನ್ನ ಆರೋಗ್ಯ ವಿಚಾರಿಸಿ ನಾಡಿನ ಓದುಗರು ಬರೆಯುತ್ತಿದ್ದ ಆತಂಕ ಪೂರ್ಣ ಪತ್ರಗಳು, ನನ್ನನ್ನು ಕಾಣಲು ಬರು ತ್ತಿದ್ದ ಜನರ ಧಾರೆ ನನಗೂ, ನನ್ನ ಕುಟುಂಬದ ಜನರಿಗೂ ಒಂದು ಆಶ್ಚರ್ಯವಾಗಿತ್ತು. ಕೆಲ ಮಟ್ಟಿಗೆ ನನ್ನನ್ನು ಬದುಕಿಸಿಯೇ ಬಿಡಬೇಕೆಂದು ಡಾಕ್ಟರುಗಳಲ್ಲಿ ಒಂದು ಉತ್ಸಾಹವನ್ನೂ ಅದು ಪ್ರಚೋದಿಸಿತ್ತು. ಸತ್ತರೂ ಬದುಕಿದರೂ ಇದು ಒಂದು ಧನ್ಯತೆಯ ಭಾವ ನನ್ನದಾಯಿತು.

ನನ್ನ ವಿಶ್ರಾಂತಿಯ ನಂತರ ಕೂಡ ನನ್ನ ಬರ ವಣಿಗೆ ಮುಂದುವರಿದಿದೆ. ಮಣಿಪಾಲದ ಪತ್ರಿಕಾ ಗುಂಪಿನವರು ಮೊಟ್ಟ ಮೊದಲು ನನ್ನ ಲೇಖನಗಳನ್ನು ತಾವಾಗಿ ಸ್ವಾಗತಿಸಿದವರು. "ಕಸ್ತೂರಿ"ಗೂ ನಾನು ಬರೆಯುತ್ತಿದ್ದೇನೆ. ನನ್ನ ಒಂದು ಕವಿತಾ ಸಂಗ್ರಹ ("ಕೆಲವು ಪದ್ಯಗಳು") ಮತ್ತು ಎರಡು ಹರಟೆ ಸಂಗ್ರಹಗಳು ("ಲೋಕದ ಡೊಂಕು" ಮತ್ತು "ವಿಪರೀತ") ಪ್ರಕಟವಾದವು. ನಿವೃತ್ತಿಗಿಂತ ಎರಡು ವರ್ಷ

ಮೊದಲು ಬರೆದ ಸ್ವಾತಂತ್ರ್ಯದ ೨೫ ವರ್ಷಗಳ ಪರಾಮರ್ಶೆಯೂ ಮೆಚ್ಚಿಗೆ ಗಳಿಸಿತ್ತು. ನನ್ನ ತುಳು ಕವಿತೆಗಳ ಒಂದು ಸಂಗ್ರಹ ಹೊರಬಂತು.

ನನಗೆ ಸನ್ಮಾನಗಳೂ ಆದವು. ನನ್ನ ವೃತ್ತಿ ಬಾಂಧವರು ನನಗೆ ಪತ್ರಿಕೋದ್ಯೋಗದ ಪಿ. ಆರ್. ರಾಮಯ್ಯ ಪ್ರಶಸ್ತಿ ನೀಡಿದರು. ಮೈಸೂರಿನಲ್ಲಿ ನನಗೆ ಸಾರ್ವಜನಿಕ ಸನ್ಮಾನ ಮತ್ತು ನಿಧಿ ಪ್ರದಾನವಾಯಿತು. ಪರಿಷತ್ತಿನ ವಜ್ರಮಹೋತ್ಸವದಲ್ಲಿ ಗೌರವಿಸಲ್ಪಟ್ಟೆ. ಕರ್ನಾಟಕ ಸಾಹಿತ್ಯ ಅಕಾದಮಿಯೂ ನನಗೆ ಪ್ರಶಸ್ತಿ ಕೊಟ್ಟಿದೆ. ವರ್ಧಮಾನ ಪ್ರಶಸ್ತಿಯನ್ನೂ ಪಡೆದೆ. ಇನ್ನೂ ಅನೇಕ ಸಂಘ ಸಂಸ್ಥೆಗಳು ನನ್ನನ್ನು ಗೌರವಿಸಿವೆ. ನಿಶಿತವಾದ ವಿಶ್ಲೇಷಣಾತ್ಮಕ ಬರಹದಿಂದ ನಾನೊಬ್ಬ "ವಿಚಾರವಾದಿ" ಎಂದೂ ಅನಿಸಿಕೊಂಡಿದ್ದೇನೆ. ಕರ್ನಾಟಕ ಸರಕಾರದ ಗೌರವ ವೇತನ ನನಗೆ ಲಭ್ಯವಾಗಿದೆ. ಬದುಕಿದ್ದೇನೆ. ಯಾರಿಗೂ ಆರ್ಥಿಕವಾಗಿ, ಶಾರೀರಿಕವಾಗಿ ಭಾರವಾಗದೆ ಬದುಕಿದ್ದೇನೆ, ಎಂಬ ಸಮಾಧಾನ ಈ ವರೆಗೆ ಇದೆ. ನನ್ನ ಪಿತೃಗಳಿಗೆ ಕವ್ಯೋಷ್ಣವಾದ ತರ್ಪಣವನ್ನು ಕೊಡುವುದು ತಪ್ಪಿದೆ.

ಆದರೆ ಇದರಲ್ಲಿ ನನ್ನದೆಷ್ಟು, ನನ್ನದಲ್ಲದ್ದೆಷ್ಟು? ನಾನು ಭವಸಾಗರದಲ್ಲಿ ಈಸಿದ್ದೆಷ್ಟು, ತೇಲಿದ್ದೆಷ್ಟು? ನನ್ನ ಯೋಗ್ಯತೆಯನ್ನು ಗುರುತಿಸಿ ಇತರರು ನನ್ನ ತೇರ್ಗಡೆಗೆ ನೆರವಾಗದಿದ್ದರೆ ನಾನು ಏನಾಗುತ್ತಿದ್ದೆ? ಬಹುಶಃ ಏನೂ ಆಗುತ್ತಿರಲಿಲ್ಲ. ಅನಾಹುತಗಳು ಕೂಡ ಹಿಂದಿರುಗಿ ನೋಡುವಾಗ ನನಗೆ ವರಗಳೇ ಆಗಿ ಪರಿಣಮಿಸಿವೆ. ಉಡುಪಿಯಲ್ಲಿ ನಾನು ಕೆಲಸ ಮಾಡುತ್ತಿದ್ದ ಸಂಸ್ಥೆಗೆ ಕೇಡು ಆಗಿದ್ದಿಲ್ಲವಾದರೆ ನಾನು ಬಹುಶಃ ಒಳ್ಳೆಯ ಅಕೌಂಟಂಟ ಆನಿಸಬಹುದಾಗಿತ್ತು; ಕೀರ್ತಿ ಲಭಿಸುತ್ತಿರಲಿಲ್ಲ. ಹೋಗಲಿ, ಜಪಾನೀಯರು ಪೂರ್ವ ಕರಾವಳಿಯಲ್ಲಿ ಬಾಂಬ್ ಬೆದರಿಕೆ ಎಬ್ಬಿಸದಿದ್ದಿದ್ದರೆ ನಾನು ಧಾರವಾಡಕ್ಕೆ ಬರುತ್ತಿದ್ದೆನೇ? ಮುಂದಿನದೆಲ್ಲ ಜರಗುತ್ತಿತ್ತೆ?

ನಾನು ೧೯೪೦ ಡಿಸೆಂಬರ್ ೩೧ ರಂದು ಊರು ಬಿಟ್ಟಾಗ ನನ್ನದೆಲ್ಲ ಮುಗಿದೇ ಹೋಯಿತು ಅಂದುಕೊಂಡಿದ್ದೆ. ಭವಿತವ್ಯತೆಯ ಪಟ್ಟುಗಳು ಎಷ್ಟು ಅನೂಹ್ಯವಾಗಿರುತ್ತವೆ!

ನನ್ನ ಬದುಕು ಒಂದು ದಾರಿ ಹಿಡಿಯುವುದಕ್ಕೆ ಕಾರಣರಾದ ನನ್ನ ದೊಡ್ಡಣ್ಣ ವೆಂಕಟದಾಸಾಚಾರ್ಯರು, ನಾನು ಸಮುದ್ರಕ್ಕೆ ಬಿದ್ದಾಗ ನನ್ನ ಹೆಂಡತಿ ಮಕ್ಕಳನ್ನು ನೋಡಿಕೊಂಡ ಅವಳ ತಂದೆ ಮತ್ತು ಅಣ್ಣಂದಿರು, ನನ್ನೊಡನೆ ಬಡತನದ ಬೇಗೆಯನ್ನು ಪಿಟ್ಟೆನ್ನದೆ ಸಹಿಸಿಕೊಂಡ ನನ್ನ ಹೆಂಡತಿ ಲಕ್ಷ್ಮಿ, ನಾನು ಸಾಯುತ್ತಿದ್ದಾಗ ಡಾಕ್ಟರುಗಳನ್ನು ಪುಸಲಾಯಿಸಿ ನನಗೆ ಶಸ್ತ್ರಕ್ರಿಯೆ ಮಾಡಿಸಿದ ನನ್ನ ಭಾವಮೈದುನ ಜನಾರ್ದನ, ಕೇವಲ ಒಬ್ಬ ವಿಕ್ಷಿಪ್ತ ಪತ್ರಿಕೋದ್ಯೋಗಿಯನ್ನು ಬದುಕಿಸಲು ಹಗಲಿರುಳು ಸಾವಿನೊಡನೆ ಸೆಣಸಿದ ಕರ್ನಾಟಕ ಮೆಡಿಕಲ್ ಕಾಲೇಜಿನ ಡಾಕ್ಟರರು, ೭೩ ದಿವಸ ಕಣ್ಣು ಮುಚ್ಚದೆ ನನ್ನ ಅರೆಜೀವದ ದೇಹವನ್ನು ಕಾಯುತ್ತಿದ್ದ ನನ್ನ ಹೆಂಡತಿ (ನನ್ನ ಮೇಲೆ ಶಸ್ತ್ರಕ್ರಿಯೆ ಮಾಡಿದ ಡಾ. ಸಿ. ಆರ್. ರಘು ಅವಳನ್ನು ಸತಿ ಸಾವಿತ್ರಿಯೆಂದೇ ಕರೆದಿದ್ದಾರೆ), ನನ್ನಲ್ಲಿ ಗುಣವನ್ನು ಕಂಡ "ಸಂಯುಕ್ತ ಕರ್ನಾಟಕ"ದ ಸಂಪಾದಕರಾದ ಶ್ರೀ ಮೊಹರೆ ಹಣಮಂತರಾಯರು, ಶ್ರೀ ಹ. ರಾ. ಪುರೋಹಿತರು ಮತ್ತು ಡಾ. ಆರ್. ಆರ್. ದಿವಾಕರರು, ನನ್ನ ಮೇಲೆ ಎಳ್ಳಷ್ಟೂ ಕರುಬು ತೋರಿಸದೆ ಒಡನಾಡಿದ ಸಹೋದ್ಯೋಗಿಗಳು, ನನ್ನ ಸನ್ಮಾನ ಮತ್ತು ಪುಸ್ತಕಗಳ ಪ್ರಕಟನೆಗಳಲ್ಲಿ ಅವಿರತ ಆಸಕ್ತಿ ತೋರಿಸಿದ ನನ್ನ ಅನಿಮಿತ್ತ ಬಂಧು ಶ್ರೀ ಜಿ. ಟಿ. ನಾರಾಯಣರಾಯರು, ಇನ್ನೂ ಎಷ್ಟೋ ಸ್ನೇಹಿತರು ಯಾರು ಯಾರಿಗೆ ಈ ಯಜ್ಞದಲ್ಲಿ ಎಷ್ಟು ಹವಿರ್ಭಾಗ ಸಿಗಬೇಕೋ ಹೇಳಲಾರೆ. ಎಲ್ಲವನ್ನೂ ಕಳೆದ ಮೇಲೆ ನನ್ನದು ಎಂದುಳಿಯಬಹುದಾದದ್ದು ಎಷ್ಟು? ❀

# ಕಲ್ಪನೆ ಮತ್ತು ವಾಸ್ತವಿಕತೆ

ಮಹಾಭಾರತ ಯುದ್ಧ ಹದಿನೆಂಟು ದಿನಗಳ ಕಾಲ ನಡೆಯಿತೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿ. ಅತಿರಥ, ಮಹಾರಥರಿಂದ ಕೂಡಿದ ಈ ಯುದ್ಧದಲ್ಲಿ ಕೌರವರಿಗೆ ಸೇರಿದ ಹನ್ನೊಂದು ಅಕ್ಷೋಹಿಣಿ ಮತ್ತು ಪಾಂಡವರಿಗೆ ಸೇರಿದ ಏಳು ಅಕ್ಷೋಹಿಣಿ ಸೈನ್ಯ ನಾಶವಾದವು.

ಆದರೆ ಈ ಅಕ್ಷೋಹಿಣಿ ಸಂಖ್ಯೆ ನಿಜವೇ ಆಗಿದ್ದರೆ, ಯಾರಿಗಾದರೂ ಗಾಬರಿಯೆನಿಸುವುದು ಸಹಜ. ಏಕೆಂದರೆ ಆ ಯುದ್ಧದಲ್ಲಿ ಸುಮಾರು ಐವತ್ತು ಲಕ್ಷ ಕಾಲಾಳುಗಳು ನೇರವಾಗಿ ಹೋರಾಡಿ ಸತ್ತರು. ಒಂದು ಲಕ್ಷ ಮೂವತ್ತು ಸಾವಿರ ರಥ(ಕುದುರೆಗಳ ಸಹಿತ)ಗಳು ನುಚ್ಚು ನೂರಾದವು. ಅಷ್ಟೇ ಸಂಖ್ಯೆಯ ಆನೆಗಳು ಮತ್ತು ಆನೆಗಳ ಮೂರರಷ್ಟು ಕುದುರೆಗಳೂ ಸತ್ತು ಹೋದವು.

ಈ ಆನೆ, ಕುದುರೆ, ರಥ, ಕಾಲಾಳುಗಳಿಗೆ ಆಹಾರ, ಆಯುಧ ಮುಂತಾದ ಸಾಮಗ್ರಿಗಳನ್ನು ಒದಗಿಸಲು, ಎಷ್ಟೋ ಲಕ್ಷ ಜನ ಪರಿಚಾರಕರೂ ಇರಲೇಬೇಕಷ್ಟೇ.

ಕುರುಕ್ಷೇತ್ರದಲ್ಲಿ ನಡೆದ ಈ ಯುದ್ಧದ ಸ್ಥಳವನ್ನು ಇಂದಿನ ದೆಹಲಿ ಮತ್ತು ದಾನೇಶ್ವರದ ಮಧ್ಯ ಭಾಗವೆಂದು ಹೇಳಲಾಗುತ್ತದೆ. ಆದರೆ ಇಷ್ಟೊಂದು ವಿಶಾಲ ಸೈನ್ಯ ಈ ಮೈದಾನದಲ್ಲಿ ನಿಂತು ಹೋರಾಡಿದ್ದಾದರೂ ಹೇಗೆ?

ಬ್ರಿಟಿಶರು ಭಾರತಕ್ಕೆ ಬರುವ ಮುಂಚೆ ನಮ್ಮಲ್ಲಿ ಜನಗಣತಿಯ ವ್ಯವಸ್ಥಿತ ಪದ್ಧತಿ ಇರಲಿಲ್ಲ. ಲಾರ್ಡ್ ರಿಪನ್ ವೈಸ್‌ರಾಯನಾಗಿದ್ದ ಕಾಲದಲ್ಲಿ ಮೊಟ್ಟ ಮೊದಲು ಜನಗಣತಿಯ (೧೬೭೧) ಕಾರ್ಯ ಕೈಕೊಂಡಾಗ ಭಾರತದ ಜನಸಂಖ್ಯೆ (ಇಂದಿನ ಬರ್ಮಾ ಪಾಕಿಸ್ತಾನ, ಬಂಗ್ಲಾದೇಶ, ಶ್ರೀಲಂಕಾ ಸೇರಿ) ಇಪ್ಪತ್ತು ಕೋಟಿಯಾಗಿತ್ತು. ಇದಕ್ಕೂ ಎಷ್ಟೋ ಶತಮಾನಗಳ ಮೊದಲು ನಡೆದದ್ದೆಂದು ಹೇಳಲಾದ ಮಹಾಭಾರತ ಯುದ್ಧದಲ್ಲಿ ಇಷ್ಟೊಂದು ವಿಶಾಲ ಸಂಖ್ಯೆಯಲ್ಲಿ ಸೈನ್ಯಕ್ಕೆ ಜನರು ಸೇರಿದ್ದಾದರೂ ಹೇಗೆ? ಕೃಷಿಕರಿಗೆ ಅಗತ್ಯವಾದ, ನೇಗಿಲು, ಕುಳ, ಸಲಿಕೆ, ಪಿಕಾಸು, ಹಾರೆಗಳಿಗೇ ಕಬ್ಬಿಣ ಅಲಭ್ಯವಾಗಿದ್ದ ಆ ಕಾಲದಲ್ಲಿ, ರಥಗಳಿಗೂ ಆಯುಧಗಳಿಗೂ ಕಬ್ಬಿಣ ಹೇಗೆ ಸಿಕ್ಕಿತು?

ಇತಿಹಾಸದ ಪುಟಗಳನ್ನು ತಿರುವಿದರೆ ಮೌರ್ಯ ಸಾಮ್ರಾಜ್ಯಕ್ಕಿಂತ ಮುಂಚೆ ನಮ್ಮಲ್ಲಿ ವ್ಯವಸ್ಥಿತ ಸೈನ್ಯ ಪದ್ಧತಿ ಇರಲಿಲ್ಲ. ಜನಸಂಖ್ಯೆಯು ಹೆಚ್ಚಳವೂ ಇರಲಿಲ್ಲ. ಚಂದ್ರಗುಪ್ತನ ಶಿಬಿರದಲ್ಲಿ ಕೇವಲ ನಾಲ್ಕು ಲಕ್ಷ ಸೈನಿಕರಿದ್ದರೆಂದು ತಿಳಿದುಬರುತ್ತದೆ.

ಇನ್ನೊಂದು ವೈಶಿಷ್ಟ್ಯವೆಂದರೆ, ಮಹಾಭಾರತದಲ್ಲಿ ಪರ್ವಗಳು '೧೮', ಅದಕ್ಕೆ ಸೇರಿದ (?) ಭಗವದ್ಗೀತೆಯ ಅಧ್ಯಾಯಗಳು '೧೮', ಯುದ್ಧ ನಡೆದ ದಿನಗಳೂ '೧೮'. ಅಂತೆಯೇ ಅಕ್ಷೋಹಿಣಿ ಸೈನ್ಯ ಕೂಡ '೧೮' ಇರಬಹುದು!

(ಸಂಗ್ರಹ)

—ಕಿಬ್ಬಳ್ಳಿ ಗಣಪತಿ ಶರ್ಮ

# ಲೋಕಲ್ ಟ್ರೇನ್

ಕೆ. ಚಂದ್ರಮೌಳಿ



ಜನಗಳನ್ನು ಉಗುಳುತ್ತಾ ನಿಲ್ಲುವ, ನುಂಗುತ್ತಾ ಓಡುವ ಉಗಿಬಂಡಿ.

ಬೊಂಬಾಯಿಗೆ ಎಷ್ಟೋ ಸಲ ಬಂದು ಹೋಗಿದ್ದರೂ ಲೋಕಲ್ ಟ್ರೇನಿನಲ್ಲಿ ಕೂರುವ ಸಾಹಸವನ್ನು ಮಾತ್ರ ಎಂದೂ ಮಾಡಿರಲಿಲ್ಲ. ಮೆಟ್ಟಿಲು ಬೇಕಾದ್ರೂ ಹತ್ತಿ ಹತ್ತನೇ ಮಹಡಿಗೆ ಹೋಗ್ತೀನಿ, ಆ ಲಿಫ್ಟ್ ಮಾತ್ರ ಬೇಡ ಅನ್ನುವವರಂತೆ, ಬಸ್ಸು, ಟ್ಯಾಕ್ಸೀಲಿ ಬೇಕಾದ್ರೂ ಹೋಗ್ತೀನಿ ಆದರೆ ಲೋಕಲ್ ಟ್ರೇನಿನ ಸಹವಾಸವೇ ಬೇಡ ಅಂತಿದ್ದೆ. ಬೊಂಬಾಯಿನಲ್ಲೇ ವಾಸವಾಗಲು ಬಂದ ಮೇಲೆ ಈ ಹೆದರಿಕೆ ಕಡಿಮೆಯಾದದ್ದೇ ಅಲ್ಲದೆ, ಲೋಕಲ್ ಟ್ರೇನ್ ಬಿಟ್ಟರೆ ವಿಧಿಯೇ ಇಲ್ಲ ಅನಿಸಿತು. ಲೋಕಲ್ ಟ್ರೇನ್ ನಗರದ ಜೀವನಾಡಿ ಇದ್ದ ಹಾಗೆ — ಜನಗಳ ಪ್ರವಾಹವನ್ನು ಒಂದು ತುದಿಯಿಂದ ಇನ್ನೊಂದು ತುದಿಗೆ, ಮೇಲಿನಿಂದ ಕೆಳಕ್ಕೆ, ಕೆಳಗಿನಿಂದ ಮೇಲಕ್ಕೆ ಮುಟ್ಟಿಸುವ ನರಗಳೇ ಈ ಟ್ರೇನ್‌ಗಳು. ಒಂದು ದಿವಸ, ಒಂದು ಗಂಟೆ, ಯಾಕೆ, ಕೆಲವೇ ನಿಮಿಷ ಈ ಟ್ರೇನ್ ನಿಂತರೂ ಆಗುವ ಕೋಲಾಹಲ ಹೇಳತೀರದು. ದಿನಕ್ಕೆ ನೂರಾರು ಡಬ್ಬಿಗಳು ವಿರಾರದಿಂದ ಚರ್ಚ್‌ಗೇಟ್‌ವರೆಗೆ ಕಲ್ಯಾಣದಿಂದ ವೀಟೀಯವರೆಗೆ, ಮತ್ತೆ ಹಿಂದಿರುಗಿ ಜನಗಳನ್ನು ಹೊತ್ತು ತರದಿದ್ದರೆ ಇಲ್ಲಿಯ ವ್ಯಾಪಾರೋದ್ಯಮ, ವ್ಯವಹಾರ, ಜನಜೀವನ ಎಲ್ಲಾ ಸ್ಥಗಿತವೇ ಆಗುತ್ತದೆಂಬುದರಲ್ಲಿ ಸಂಶಯವಿಲ್ಲ. ಈ ಲೋಕಲ್ ಟ್ರೇನ್‌ಗಳಿರುವುದರಿಂದಲೇ ಬೊಂಬಾಯಿ ನಗರ ಲಂಗೋಟಿಯ ತರಹ, ಹನುಮಂತನ ಬಾಲದ ತರಹ ಉದ್ದುದ್ದಕ್ಕೆ ಬೆಳೆದುಕೊಂಡೇ ಹೋಗಲು ಸಾಧ್ಯವಾಗಿದೆ; ಇಲ್ಲಿಯ ಬಸ್, ಟ್ಯಾಕ್ಸಿಗಳ ಭಾರವನ್ನು ಮುಕ್ಕಾಲಿನಷ್ಟು ತಾನೇ ಹೊತ್ತುಕೊಂಡಿದೆ.

ರೈಲು ಡಬ್ಬಿಯೊಳಗೆ ತುಂಬಿ ತುಳುಕುತ್ತಿರುವ ಜನಗಳು, ನಿಲ್ದಾಣದಲ್ಲಿ ರೈಲು ನಿಲ್ಲುವ ಮೊದಲೇ ಕಾಲನ್ನು ಪ್ಲಾಟ್‌ಫಾರ್ಮಿನ ಮೇಲೆ ಉಜ್ಜಿಕೊಂಡು, ದಡಬಡನೆ ಇಳಿದು, ಓಡುತ್ತಾ ಮೈ ಮೇಲೆಯೇ ಬೀಳುವ ರೌಡಿಗಳು, ಇಳಿಯು ವವರನ್ನೂ ತಳ್ಳಿಕೊಂಡು ಡಬ್ಬಿ ಹತ್ತುವ ಜನ, ತಲೆ ಮೈಯಲ್ಲಾ ಹೊರಗೆ ಹಾಕಿ ಕಾಲನ್ನು ಇನ್ನಾರ ಕಾಲ ಮೇಲೋ ಒತ್ತಿ, ಮೇಲಿನ ಕಂಬಿ ಹಿಡಿದು ವಾಲಾಡುತ್ತಾ ಪ್ರಯಾಣ ಮಾಡುವ ಜನಗಳು, ಇವನ್ನೆಲ್ಲಾ ನೋಡಿದಾಗ ಹೆದರಿ-ಕೆಯೇ ಆಗುತ್ತದೆ. ಇಲ್ಲಿಯ ಡಬ್ಬಿಯೊಳಗೆ ಎಂದಾದರೂ ನುಗ್ಗುವುದು ಸಾಧ್ಯವೇ, ರೈಲು ಪ್ರಯಾಣ ಸಾಧ್ಯವೇ ಅನಿಸುತ್ತದೆ. ಋಷಿಕೇಶ ದಲ್ಲಿ ರಭಸದಿಂದ ಹರಿಯುವ ಗಂಗೆಯನ್ನು ನೋಡಿ ಆ ಕೊರೆಯುವ ನೀರಿನಲ್ಲಿ ಸ್ನಾನಕ್ಕೆ ಇಳಿಯಲು ನಡುಗುವವನಂತೆ, ಈ ಲೋಕಲ್ ಟ್ರೇನಿನಿಂದ ಹೊರ ಬರುವ ಒಳನುಗ್ಗುವ ಜನರ ರಭಸವನ್ನು ದೂರದಿಂದ ನೋಡೇ ಹೆದರಿಕೆ ಯಾಗುತ್ತದೆ, ಒಳ ಹೋಗುವ ಸಾಹಸ ಮಾಡಲು ಧೈರ್ಯ ಬರುವುದಿಲ್ಲ. ನನ್ನಂತೆ ಲೋಕಲ್ ಟ್ರೇನನ್ನು ಹತ್ತಲು ಹೆದರಿದ ಇನ್ನೊಬ್ಬ ಮೂರ್ಖ, ಜನಗಳ ಗಲಾಟೆ ಸ್ವಲ್ಪ ಕಡಿಮೆಯಾಗಲೆಂದು ಬೆಳಗ್ಗಿನಿಂದ ಕಾಯುತ್ತಾ ನಿಂತವನು, ಸಂಜೆ ಕಚೇರಿ ಮುಗಿಯುವ ಹೊತ್ತಿಗೆ ರೈಲು ಹತ್ತಿದನಂತೆ!



ಲೋಕಲ್ ಟ್ರೇನ್ ಹತ್ತಲು ಯಾವ ಶಕ್ತಿ, ಸಾಮರ್ಥ್ಯವೂ ಬೇಡ ಎಂದು ತಿಳಿಯಲು ಕೆಲವು ದಿನಗಳೇ ಹಿಡಿದವು. ಮನೋಇಚ್ಛೆಯಿಂದಲೇ ಹಿಂದಿನ ಸಂನ್ಯಾಸಿಗಳು ಬೇರೆ ಸ್ಥಳಕ್ಕೆ ಪ್ರಯಾಣ ಮಾಡುತ್ತಿದ್ದರೆಂದು ಕೇಳಿದ್ದೀರಲ್ಲವೆ? ಇಲ್ಲಿ ಪ್ರಯಾಣ ಮಾಡಲು ನಿಮಗೆ ಬೇಕಾದ್ದು ಆ ಮನೋಇಚ್ಛೆಯೊಂದೇ. ಮನಸ್ಸು ಮಾಡಿ ಜನ ಜಂಗುಳಿಯ ಮಧ್ಯೆ, ಪ್ಲಾಟ್‌ಫಾರ್ಮಿನಲ್ಲಿ ನಿಂತು ಬಿಡಿ. ರೈಲು ಬಂದದ್ದೆ ತಡ, ಆ ಜನ ಪ್ರವಾಹ ನಿಮ್ಮನ್ನೂ ಅನಾಮತ್ತಾಗಿ ಎತ್ತಿ ಗಾಡಿಯೊಳಗೆ ತಳ್ಳಿರುತ್ತದೆ. ಆಗ ಹಾಗೂ ಹೀಗೂ ಮಾಡಿ ಒಂದು ಮೂಲೆಗೆ, ನಿಮ್ಮನ್ನು ನೀವೇ ಹೊಸಕಿಕೊಂಡರೆ ಕೆಲಸ ಮುಗಿಯಿತು. ಅಲ್ಲಿ ಒಬ್ಬರ ಮುಖ, ಇನ್ನೊಬ್ಬರ ಹೊಟ್ಟೆ, ಮತ್ತೊಬ್ಬರ ಮೊಣಕೈ, ಇನ್ನೊಬ್ಬರ ಮಂಡಿ, ನಾಲ್ಕು ಜನಗಳ ಕಾಲು, ಹೀಗೆ ಮನುಷ್ಯರ ಎಲ್ಲಾ ಅವಯವ, ಅಂಗಾಂಗಗಳಿಂದಲೂ ತಿವಿಸಿ ಕೊಂಡು, ಉಜ್ಜಿಸಿಕೊಂಡು ನಿಂತೇ ಇರಬೇಕು. ನೀವು ಇಳಿಯುವ ನಿಲ್ದಾಣ ಬರುವ ಮೊದಲು ಮತ್ತೆ ಜನಜಂಗುಳಿಯ ಮಧ್ಯೆ ಹೊಸಕಿಕೊಂಡು ಮುಂದೆ ಬನ್ನಿ, ಆಗ ಇಳಿಯುವ ಮೊದಲು ನೀವು ನಾಲ್ಕಾರು ಜನರ ಕಾಲು ತುಳಿದು ನಿಮ್ಮ ಸೇಡು ತೀರಿಸಿಕೊಳ್ಳಬಹುದು. ಆ ಜನ ಜಂಗುಳಿ ಒಂದು ದೊಡ್ಡ ಬಂಡೆಯಂತೆ enmasse ನಿಲ್ದಾಣದಲ್ಲಿ ಉರುಳುತ್ತದೆ; ಅಷ್ಟರಲ್ಲೇ ನೀವು ನಿಮ್ಮ ಯಾವ ಪ್ರಯತ್ನವೂ ಇಲ್ಲದೆ ಇಳಿದಿರುತ್ತೀರಿ. ಗಿರಿ–ಕಂದರಗಳಿಂದ ರಭಸವಾಗಿ ಹರಿದು ಬರುವ ಪ್ರವಾಹದಲ್ಲಿ ಸಿಕ್ಕಿದ ಮರದ ಕೊಂಬೆಯಂತೆ ಮಾತ್ರ ಆಗಿರು ತ್ತದೆ ನಿಮ್ಮ ಸ್ಥಿತಿ. ನಿಮಗೆ ಎರಡನೇ ದರ್ಜೆಯ ಕಳಪೆ ಜನಗಳಿಂದ ನೂಕಿಸಿ, ತುಳಿಸಿ, ತಿವಿಸಿ ಕೊಂಡು ಒದ್ದಾಡುವುದು ಸಾಕಾಯ್ತೆಂದರೆ, ಮೊದಲನೇ ದರ್ಜೆಯ, ತಿಕೀಟು ತಗೊಂಡು ಹೋಗಿ. ಆಗ ನೀವು ಮೊದಲನೆಯ ದರ್ಜೆಯ

ನಯುವಿನಯುದವರೆನಿಸಿದ, ಹೊಳಪಿನ, ಗಣ್ಯ ವ್ಯಕ್ತಿಗಳಿಂದ ಭುಜ ತಿಕ್ಕಿಸಿಕೊಳ್ಳುವ, ಕಾಲು ತುಳಿಸಿಕೊಳ್ಳುವ, ನೂಕಿಸಿಕೊಳ್ಳುವ ಸದವಕಾಶ ಪಡೆದುಕೊಳ್ಳುತ್ತೀರಿ!

ಲೋಕಲ್ ಟ್ರೇನಿನೊಳಗೆ ನುಗ್ಗಲು ಸಂನ್ಯಾಸಿಗಳ ಮನೋಬಲ ಇದ್ದರೆ ಸಾಕು ಅಂದಿದ್ದೆ. ಇದೇ ರೀತಿ ಟ್ರೇನಿನೊಳಗೆ ಹೋದಮೇಲೆ ಸ್ಥಿತ-ಪ್ರಜ್ಞತೆ ಬೇಕು. ದಡಬಡ ಒಳನುಗ್ಗಿದ ತಕ್ಷಣ ಕೂತೋ, ನಿಂತೋ, ವಾಲಾಡಿಕೊಂಡು ತುದಿ ಕಾಲಲ್ಲಿ ನಿಂತೋ ಒಬ್ಬೊಬ್ಬರೂ ತಪಸ್ಸಿಗೆ ಇಳಿದುಬಿಡುತ್ತಾರೆ. ಒಂಟಿ ಕಾಲಲ್ಲಿ ನಿಂತೇ ದೊಡ್ಡ ಪೇಪರನ್ನು ಮಡಿಸಿಕೊಂಡು, ಅದರ ಒಂದು ತುದಿಯಿಂದ ಪಕ್ಕದಲ್ಲಿ ನಿಂತವನ ಕಿವಿಯನ್ನು ಚುಚ್ಚಿ, ಇನ್ನೊಂದು ತುದಿಯನ್ನು ಎದುರು ನಿಂತವನ ಮೂಗಿನೊಳಗೆ ತೂರಿಸಿ, ಅಂತೂ ಇಂತೂ ಆ ಪೇಪರ್‌ನ ಹದಿನಾರು ಹಾಳೆಗಳನ್ನೂ ಮಡಿಚಿ ಹಾಕಿ ಓದುವುದೇ ಒಂದು ವಿಶೇಷ. ಆ ಗಲಾಟೆಯಲ್ಲೂ ನಿಂತು ಕೊಂಡೇ ಕ್ರಾಸ್‌ವರ್ಡ್ ಸ್ಪರ್ಧೆ ಮಾಡುವವರು ಯಾವುದೋ ಸರ್ಕಸ್‌ನಲ್ಲಿ ತಂತಿಯ ಮೇಲೆ ನಡೆಯುವ ಪ್ರವೀಣರೇ ಇರಬೇಕು. ಆ ಗಜಿಬಿಜಿಯಲ್ಲಿ ನಿಂತೇ, ಕುದುರೆಯಂತೇ ನಿದ್ದೆ ಮಾಡುವವರು, ಸಂತೆಯಲ್ಲಿ ಧ್ಯಾನ ಮಾಡುವ ಸಂನ್ಯಾಸಿಗಳಂತೆ ಸಮಾಧಿ ಸ್ಥಿತಿಗೆ ಇಳಿದಿರುತ್ತಾರೆ. ಬೊಂಬಾಯಿನಲ್ಲಿ ಪ್ರೇಮಿಗಳಿಗಂತೂ ಎಲ್ಲೂ ಏಕಾಂತವಿಲ್ಲ ಅಂದುಕೊಂಡಿದ್ದೆ. ಆದರೆ ಇಲ್ಲಿಯ ಪ್ರೇಮಿಗಳಿಗೆ ಏಕಾಂತವೇ ಬೇಕಿಲ್ಲ. ಆದರಲ್ಲೂ ಲೋಕಲ್ ಟ್ರೇನಿನಲ್ಲಿ ತಬ್ಬಿ ಕೂತು, ಆತು ನಿಂತು ಅವರು ನಡೆಸುವ ಪ್ರೇಮಾಲಾಪ, ಚೇಷ್ಟೆಗಳಿಗೆ ಕೊನೆ ಮೊದಲೇ ಇಲ್ಲ. ತಮ್ಮ ಪ್ರೇಮ ಪ್ರಪಂಚದಲ್ಲಿ ಮುಳುಗಿದ ಇವರಿಗೆ, ತಮ್ಮನ್ನು ಬೇರೆಯವರು ನೋಡುತ್ತಿದ್ದಾರೆಂಬ ಪರಿವೆಯೂ ಇಲ್ಲ, ಚಿಂತೆಯೂ ಇಲ್ಲ. ಕಣ್ಣು ಮುಚ್ಚಿ ಹಾಲು ಕುಡಿಯುವ ಬೆಕ್ಕಿನಂತೆ ಇವರು ತಮಗೆ ಬೇಕಾದ ಏಕಾಂತತೆಯನ್ನು ಕನಸ್ಸಿನಲ್ಲೇ, ಮನಸ್ಸಿನಲ್ಲೇ ಸಾಧಿಸಿರುತ್ತಾರೆ! ಇನ್ನು ಟ್ರೇನಿನೊಳಗೆ ಇಸ್ಪೀಟು ಎಲೆ ಬಡಿಯುವವರ ಗುಂಪೇ ಬೇರೆ. ನಾಲ್ಕಾರು ಜನ ಮೊದಲೇ ನುಗ್ಗಿ ಒಂದು ಮೂಲೆ ಹಿಡೀತಾರೆ. ಅಲ್ಲೇ ಬ್ರೀಫ್ ಕೇಸ್ ತೊಡೆಯ ಮೇಲಿಟ್ಟು, ಇಸ್ಪೀಟು ಶುರುಮಾಡುತ್ತಾರೆ. ಕೊನೆಯ ನಿಲ್ದಾಣ ಬಂದಾಗ ಆಟ ಮುಗಿಯದಿದ್ದರೆ, ಅಲ್ಲೇ ಪ್ಲಾಟ್‌ಫಾರ್ಮ್ ಮೇಲೇ ನಿಂತು, ಐದು ನಿಮಿಷ ಆಡಿ, ಅಂದಿನ ಸೋಲು-ಗೆಲುವಿನ ಲೆಕ್ಕ ಮಾಡಿ, ಹಣದ ಲೆಕ್ಕಾಚಾರ ಮುಗಿಸಿಯೇ ಅವರು ತಮ್ಮ ತಮ್ಮ ದಾರಿ ಹಿಡಿಯುವುದು. ಕೂರಲು ಜಾಗ ಸಿಗದಿದ್ದರೆ, ಆ ಗಜಿಬಿಜಿಯಲ್ಲೂ ನಿಂತೇ ಆಡುವ ಚಾಕಚಕ್ಯತೆ ಇದೆ. ವಿರಾರ್, ಬೋರಿವಿಲಿಯಲ್ಲಿ ಟ್ರೇನ್ ಬಂದ ಹಾಗೆಯೇ ನುಗ್ಗಿ, ಜಾಗ ಹಿಡಿದಿಟ್ಟು, ಇಸ್ಪೀಟು ಆಡುವವರಿಗೆ ಜಾಗ ಕೊಟ್ಟು, ಅವರಿಗೆ ಎಲೆ, ಪ್ಯಾಕೆಟ್, ನೀರು, ಸಿಗರೇಟ್ ಎಲ್ಲಾ ಒದಗಿಸಿ, ಚರ್ಚ್‌ಗೇಟ್‌ನಲ್ಲಿ ಅವರ ಕಿಟ್ಟೀ ಹಣ ಜೇಬಿಗಿಟ್ಟುಕೊಂಡು ದಿನಕ್ಕೆ ನೂರಾರು ರೂಪಾಯಿ ಸಂಪಾದಿಸುವವರೂ ಇದ್ದಾರೆ. ಇದಲ್ಲದೆ ಉದ್ದಕ್ಕೂ ಭಜನೆ ಹೇಳಿಕೊಂಡು ಬರುವ





ಗುಂಪೂ ಇದೆ. ಈ ವಿವಿಧ ರೀತಿಯ ಗುಂಪುಗಳೇ ಅಲ್ಲದೆ, ಗುಮ್ಮನೆ ಕೂತೋ, ನಿಂತೋ, ನಿದ್ದೆ ಹೊಡೆಯುವ ನಿಸ್ಸಾರ ಜನಗಳ ಗುಂಪೇ ದೊಡ್ಡದು ಅನಿಸುತ್ತದೆ. ಇಲ್ಲಿಯ ಅಲಿಖಿತ ಕಾನೂನಿನ ಪ್ರಕಾರ ಸಹ ಪ್ರಯಾಣಿಕರನ್ನು ಅವರವರ ಸಮಾಧಿ ಸ್ಥಿತಿಯಲ್ಲೆ ಬಿಡಬೇಕು, ಅವರೊಡನೆ ಮಾತು ಬೆಳಸಿ, ಸ್ನೇಹ ಗಿಟ್ಟಿಸುವುದು ಸಾಧ್ಯವಿಲ್ಲ.

ಇನ್ನು ಹೆಂಗಸರಿಗೆ ಮೀಸಲಾಗಿರುವ ಡಬ್ಬಗಳಲ್ಲಂತೂ ಹೆಂಗಸರ ಹವ್ಯಾಸಗಳಿಗೆಲ್ಲಾ ಅವಕಾಶ. ಸಂಜೆ ಆರು ಗಂಟೆಯ ಮೇಲೆ ಮನೆಗೆ ಮರಳುವಾಗ ಎಷ್ಟೋ ಹೆಂಗಸರು ಅಂದಿನ ಮನೆಗೆಲಸವನ್ನೂ ಟ್ರೇನಿನಲ್ಲೇ ಮಾಡಿ ಮುಗಿಸಿಬಿಡುತ್ತಾರೆ. ತರಕಾರಿ ಹೆಚ್ಚುವುದು, ಹಿಟ್ಟು ಕಲಸುವುದು, ಅಕ್ಕಿ ಆರಿಸುವುದು ಇತ್ಯಾದಿ ಕೆಲಸಗಳನ್ನೂ ಮಾಡಿದರೆ ಮನೆಯಲ್ಲಿ ಅವರಿಗೆ ಕೊಂಚ ಆರಾಮು, ಮಕ್ಕಳೊಡನೆ ಸಮಯ ಸಿಕ್ಕೀತು.

ಲೋಕಲ್ ಟ್ರೇನಿಗೂ, ಊರಿನ ಟ್ರೇನಿಗೂ ಇರುವ ಒಂದು ಮುಖ್ಯ ವ್ಯತ್ಯಾಸವೆಂದರೆ ಇದರೊಳಗೆ ಕಕ್ಕಸು ಮನೆಯಿಲ್ಲ. ಹಾಗಿದ್ದರೆ ಅರ್ಧ ಜನವೆಲ್ಲಾ ಅಲ್ಲೇ ಕೂತಿದ್ದು ತಮ್ಮ ಕ್ಲುದ್ ಬಾಧೆಯನ್ನು ತೀರಿಸಿಕೊಳ್ಳುತ್ತಿದ್ದರು. ಆದರೆ ರೇಲ್ವೇ ಹಳಿಯ ಪಕ್ಕದ ಕೊಳಚೆ ಪ್ರದೇಶಗಳ ವಿಶೇಷ ವಾಸನೆ, ಲೋಕಲ್ ಟ್ರೇನಿನೊಳಗಿಂದನೇ ಬರುತ್ತಿತ್ತು, ಅಷ್ಟೆ!

ಈ ಲೋಕಲ್ ಟ್ರೇನಿನಲ್ಲಿ ಸದಾ, ಮೂರು ಹೊತ್ತೂ ಜನಜಂಗುಳಿ. ನೂಕುನುಗ್ಗಲು. ಬೆಳಿಗ್ಗೆ ಹೊತ್ತಿಗೆ ಮುಂಚೆ ಕಾರ್ಖಾನೆಯವರು, ಹಾಲಿನವರು, ಎಂಟು ಗಂಟೆಗೆ ಅಂಗಡಿ ಮುಂಗಟ್ಟಿನವರು, ಎಂಟೂವರೆಗೆ ಖಾಸಗಿ ಉದ್ದಿಮೆಯವರು, ಒಂಬತ್ತಕ್ಕೆ ಕಾಲೇಜಿನವರು, ಒಂಬತ್ತೂವರೆಗೆ ಸರಕಾರೀ ನೌಕರರು ಹತ್ತಕ್ಕೆ ಕೋರ್ಟು ಕಚೇರಿಯವರು, ಹನ್ನೊಂದಕ್ಕೆ ಹೊರಗಿನಿಂದ ಬಂದವರು…ಹೀಗೆ ಶುರುವಾದ ನೂಕುನುಗ್ಗಲು ಒಂದೇ ರೀತಿ ಇದ್ದೇ ಇರುತ್ತದೆ. ರಾತ್ರಿ ಹನ್ನೆರಡೂವರೆಗೆ ಸಂಗೀತ ಕೇಳಿ ವಾಪಸ್ಸಾಗುವಾಗ, ರೈಲಿನಲ್ಲಿ ಒಬ್ಬನೇ ಹೇಗೆ ಹೋಗುವುದೆಂದು ಹೆದರಿದ್ದೆ. ರೈಲಿಗೆ ಬಂದು ನಿಂತರೆ ಯಥಾ ಪ್ರಕಾರ ಒಳಗೆ ನಿಲ್ಲಲೂ ಜಾಗವಿರಲಿಲ್ಲ. ಮುಂಬಯಿ ಎಂದೂ ನಿದ್ರಿಸುವದಿಲ್ಲ, ಯಾವಾಗಲೂ ಎದ್ದೇ ಇರುತ್ತದೆ. ಇದೊಂದು ನಿಶಾಚರರ ನಗರ ಅನಿಸಿತು. ಒಬ್ಬ ಅಂತೂ "ಇವತ್ತು ಮೈ ಆರಾಮವಿಲ್ಲೆಂದು ಕೆಲಸಕ್ಕೆ ಹೋಗಿರಲಿಲ್ಲ. ಬೆಳಿಗ್ಗೆಯಿಂದ ಮನೇಲೇ ಕೂತು ಕೂತು ಜಡ್ಡು ಹಿಡಿದುಬಿಟ್ಟಿತ್ತು. ಸ್ವಲ್ಪ ಕೈ ಕಾಲು ಆಡಲಿ, ತಿಂದ ಊಟವಾದ್ರೂ ಅರಗಲಿ, ಸ್ವಲ್ಪ ಬೇಜಾರೂ ಕಳೆಯಲಿ ಅಂತ ರೈಲಿನಲ್ಲಿ ಒಂದು ಸುತ್ತು ಹೋಗಿ ಬರ್‍ತಿದೀನಿ" ಅಂದ—ರಾತ್ರಿ ಹನ್ನೆರಡು ಗಂಟೇಲಿ! ರೈಲಿನಲ್ಲಿ ಒಂದು ದಿನ ಓಡಾಡಿ, ನೂಕುನುಗ್ಗಲಲ್ಲಿ ತುಳಿಸಿಕೊಳ್ಳದಿದ್ದರೆ, ಅಂದು ಏನೋ ತಪ್ಪಿದಂತೆ, ಮನಸ್ಸಿಗೆ ಏನೋ ಕೊರೆ, ಜೀವಕ್ಕೆಲ್ಲಾ ತಳಮಳ, ಏನೋ ಬಿಕೋ ಅನಿಸುವಿಕೆ, ಈ ಮುಂಬಯಿ ಮಂದಿಗೆ!! ಅದಕ್ಕೇ ಹೇಳಿದ್ದು ಲೋಕಲ್ ಟ್ರೇನ್ ಇಲ್ಲಿಯ ಜೀವನಾಡಿ ಅಂತ!! ❁

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಸುಸಂಬದ್ಧ
(ಅ) ಒಂದಕ್ಕೊಂದು ಹೊಂದಿಕೆಯಾದ (ಆ) ಸಿಕ್ಕುಬಿಟ್ಟ (ಇ) ಕೋಳ ತೊಡಿಸಲ್ಪಟ್ಟ (ಈ) ಸಾಧ್ಯವಾಗುವ

೨. ಪಡ್ಡೆ
(ಅ) ಬಂಗಾರದ ಒಡವೆ (ಆ) ಆತಂಕ (ಇ) ಉಡಾಳ (ಈ) ತಾಳ

೩. ವಲ್ಲರಿ
(ಅ) ಹಾಲು ಮಾರುವವಳು (ಆ) ಬಳ್ಳಿ (ಇ) ಒಂದು ಆಯುಧ (ಈ) ಕೆರೆ

೪. ಸಾದಿಲ್ವಾರು
(ಅ) ಸಂಭಾವಿತ ಮನುಷ್ಯ (ಆ) ಒಂದೊಂದಾಗಿ (ಇ) ಸಾರಥಿ ಕೆಲಸ (ಈ) ಚಿಲ್ಲರೆ ಖರ್ಚು

೫. ಸ್ಫೂರ್ತಿ
(ಅ) ಮುಗಿದದ್ದು (ಆ) ತುಂಬಿದ್ದು (ಇ) ಉಬ್ಬಿದ್ದು (ಈ) ಒಮ್ಮಿಂದೊಮ್ಮೆ ಮನಸ್ಸಿಗೆ ಹೊಳೆಯುವಿಕೆ

೬. ಪಿಶುನ
(ಅ) ಕಂದು ಬಣ್ಣದ (ಆ) ಚಾಡಿಪುರುಕ (ಇ) ರಕ್ತಮಯ (ಈ) ಗುಟ್ಟು

೭. ಜೊಮ್ಮಟಿ
(ಅ) ಮೃದಂಗ (ಆ) ಗಲಾಟೆ (ಇ) ಹಸುಳೆ (ಈ) ಭ್ರಮೆ

೮. ಶೋಷಣೆ
(ಅ) ಒಣಗಿಸುವುದು (ಆ) ಜಾಲಾಡಿಸುವಿಕೆ (ಇ) ಚೀಪುವಿಕೆ (ಈ) ಹೊಟ್ಟೆಹೊರೆಯುವುದು

೯. ಹೆಕ್ಕತ್ತು
(ಅ) ಕೊರಳಿನ ಹಿಂಭಾಗ (ಆ) ಗಾಯದ ಸಿಪ್ಪೆ (ಇ) ಹಿಡಿದೆತ್ತು (ಈ) ಉಪಾಯ

೧೦. ವಿದ್ರೂಪ
(ಅ) ಹವಳ (ಆ) ಮರ (ಇ) ಮಿಂಚು (ಈ) ವಿಕಾರ ರೂಪ

೧೧. ಬಂಡಾಟ
(ಅ) ತುಂಬಿಯ ಹಾರಾಟ (ಆ) ಪೇಚಾಟ (ಇ) ಕಟ್ಟಿಹಾಕುವಿಕೆ (ಈ) ದುಷ್ಕರ್ಮ

೧೨. ಚಿಬ್ಬಲು
(ಅ) ಮೈಯಲ್ಲಿನ ಕಲೆ (ಆ) ಸಿಂಬಿ (ಇ) ಬಿದಿರಿನ ಮುಚ್ಚಳ (ಈ) ಬೇಲಿ



೧. **ಸುಸಂಬದ್ಧ** (ಅ) ಒಂದಕ್ಕೊಂದು ಹೊಂದಿಕೆಯಾದ, ಸರಿಯಾಗಿ ಹೊಂದಿಸಿದ. ಉದಾ:— ಸುಸಂಬದ್ಧವಾದ ತರ್ಕ [ಸಂ. ಸು=ಚೆನ್ನಾಗಿ+ಸಂ=ಒಟ್ಟುಗೂಡಿಸಿ + ಬದ್ಧ=ಕಟ್ಟಿದ]

೨. **ಪಡ್ಡೆ** (ಇ) ಪ್ರಾಯ, ಯೌವನ; ಪ್ರಾಯಕ್ಕೆ ಬಂದ ಹೆಣ್ಣು ಪ್ರಾಣಿ; ಯೌವನದ ಸೊಕ್ಕಿನ ಉಡಾಳ. ಉದಾ:— ಪಡ್ಡೆ ಹುಡುಗ [ದೇಶ್ಯ]

೩. **ವಲ್ಲರಿ** (ಅ) ಬಳ್ಳಿ, ಲತೆ, ಪೊದೆ; ಚಿಗುರು; ಗೊಂಚಲು. ಉದಾ:– ಕಥಾವಲ್ಲರಿ. [ಸಂ.]

೪. **ಸಾದಿಲ್ವಾರು** (ಈ) ಚಿಲ್ಲರೆ ಖರ್ಚು, ಚಿಕ್ಕಪುಟ್ಟ ವೆಚ್ಚಗಳು, ಖಚಿತವಾಗಿ ವರ್ಗೀಕರಿಸಲಾರದ ವೆಚ್ಚಗಳು [ಮರಾಠಿ]

೫. **ಸ್ಫೂರ್ತಿ** (ಈ) ಒಮ್ಮಿಂದೊಮ್ಮೆ ಮನಸ್ಸಿಗೆ ಹೊಳೆಯುವಿಕೆ; ಪ್ರೇರಣೆ; ಉತ್ತೇಜನ, ಉತ್ಸಾಹ. ಉದಾ:— ಸ್ಫೂರ್ತಿಯಿಲ್ಲದೆ ಕವಿತೆ ಇಲ್ಲ. [ಸಂ. ಸ್ಫುರ=ಅಲುಗು, ಹೊಳೆ ಧಾತುವಿನಿಂದ]

೬. **ಪಿಶುನ** (ಅ) ಚಾಡಿಪುರುಕ; ನಂಬಿದವರಿಗೆ ದ್ರೋಹಮಾಡುವವ; ಹಿಂದಿನಿಂದ ಆಡಿಕೊಳ್ಳುವವ; ದುಷ್ಟ. ಉದಾ:— ಜಗಳ ಗಂಟುಹಾಕುವ ಪಿಶುನರು. [ಸಂ.]

೭. **ಬೊಮ್ಮಟೆ** (ಇ) ಹಸುಳೆ, ಸಣ್ಣ ಮಗು; ಎಳೆಯುದು; ಕೋಮಲವಾದದ್ದು. ಉದಾ:— ಇದು ಬರೀ ಬೊಮ್ಮಟೆಕಾಯಿ [ತೆಲುಗು ಬೊಮ್ಮ=ಬೊಂಬೆ]

೮. **ಶೋಷಣೆ** (ಅ) ಒಣಗಿಸುವುದು, ಬತ್ತಿಸುವುದು; ಹೀರುವುದು— (ಆದ್ದರಿಂದ) (ಇನ್ನೊಬ್ಬರನ್ನು) ಸ್ವಾರ್ಥಕ್ಕೆ ಬಳಸಿಕೊಳ್ಳುವುದು. ಉದಾ:— ಶ್ರಮಜೀವಿಗಳ ಶೋಷಣೆ. [ಸಂ. ಶುಷ್=ಒಣಗು]

೯. **ಹೆಕ್ಕತ್ತು** (ಅ) ಕೊರಳಿನ ಹಿಂಭಾಗ. ಉದಾ:— ಹೆಕ್ಕತ್ತಿಗೆ ಬಿದ್ದ ಪೆಟ್ಟಿಗೆ ತಲೆ ತಿರುಗಿತು. [ದೇಶ್ಯ ಹಿಂ+ಕತ್ತು]

೧೦. **ವಿದ್ರೂಪ** (ಈ) ವಿಕಾರರೂಪ, ಭಯಂಕರ ರೂಪ. ಉದಾ:— ವಿದ್ರೂಪವಾದ ವೇಷ. [ಸಂ. 'ವಿರೂಪ'ದ ಬಂಗಾಲಿ ಅಪಭ್ರಂಶ]

೧೧. **ಬಂಡಾಟ** (ಅ) ಪೇಚಾಟ, ತೊಂದರೆ, ಅವಮಾನಕರ ಪ್ರಸಂಗ. ಉದಾ:— ದೊಡ್ಡವರ ನಂಟುತನ ಬಡವರಿಗೆ ಬಂಡಾಟ [ಸಂ. ಭಂಡ?]

೧೨. **ಚಿಬ್ಬಲು** (ಇ) ಬಿದಿರಿನ ಮುಚ್ಚಳ, ಬಿದಿರುತಟ್ಟೆ. [ದೇಶ್ಯ. ತೆಲುಗು ಸಿಬ್ಬಿ=ಮುಚ್ಚು]



## ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | |
|---|---|---|
| **೬–೮ ಸರಿಯಿದ್ದರೆ** | ... | **ಸಾಧಾರಣ** |
| **೯–೧೦ ,,** | ... | **ಉತ್ತಮ** |
| **೧೧–೧೨ ,,** | ... | **ಅತ್ಯುತ್ತಮ** |



# ಶಿಷ್ಯನ ಪರೀಕ್ಷೆ

ಮೂಲ : **ವಿನೋದ ಭಟ್**
ಅನುವಾದ : **ಡಿ. ಎನ್. ಶ್ರೀನಾಥ**

ಆಶ್ರಮ ತ್ಯಜಿಸಿ ಹೋಗುತ್ತಿದ್ದ ತನ್ನ ಪ್ರಿಯ ಶಿಷ್ಯನನ್ನು ಭಗವಾನ್ ಬುದ್ಧ ಪ್ರಶ್ನಿಸಿದ.

"ವತ್ಸ.... ಯಾವ ಕಡೆಗೆ ಪ್ರಯಾಣ?"

"ಪ್ರಭು, ನಾನೊಂದು ವಿಶ್ವವಿದ್ಯಾನಿಲಯದ ಕುಲಪತಿ ಪದವಿಯನ್ನಲಂಕರಿಸಿ, ನನ್ನ ಸೇವೆಗೈಯಲು ಹೋಗುತ್ತಿರುವೆ..." ಶಿಷ್ಯ ತಲೆಬಾಗಿ ಉತ್ತರಿಸಿದ.

"ಆದರೆ ನೀನ್ಯಾವ ನಗರಕ್ಕೆ ಪ್ರಯಾಣಿಸುತ್ತಿದ್ದೀಯ ಎಂಬುದನ್ನು ಹೇಳಲೇ ಇಲ್ಲ."

"ಭಗವಾನ್. ನಿನ್ನೆ ರಾತ್ರಿ ನಾನು ನಿಮಗೆ ನೇಮಕಾತಿ ಪತ್ರ ತೋರಿಸಿದ್ದೆ ಸಾಕು. ನಾನು ನಗರದೆಡೆಗೆ ಹೋಗಲು ಆಶೀರ್ವದಿಸಿ."

"ವತ್ಸ, ನನ್ನ ಆಶೀರ್ವಾದ ಆ ನಗರದೆಡೆಗೆ ಹೋಗಲು ಮಾತ್ರ ಸಹಕಾರಿಯಾಗುತ್ತೆ. ಆದರೆ ನೀನ್ಯಾವ ಪದವಿಗೋಸ್ಕರ ಹೋಗುತ್ತಿದ್ದೀಯೋ ಅದನ್ನು ಸರಿಯಾಗಿ ನಡೆಯಿಸಿಕೊಂಡು ಹೋಗಲು ನಿನ್ನಿಂದ ಸಾಧ್ಯವೇ ಎಂಬುದರ ಬಗ್ಗೆ ನಾನು ಚಿಂತಿತನಾಗಿದ್ದೇನೆ."

"ದೇವ, ನೀವು ನಮ್ಮಂತಹವರಿಗೆ ಆಶಾದೀಪದಂತೆ. ಇಂತಹ ಮಾತನಾಡಿ ನೀವೇನು ಹೇಳಲು ಬಯಸುತ್ತಿದ್ದೀರಿ?"

"ಹೇ ವತ್ಸ, ನೀನ್ಯಾವ ವಿದ್ಯಾರ್ಥಿಗಳ ನಡುವೆ ಹೋಗುತ್ತಿದ್ದೀಯೋ ಆ ವಿದ್ಯಾರ್ಥಿಗಳೆಲ್ಲರೂ 'ಹೊಸ ವ್ಯಾಖ್ಯೆ'ಯಲ್ಲಿ ಬರುವರು. ಹೊಸ ವ್ಯಾಖ್ಯೆಯಂತೆ ವಿದ್ಯಾರ್ಥಿಯ ಅರ್ಥ 'ವಿದ್ಯೆಯ ಅರ್ಥಿ' ಅಂದರೆ 'ವಿದ್ಯೆಯ ಚಟ್ಟ ಹೊರುವವ' ಎಂದಾಗುತ್ತದೆ. ಈ ವಿದ್ಯಾರ್ಥಿಗಳಿಗೆ 'ಕುಲಪತಿ' ಎಂಬ ಪ್ರಾಣಿಯೆಂದರೆ ಅಲರ್ಜಿ. ಹೀಗಾಗಿ ನಿನ್ನ ಬಗ್ಗೆ ಅವರು ಕಠೋರರಾಗುತ್ತಾರೆ. ನಿನ್ನನ್ನು ಗೇಲಿ ಮಾಡುತ್ತಾರೆ." ಬುದ್ಧ ವಿದ್ಯಾರ್ಥಿಗಳ ಮನಸ್ಸಿನ ವಿಷಯವನ್ನು ಶಿಷ್ಯನ ಮುಂದಿಡಲು ಪ್ರಯತ್ನಿಸಿದ

"ಪ್ರಭು, ಒಂದು ವೇಳೆ ಅವರು ನನ್ನನ್ನು ಗೇಲಿ ಮಾಡಿದರೆ ನಾನವರಿಗೆ ಒಳ್ಳೆಯ ಮಾತುಗಳನ್ನೇ ಆಡುವೆ. ಏಕೆಂದರೆ ಕಡೇ ಪಕ್ಷ ಅವರು ನನ್ನೆದುರು ಸಂಪು ಹೂಡಲಿಲ್ಲವಲ್ಲ ಎಂದು..."

"ನಿನ್ನೆದುರು ಸಂಪು ಹೂಡಿದರು ಅಂತಲೇ ಇಟ್ಟುಕೋ, ಆಗ?"

"ಆಗಲೂ ಗುರುದೇವ ಅವರು ಒಳ್ಳೆಯವರೇ. ಸದ್ಯ ಅವರು ನನ್ನೆದುರು ಉಪವಾಸ ಮಾಡಲಿಲ್ಲವಲ್ಲ."

"ನಿನ್ನೆದುರು ಉಪವಾಸಕ್ಕಿಳಿದರೂ ಅಂತಲೇ ಇಟ್ಟುಕೋ, ಆಗ?"

"ಆದರೂ ಗುರುದೇವ, ಅವರನ್ನು ಉತ್ತಮರೆಂದೇ ಹೇಳುತ್ತೇನೆ. ಸದ್ಯ ನನ್ನನ್ನು ತೆಗೆದು

ಹಾಕಲಂತೂ ಪ್ರಯತ್ನಿಸಲಿಲ್ಲವಲ್ಲ"

"ನಿನ್ನನ್ನು ಪದವಿಯಿಂದ ತೆಗೆದು ಹಾಕಲು ಪ್ರಯತ್ನಿಸಿದರೆ, ಆಗ?"

"ಆಗಲೂ ತಾತಾ ನಾನು ಅವರನ್ನು ಸಾಧುಗಳೆಂದೇ ತಿಳಿಯುವೆ, ಸದ್ಯ ಅವರು ನನ್ನ ರಾಜೀನಾಮೆಗೆ ಒತ್ತಾಯಿಸಲಿಲ್ಲವಲ್ಲ."

"ಮೂರ್ಖ; ರಾಜೀನಾಮೆ ಕೊಡಲು ನಿನ್ನ ಒತ್ತಾಯಿಸುತ್ತಾರೆ, ಅವರಿಗೆ ಯಾರು ಅಪ್ರಿಯರೋ, ಅಂತಹವರನ್ನು ತೆಗೆಯುವುದು ತಮ್ಮ ಜನ್ಮಸಿದ್ಧ ಹಕ್ಕೆಂದು ಅವರು ಭಾವಿಸುತ್ತಾರೆ."

"ವಾಹ್, ಆಗಂತೂ ವಿದ್ಯಾರ್ಥಿಗಳನ್ನು ಹೊಗಳಲೇಬೇಕಾಗುತ್ತೆ. ಶಿಕ್ಷಣದಲ್ಲಿದ್ದು ಜನಾಭಿಪ್ರಾಯಕ್ಕೆ ಮನ್ನಿಸುತ್ತಿದ್ದಾರಲ್ಲ ಅಂತ. ಮತ್ತೆ ಕಡೇ ಪಕ್ಷ ನನ್ನ ಮೇಲೆ ಅವರು ಕಲ್ಲುಗಳನ್ನು ಬೀಸಲಿಲ್ಲವೆಂದು ನಾನು ಖುಷಿಪಡುವೆ."

"ವತ್ಸ, ಅವರು ಕಲ್ಲುಗಳನ್ನು ಖಂಡಿತಾ ಹೊಡೀತಾರೆ. ಆಕ್ರೋಶ, ವಿದ್ಯಾರ್ಥಿಗಳ ವಿಶಿಷ್ಟ ಗುಣ. ಕಲ್ಲು ಎಂಬ ಆಯುಧವನ್ನು ಅವರು ಚೆನ್ನಾಗಿ ಉಪಯೋಗಿಸಬಲ್ಲರು"

"ಆಗಲೂ ಅವರನ್ನು ಒಳ್ಳೆಯವರೆಂದೇ ತಿಳಿಯುವೆ, ಕಡೇ ಪಕ್ಷ ಅವರು ನನ್ನ ತಲೆ ಒಡೆಯಲಿಲ್ಲ."

"ಒಂದು ಮಾತನ್ನು ನೆನಪಿನಲ್ಲಿಟ್ಟುಕೋ ವತ್ಸ, ಅವರು ಒಳ್ಳೇ ಗುರಿಕಾರರು. ನಿನ್ನ ತಲೆ ಖಂಡಿತಾ ಒಡೆಯುತ್ತಾರೆ"

"ಆಗಲೂ ಅವರಿಗೆ ನಾನು ಕೆಡುಕು ಬಯಸಲ್ಲ, ಕಡೇ ಪಕ್ಷ ಅವರು ನನ್ನನ್ನು ಮಿದುಳಿಲ್ಲದವನನ್ನಾಗಿ ಮಾಡಲಿಲ್ಲವಲ್ಲ. ಅಂತ"

"ಕೋಪಿಷ್ಟರ ಬಗ್ಗೆ ಏನು ಹೇಳೋದು! ಅವರು ನಿನ್ನನ್ನು ಮಿದುಳಿಲ್ಲದವನನ್ನಾಗಿಯೇ ಮಾಡಿದರು ಅಂತಿಟ್ಟುಕೋ, ಆಗ?"

"ಆಗ ಗುರುದೇವ. ಆ ಕೃಪಾಳು ವಿದ್ಯಾರ್ಥಿಗಳ ಚರಣಾಮೃತವನ್ನು ನನ್ನ ತಲೆ ಮೇಲೆ ಹಾಕಿಕೊಳ್ಳುವೆ."

"ಯಾಕೆ?" ಬುದ್ಧನಿಗೆ ತುಂಬಾ ಆಶ್ಚರ್ಯವಾಯಿತು.

"ಯಾಕೆಂದರೆ, ಆ ವಿದ್ಯಾರ್ಥಿಗಳಿಗೆ ಮೆದುಳಿಲ್ಲದ ಉಪಕುಲಪತಿಯೇ ಆಗಬೇಕು. ಈ ಒಂದಿನ ಉಪಕುಲಪತಿಗಳನ್ನು ಅವರಿಗೆ ಮೆದುಳಿದೆಯಲ್ಲ ಅಂತಲೇ ತೆಗೆದುಹಾಕಿದ್ದು."

ಶಿಷ್ಯನ ಉತ್ತರ ಕೇಳಿ ಭಗವಾನ್ ಬುದ್ಧ ತುಂಬಾ ಪ್ರಸನ್ನಗೊಂಡ. ಅವನ ಕಣ್ಣುಗಳಿಂದ ಆನಂದ ಬಾಷ್ಪ ಹರಿಯಿತು.

"ವತ್ಸ, ಇನ್ನು ಹೊರಡು, ಖಂಡಿತವಾಗಿಯೂ ನೀನು ನನ್ನ ಹೆಸರನ್ನು ಬೆಳಗಿಸುತ್ತೀಯಾ" ಎಂದ ಬುದ್ಧ. ✡

ಸಂಗ್ರಹ: ಎಚ್. ಎನ್. ಮೂರ್ತಿ



ರಾತ್ರಿ ಪತ್ತು ಗಂಟೆಗೆ ಒಬ್ಬ ಹೆಂಗಸು ಚಿತ್ರಮಂದಿರದ ಬಾಕ್ಸ್ ಆಫೀಸಿಗೆ ಹೋಗಿ ಕ್ಯಾಶಿಯರ್‌ನನ್ನು ಕೇಳಿದಳು "ನೀಲಿ ಟೊಪ್ಪಿಗೆ, ಕೆಂಪು ಸ್ವೆಟರ ಹಾಕಿಕೊಂಡಿರುವ ಚಿಕ್ಕ ಹುಡುಗನನ್ನು ನೋಡಿದ್ದೀರಾ?"

"ಹೌದು. ಅವನು ಮಧ್ಯಾಹ್ನ ಎರಡು ಗಂಟೆಗೆ ಬಂದಿದ್ದ. ಆದರೆ ಅವನು ಇನ್ನೂ ಇಲ್ಲಿಂದ ಹೋಗಿರಲಿಕ್ಕಿಲ್ಲವೆನಿಸುತ್ತದೆ," ಕ್ಯಾಶಿಯರ್ ಉತ್ತರಿಸಿದ.

"ಹಾಗಾದರೆ ಅವನೇ ನನ್ನ ಮಗ," ಎನ್ನುತ್ತ ಆಕೆ ಟಿಫಿನ್ ಬಾಕ್ಸೊಂದನ್ನು ಕೊಟ್ಟು "ಇದನ್ನು ದಯುವಿಟ್ಟು ಅವನಿಗೆ ತಲಪಿಸುತ್ತೀರಾ? ಇದರಲ್ಲಿ ಅವನ ರಾತ್ರಿಯೂಟವಿದೆ" ಎಂದಳು.

— ಡೈ ಜೈಟ್

**ಅವು ನಮ್ಮಲ್ಲಿ**
**ಹೊಸ ನಂಬಿಕೆ ಹುಟ್ಟಿಸಿವೆ**

# ಟಾಟಾ ಟ್ರಸ್ಟುಗಳ ಅನುಪಮ ಸೇವೆ

**ವಸಂತ ಕಲಕೋಟಿ**

ಶಿಕ್ಷಣ, ಸಮಾಜ, ವಿಜ್ಞಾನ, ಆರೋಗ್ಯ ಕ್ಷೇತ್ರಗಳಿಗೆ ಟಾಟಾ ಉದ್ದಿಮೆಗಳ ಸಮೂಹದ ಟ್ರಸ್ಟುಗಳು ಕಳೆದ ಒಂಬತ್ತು ದಶಕಗಳಲ್ಲಿ ಸಲ್ಲಿಸಿದ ಸಲ್ಲಿಸುತ್ತಿರುವ ಸೇವೆ ನೀಡಿದ ಕೊಡುಗೆ ಮಹತ್ವ ಪೂರ್ಣವಾದದ್ದು.



ಸರ್ ದೋರಾಬಜಿ ಟಾಟಾ

ಜೆ. ಎನ್. ಟಾಟಾ ಎಂಡೋಮೆಂಟ್ ಸ್ಕೀಮ್, ಈ ಉದ್ದಿಮೆ ಸಮೂಹದಿಂದ ೧೮೯೨ ರಲ್ಲಿ ಆರಂಭವಾದ ಪ್ರಪ್ರಥಮ ಟ್ರಸ್ಟು. ಇಂದು ಒಂದು ಕೋಟಿ ರೂಪಾಯಿಗಳ ಬೆಲೆಯ ಆಸ್ತಿ ಇರುವ ಈ ಟ್ರಸ್ಟು ಒಂದು ಕೋಟಿಗೂ ಮಿಕ್ಕಿ ಹಣವನ್ನು ಈ ವರೆಗೆ ಸೇವಾ ಕಾರ್ಯದಲ್ಲಿ ವೆಚ್ಚ ಮಾಡಿದೆ. ಭಾರತೀಯ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದೇಶಗಳಲ್ಲಿ ಉಚ್ಚ ಶಿಕ್ಷಣ ದೊರಕಿಸಲು ಈ ಟ್ರಸ್ಟು ಶ್ರಮಿಸುತ್ತಿದೆ.

೧೯೧೮ರಲ್ಲಿ ಸರ್ ರತನ್ ಟಾಟಾ ಟ್ರಸ್ಟು ಆರಂಭಗೊಂಡು ಈ ವರೆಗೆ ಸುಮಾರು ಆರು ಕೋಟಿ ರೂಪಾಯಿಗಳನ್ನು ಸಮಾಜ ಕಾರ್ಯಗಳಿಗಾಗಿ ಖರ್ಚು ಮಾಡಿದೆ. ಈ ಟ್ರಸ್ಟಿನ ಇಂದಿನ ಆಸ್ತಿಯ ಮೊತ್ತ ಸುಮಾರು ನಾಲ್ಕು ಕೋಟಿ ರೂಪಾಯಿಗಳು.

೧೯೩೨ರಲ್ಲಿ ಆರಂಭಗೊಂಡ ಸರ್ ದೊರಾಬ್ ಟಾಟಾ ಟ್ರಸ್ಟು, ಟಾಟಾ ಸಮೂಹದ ಟ್ರಸ್ಟುಗಳಲ್ಲಿಯೇ ಹಿರಿಯದು. ಅದರ ಕಾರ್ಯವೂ ವಿಶಿಷ್ಟವೆನಿಸಿದೆ. ಅದರ ಆಸ್ತಿಯ ಮೊತ್ತ ನಾಲ್ಕು ಕೋಟಿಯಾಗಿದ್ದರೂ ಈ ವರೆಗೆ ಸುಮಾರು ೧೨ ಕೋಟಿ ರೂಪಾಯಿಗಳನ್ನು ರಾಷ್ಟ್ರದ ಮಹತ್ವಪೂರ್ಣ ಸೇವಾಕಾರ್ಯಗಳಿಗೆ ಅದು ವಿನಿಯೋಗಿಸಿದೆ.

ಲೇಡಿ ಮೆಮೋರಿಯಲ್ ಟ್ರಸ್ಟ್ ಹಾಗೂ ಲೇಡಿ ಮೆಹರಬಾಯಿ ಡಿ. ಟಾಟಾ ಎಜ್ಯುಕೇಶನ್ ಟ್ರಸ್ಟ್ ೧೯೩೨ರಲ್ಲಿ ಆರಂಭವಾದವು. ಇವುಗಳ ಇಂದಿನ ಆಸ್ತಿಯ ಮೊತ್ತ ಒಂದು ಕೋಟಿಯಾಗಬಹುದು. ರಕ್ತಕ್ಕೆ ಸಂಬಂಧಿಸಿದ ಬೇನೆಗಳ ಸಂಶೋಧನೆಗಾಗಿ ಈ ಟ್ರಸ್ಟುಗಳು ಸಹಾಯ ಮಾಡುತ್ತಿವೆ. ಈ ಪೈಕಿ ಶೇಕಡಾ ೮೦ರಷ್ಟು ಅಂತಾರಾಷ್ಟ್ರೀಯ ಸಂಶೋಧನೆಗಳಿಗೆ ಪುರಸ್ಕಾರ ನೀಡುವುದಕ್ಕಾಗಿಯೂ ಉಳಿದ ಶೇಕಡಾ ೨೦ರಷ್ಟು ಭಾರತದಲ್ಲಿಯೂ ವೆಚ್ಚವಾಗುತ್ತಿದೆ. ಲೇಡಿ

ಮೆಹರಬಾಯಿ ದೊರಾಬಜಿ ಟಾಟಾ ಎಜ್ಯುಕೇಶನ್ ಟ್ರಸ್ಟು ಭಾರತೀಯ ಮಹಿಳೆಯರಿಗೆ ವಿದೇಶಗಳಲ್ಲಿ ವಿಜ್ಞಾನ ಅಧ್ಯಯನ ಮಾಡಲು ಶಿಷ್ಯವೇತನ ನೀಡುತ್ತಿದೆ.

೧೯೪೪ರಲ್ಲಿ ಆರಂಭಗೊಂಡ ಜೆ. ಆರ್. ಡಿ. ಟಾಟಾ ಟ್ರಸ್ಟು ಈ ವರೆಗೆ ಇಪ್ಪತ್ತು ಲಕ್ಷ ರೂಪಾಯಿಗಳನ್ನು ಸೇವಾಕಾರ್ಯಗಳಿಗೆ ವಿನಿಯೋಗಿಸಿದೆ. ಈ ಟ್ರಸ್ಟಿನ ಆಸ್ತಿಯಮೊತ್ತ ೩೦ ಲಕ್ಷ ರೂಪಾಯಿಗಳು.

೧೯೫೮ರಲ್ಲಿ ಆರಂಭಿಸಲಾದ ಎಂ. ಕೆ. ಟಾಟಾ ಟ್ರಸ್ಟು ಹಾಗೂ ೧೯೭೪ರಲ್ಲಿ ಆರಂಭಗೊಂಡ ಜಮಶೇಡಜಿ ಟಾಟಾ ಟ್ರಸ್ಟು ಮತ್ತು ನವಜೀಭಾಯಿ ರತನ ಟಾಟಾ ಟ್ರಸ್ಟುಗಳು ಸಹ ಸಮಾಜ ಸೇವಾ ಕಾರ್ಯಗಳಿಗೆ ಸಾಕಷ್ಟು ಸಹಾಯ ನೀಡಿವೆ.

ದೇಶದ ಸೇವೆಯಲ್ಲಿ ಟಾಟಾ ಟ್ರಸ್ಟುಗಳು ಈ ವರೆಗೆ ಇಪ್ಪತ್ತು ಕೋಟಿಗೂ ಮಿಕ್ಕ ಧನ ಸಹಾಯ ನೀಡಿದ್ದು ರಾಷ್ಟ್ರೀಯ ಸೇವೆಯಲ್ಲಿ ಅದು ಮುಂದಾಗಿದೆ. ಬಡವರ ಸೇವೆಗೆ ಮತ್ತು ಸಿರಿವಂತರು ಹಣವನ್ನು, ಆಸ್ತಿಯನ್ನು ಹೇಗೆ ವಿನಿಯೋಗಿಸಬಹುದೆಂಬುದನ್ನು ತೋರಿಸಿಕೊಟ್ಟ ಟಾಟಾ ಕುಟುಂಬವು ಇಂದು ಎಲ್ಲರ ಲಕ್ಷ್ಯವನ್ನು ಸೆಳೆದ ಬೃಹತ್ ಸಂಸ್ಥೆ.



ಉದ್ಯಮಿ ಜೆ. ಆರ್. ಡಿ. ಟಾಟಾ

ಟಾಟಾ ಸಮೂಹದ ಟ್ರಸ್ಟುಗಳಲ್ಲಿಯೇ ಅತ್ಯಂತ ದೊಡ್ಡ ಹಾಗೂ ವಿಶಿಷ್ಟ ಟ್ರಸ್ಟು ಎನಿಸಿದ ಸರ್ ದೊರಾಬ್ ಟಾಟಾ ಟ್ರಸ್ಟು ಈ ವರೆಗೆ ಸಮಾಜದ ವಿಧಾಯಕ ಕಾರ್ಯಗಳಲ್ಲಿ ಸುಮಾರು ೧೨ ಕೋಟಿ ರೂಪಾಯಿಗಳಿಗೂ ಮಿಕ್ಕಿ ವಿನಿಯೋಗಿಸಿದೆ. ೧೯೩೨ರಲ್ಲಿ ಸರ್ ದೊರಾಬ್ ಟಾಟಾ ಆರಂಭಿಸಿದ ಈ ಟ್ರಸ್ಟಿನ ಆಸ್ತಿ ಆಗ ಒಂದು ಕೋಟಿ ರೂಪಾಯಿ ಇದ್ದರೆ ಇಂದು ಅದರ ಬೆಲೆ ೨೫ ಕೋಟಿಗಿಂತಲೂ ಹೆಚ್ಚಿದೆ. ಟಾಟಾ ಉದ್ದಿಮೆಗಳ ಮಾಲಿಕತ್ವ ವಹಿಸಿದ ಟಾಟಾ ಆ್ಯಂಡ್ ಸನ್ಸ್‌ನಲ್ಲಿ ೧/೩ ಪಾಲು ಹಾಗೂ ಇಂಡಿಯನ್ ಹೋಟೆಲ್ಸ್ ಕಂಪನಿ ಲಿಮಿಟೆಡ್ (ತಾಜ ಮಹಲ್ ಹೋಟೆಲ್ ಗ್ರುಪ್) ಸಂಸ್ಥೆಯಲ್ಲಿ ಈ ಟ್ರಸ್ಟು ೧/೪ ಪಾಲು ಹೊಂದಿದೆ. ಶೇರುಗಳು, ಚಿನ್ನದ ಆಭರಣಗಳು, ವಜ್ರಗಳು, ಭೂ ನಿವೇಶನ, ಕಟ್ಟಡಗಳು ಹೀಗೆ ಹಲವು ರೀತಿಗಳಲ್ಲಿ ಈ ಟ್ರಸ್ಟು ಆಸ್ತಿಯನ್ನು ಪಡೆದಿರುವುದು ವಿಶೇಷ. ಈ ಟ್ರಸ್ಟನ್ನು ಆರಂಭಿಸಿದವರು ಸರ್ ದೊರಾಬ್ ಟಾಟಾ. ಭಾರತದಲ್ಲಿ ಪ್ರಪ್ರಥಮ ಉಕ್ಕಿನ ಕಾರಖಾನೆಯನ್ನು ಜೆಮಶೇಟಪುರದಲ್ಲಿ ಸ್ಥಾಪಿಸಿದ ಸರ್ ಜಮಶೇಟಜೀ ಟಾಟಾ ಅವರ ಪುತ್ರನಾಗಿ ೨೭-೮-೧೮೫೯ ರಂದು ಮುಂಬಯಿಯಲ್ಲಿ ಹುಟ್ಟಿದ ದೊರಾಬ್, ತಮ್ಮ ಕುಟುಂಬದ ಶಾಲೆಯಲ್ಲಿಯೇ ವಿದ್ಯಾಭ್ಯಾಸ ಆರಂಭಿಸಿ ೧೮೮೨ರಲ್ಲಿ ಮುಂಬಯಿಯ ಸೇಂಟ್ ಝೇವಿಯರ್ಸ್ ಕಾಲೇಜಿನಿಂದ ಬಿ. ಎ. ಪರೀಕ್ಷೆಯನ್ನು (ಮುಂಬಯಿ ವಿಶ್ವವಿದ್ಯಾಲಯ) ಪಾಸಾದರು. ಕ್ರಿಕೆಟ್, ಫುಟ್‌ಬಾಲ್, ಟೆನ್ನಿಸ್ ಆಟಗಳಲ್ಲಿ ವಿಶೇಷ ಆಸಕ್ತಿ ಹಾಗೂ ಪರಿಣತಿ ಪಡೆದ ಇವರು ವಿಲ್ಲಿಂಗಡನ್ ಸ್ಪೋರ್ಟ್ಸ್ ಕ್ಲಬ್, ಪಾರಸೀ

ಜಿಮಖಾನಾ, ಮುಂಬಯಿ ಪ್ರೆಸಿಡೆನ್ಸಿ ಒಲಂಪಿಕ್ ಗೇಮ್ಸ್ ಅಸೋಸಿಯೇಶನ್ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. ವಾಯ್. ಎಂ. ಸಿ. ಎ. ಸಂಸ್ಥೆಯ ನಿರ್ದೇಶಕರಾಗಿ, ಇಂಡಿಯನ್ ಒಲಂಪಿಕ್ ಕೌನ್ಸಿಲ್‌ನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಆ್ಯಂಟ್‌ವರ್ಪ್ (೧೯೨೦), ಪ್ಯಾರಿಸ್ (೧೯೨೪), ಆಮ್‌ಸ್ಟರ್ಡೆಮ್ (೧೯೨೮) ಒಲಂಪಿಕ್ ಸ್ಪರ್ಧೆಗಳಲ್ಲಿ ಭಾರತವು ಪ್ರತಿನಿಧಿಸಿ, ಭಾಗ ತೆಗೆದುಕೊಳ್ಳುವಂತೆ ಪ್ರೇರಣೆ ನೀಡಿದವರು ದೊರಾಬ್. ೧೯೨೮ರಲ್ಲಿ ಮೊಟ್ಟ ಮೊದಲು, ಭಾರತವು ಹಾಕೀ ಆಟದಲ್ಲಿ ಒಲಂಪಿಕ್ ಸುವರ್ಣ ಪದಕ ಪಡೆದುದನ್ನು ಇಲ್ಲಿ ನೆನೆಯಬಹುದು.

ಸರ್ ದೊರಾಬ್ ತಮ್ಮ ೩೮ನೆಯ ವಯಸ್ಸಿನಲ್ಲಿ ೧೮ ವರುಷದ ಮೆಹರಬಾಯಿಯನ್ನು ಮದುವೆಯಾದರು. ಮೆಹರಬಾಯಿ ಆಗಿನ ಮೈಸೂರು ಸಂಸ್ಥಾನದ ಶಿಕ್ಷಣ ಇಲಾಖೆಯ ಇನ್‌ಸ್ಪೆಕ್ಟರ್ ಜನರಲ್‌ರಾಗಿದ್ದ ಶ್ರೀ ಎಚ್. ಜೆ. ಭಾಭಾ ಅವರ ಪುತ್ರಿ. ಹೀಗೆ ಟಾಟಾ-ಭಾಭಾ ಕುಟುಂಬಗಳ ಸಂಬಂಧ ಬೆಳೆದು ಬಂತು. ಸರ್ ದೊರಾಬ್ ಟಾಟಾ ಅವರ ಎಲ್ಲ ಕಾರ್ಯಗಳಲ್ಲಿ ಉತ್ತೇಜನ, ಪ್ರೋತ್ಸಾಹ ನೀಡುತ್ತಿದ್ದ ಮೆಹರಬಾಯಿ ಭಾರತದ ಮಹಿಳೆಯರಲ್ಲಿ ಜಾಗ್ರತಿ ಉಂಟುಮಾಡಲು, ಹಲವು ಮಹಿಳಾ ಸಂಘ—ಸಂಸ್ಥೆಗಳನ್ನು ಕಟ್ಟಿ ಬೆಳೆಸಲು ತುಂಬ ಶ್ರಮಪಟ್ಟರು. ಅಂತಾರಾಷ್ಟ್ರೀಯ ಮಹಿಳಾ ಸಂಘಟನೆಯಲ್ಲೂ ಮೆಹರಬಾಯಿ ಪ್ರಮುಖ ಪಾತ್ರ ವಹಿಸಿದರು. ೧೮-೬-೧೯೩೧ ರಂದು ನಾರ್ಥ್‌ವೇಲ್ಸಿನ ರುಥಿನ್ ನಗರದಲ್ಲಿ Leukaemia (ರಕ್ತ ಕ್ಯಾನ್ಸರ್) ರೋಗದಿಂದ ಶ್ರೀಮತಿ ಮೆಹರಬಾಯಿ ದೊರಾಬ್ ಟಾಟಾ ತೀರಿಕೊಂಡರು. ಮರು ವರುಷ ಅಂದರೆ ೧೧-೩-೧೯೩೨ ರಂದು ದೊರಾಬ್ ತಮ್ಮ ಎಲ್ಲ ಸ್ಥಿರಾಸ್ತಿ, ಚರಾಸ್ತಿ, ಆಭರಣಗಳು, ವಜ್ರ ಹೀಗೆ ಒಟ್ಟು ಒಂದು ಕೋಟಿ ರೂಪಾಯಿ ಮೊತ್ತದ ಸರ್ ದೊರಾಬಜೀ ಟಾಟಾ ಟ್ರಸ್ಟ್ ಸ್ಥಾಪಿಸಿ ಟ್ರಸ್ಟಿನ ಚೇರ್ಮನ್ನರಾಗಿ ಆ ವರ್ಷ (೧೯೩೨) ದೊರಾಬಜಿಯವರೇ ಸೇವೆ ಸಲ್ಲಿಸಿದರು. ೧೧-೯-೧೯೩೨ ಸರ್ ದೊರಾಬ್ ಯುರೋಪ್ ಪ್ರವಾಸ ಕೈಕೊಂಡು ಇಂಗ್ಲಂಡಿನಲ್ಲಿದ್ದ ತಮ್ಮ ಪತ್ನಿ ಶ್ರೀಮತಿ ಮೆಹರಬಾಯಿ ಅವರ ಸಮಾಧಿಯನ್ನು ನೋಡಲು ಇಚ್ಛಿಸಿದರು. ಆದರೆ ೩-೬-೧೯೩೨ ರಂದು ಜರ್ಮನಿಯ ಬಾಡ್ ಕಿಸಿಂಜೆನ್ನಿನಲ್ಲಿ ಅವರು ಅಕಸ್ಮಾತ್ತಾಗಿ ನಿಧನ ಹೊಂದಿದರು. ನಾರ್ಥ್‌ವೇಲ್ಸಿನ ರುಥಿನ್ ನಗರದ ಸ್ಮಶಾನ ಭೂಮಿಯಲ್ಲಿ ಶ್ರೀಮತಿ ಮೆಹರಬಾಯಿಯ ಸಮಾಧಿಯ ಬಳಿಯೇ ಸರ್ ದೊರಾಬಜೀ ಟಾಟಾ ಅವರ ಸಮಾಧಿಯನ್ನು ಮಾಡಲಾಯಿತು.

ಜಾತಿ, ಧರ್ಮ, ಪ್ರದೇಶ, ಭಾಷೆಗಳ ಭೇದ

---

## ಸರ್ ದೊರಾಬ್ ಟಾಟಾ ಟ್ರಸ್ಟಿನ ಮುಖ್ಯ ಉದ್ದೇಶಗಳು

೧. ಶೈಕ್ಷಣಿಕ ಸಂಸ್ಥೆಗಳು, ಶಾಲೆಗಳ ಸ್ಥಾಪನೆ, ಪೋಷಣೆ. ಆಸ್ಪತ್ರೆಗಳ ಸ್ಥಾಪನೆ, ಸಹಾಯ.

೨. ಬರಗಾಲ, ಭೂಕಂಪ, ನೆರೆ ಪ್ರವಾಹ ಪೀಡಿತರಿಗೆ ಸಹಾಯ.

೩. ಉಚ್ಚ ಶಿಕ್ಷಣ ವಿಶೇಷವಾಗಿ ವೈದ್ಯಕೀಯ ಹಾಗೂ ಔದ್ಯೋಗಿಕ ಸಂಶೋಧನೆಗೆ ಸಹಾಯ, ಪ್ರೋತ್ಸಾಹ.

೪. ಬೆಂಗಳೂರಿನಲ್ಲಿರುವ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸಾಯಿನ್ಸ್ ಸಂಸ್ಥೆಗೆ ಆರ್ಥಿಕ ನೆರವು. ಎಲ್ಲ ಪ್ರಾಧ್ಯಾಪಕರು, ವ್ಯವಸ್ಥಾಪಕರನ್ನು ನೇಮಕಕ್ಕೆ ಆರ್ಥಿಕ ಸಹಾಯ ಹಾಗೂ ಶಿಷ್ಯವೃತ್ತಿ ನೀಡಲು ಧನ ಸಹಾಯ.

೫. ವಿಜ್ಞಾನ ವಿಷಯದಲ್ಲಿ ಪ್ರತಿಭಾವಂತ ಭಾರತೀಯ ವಿದ್ಯಾರ್ಥಿಗಳಿಗೆ ಮುಂದೊರೆದ ರಾಷ್ಟ್ರಗಳಲ್ಲಿ ಉಚ್ಚ ಶಿಕ್ಷಣಕ್ಕಾಗಿ ಸಹಾಯ.

---

ಭಾವ ಎಣಿಸದೇ ಕೇವಲ ಪ್ರತಿಭೆ, ಆವಶ್ಯಕತೆಗಳನ್ನು ಗುರುತಿಸಿ ಇದಕ್ಕಿಂತಲೂ ಹೆಚ್ಚಾಗಿ, ಭಾರತೀಯರು ಮುಂದೊರೆದ ರಾಷ್ಟ್ರಗಳಲ್ಲಿ ಅಧ್ಯಯನ ನಡೆಸಿ ತರಬೇತಿ ಪಡೆದು ಭಾರತಕ್ಕೆ ಮರಳಿ ಇಲ್ಲಿಯ ಸಾಮಾಜಿಕ ಶೈಕ್ಷಣಿಕ ವೈಜ್ಞಾನಿಕ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಲಿ ಎಂಬುದೇ ಈ ಎಲ್ಲದರ ಹಿಂದಿರುವ ಉದ್ದೇಶ. ಟ್ರಸ್ಟು ಪ್ರತಿ ವರುಷ ಬೆಂಗಳೂರಿನ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸಾಯಿನ್ಸ್ ಸಂಸ್ಥೆಯಲ್ಲಿ ಅಧ್ಯಯನ ಮಾಡುತ್ತಿರುವ ೩೬ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಹಾಗೂ ರಾಷ್ಟ್ರದಲ್ಲಿ ಇನ್ನುಳಿದ ಹತ್ತು ಖ್ಯಾತ ವಿಜ್ಞಾನ, ತಂತ್ರವಿಜ್ಞಾನ ಶೈಕ್ಷಣಿಕ ಸಂಸ್ಥೆಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ (ಪ್ರತಿ ಸಂಸ್ಥೆಗೆ ನಾಲ್ಕರಂತೆ) ಶಿಷ್ಯವೃತ್ತಿ ನೀಡುತ್ತಿದೆ. ಅಲ್ಲದೇ ಮುಂಬಯಿಯ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ೬೦ ವಿಶೇಷ ವಿದ್ಯಾರ್ಥಿ ವೇತನಗಳನ್ನು ನೀಡುತ್ತದೆ. ವೈದ್ಯಕೀಯ ಇಂಜನಿಯರಿಂಗ್ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಶಿಷ್ಯವೃತ್ತಿ ಹಾಗೂ ವಿದ್ಯಾರ್ಥಿ ವೇತನಗಳನ್ನು ನೀಡಲಾಗುತ್ತಿದೆ. ಸರ್ ದೊರಾಬ ಟಾಟಾ ಟ್ರಸ್ಟು ಅಂತಾರಾಷ್ಟ್ರೀಯ ಖ್ಯಾತಿಯ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್, ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಸಾಯಿನ್ಸಿಸ್, ಟಾಟಾ ಕಾನ್ಸರ್ ಆಸ್ಪತ್ರೆ ಹಾಗೂ ನ್ಯಾಶನಲ್ ಸೆಂಟರ್ ಫಾರ್ ಪರ್‌ಫಾರ್ಮಿಂಗ್ ಆರ್ಟ್ಸ್ ಹೀಗೆ ಮೂಲಭೂತ ವಿಜ್ಞಾನ, ಸಮಾಜ ವಿಜ್ಞಾನ, ಆರೋಗ್ಯ ಸೇವೆ, ಸಂಶೋಧನೆ ಹಾಗೂ ಸಾಂಸ್ಕೃತಿಕ ಕಲೆಗಳ ಪ್ರಗತಿಗಾಗಿ ಭಾರತದಲ್ಲಿ ಮಹತ್ವಪೂರ್ಣ ಹಾಗೂ ವಿಶಿಷ್ಟ ಸಂಸ್ಥೆಗಳನ್ನು ಸ್ಥಾಪಿಸಿ, ಅವುಗಳನ್ನು ಪೋಷಿಸುತ್ತಿರುವುದು ಟ್ರಸ್ಟಿನ ಮಹತ್ವದ ಕೊಡುಗೆ.

ಸರ್ ದೊರಾಬ್ ಟಾಟಾ ಟ್ರಸ್ಟು ಒಟ್ಟು ಹತ್ತು ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚು ಹಣವನ್ನು ಕಳೆದ ೫೦ ವರುಷಗಳಲ್ಲಿ ಮೇಲ್ಕಂಡ ಉದ್ದೇಶಗಳಿಗಾಗಿ ವೆಚ್ಚ ಮಾಡಿದೆ. ಸರ್ ದೊರಾಬ್ ಟಾಟಾ ಟ್ರಸ್ಟಿನ ಪ್ರೇರಣೆ ಸಹಾಯಗಳಿಲ್ಲದಿದ್ದರೆ, ಬಹುಶಃ ಭಾರತದಲ್ಲಿ T. I. F.-R., ಟಾಟಾ ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ, ಟಾಟಾ ಆಸ್ಪತ್ರೆ, ರಾಷ್ಟ್ರೀಯ ಪ್ರದರ್ಶಕ ಕಲೆಗಳ ಕೇಂದ್ರಗಳು ಇರುತ್ತಿರಲಿಲ್ಲವೇನೊ. ಡಾ. ಹೋಮಿ ಭಾಭಾರಂಥ ಜಗತ್ಪ್ರಸಿದ್ಧ ಭೌತಶಾಸ್ತ್ರಜ್ಞರ ಪ್ರತಿಭೆಯನ್ನು ಗುರುತಿಸಿ, ರಾಷ್ಟ್ರದ ಸೇವೆಯಲ್ಲಿ ಅವರನ್ನು ಅರ್ಪಿಸಿದುದು ಈ ಟ್ರಸ್ಟಿನ ಮಹತ್ವಪೂರ್ಣ ಸಾಧನೆ.

೧೯೩೬ರಲ್ಲಿ ಸರ್ ದೊರಾಬ ಟಾಟಾ ಟ್ರಸ್ಟು ಆರಂಭಿಸಿದ ಟಾಟಾ ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ ಈ ವರುಷ ಸುವರ್ಣ ಮಹೋತ್ಸವ ಆಚರಿಸಿದೆ. ಡಾ. ಸಿ. ಮ್ಯಾನ್‌ಶಾರ್ಟ್ (೧೯೩೮-೪೧) ಡಾ. ಜೆ. ಎಂ. ಕುಮಾರಪ್ಪ (೧೯೪೧-೫೩)

---

**ಸರ್ ದೊರಾಬ್ ಟಾಟಾ ಟ್ರಸ್ಟಿನ ಚೇರ್ಮನ್ನರಾಗಿ ಸೇವೆ ಸಲ್ಲಿಸಿದ ಖ್ಯಾತರು:**

| | |
|---|---|
| ಸರ್ ದೊರಾಬ್ ಟಾಟಾ | ೧೯೩೨- |
| ಸರ್ ನವರೋಜಿ ಸಕಲತ್‌ವಾಲಾ | ೧೯೩೨-೩೮ |
| ಸರ್ ಸೊರಾಬ ಸಕಲತ್‌ವಾಲಾ | ೧೯೩೮-೪೮ |
| ಸರ್ ಹೋಮಿ ಮೋದಿ | ೧೯೪೮-೪೯ |
| ಸರ್ ಅರ್‌ದೇಶಿರ್ ಜಲಾಲ | ೧೯೪೯ |
| ಶ್ರೀ ಜೆ. ಆರ್. ಡಿ. ಟಾಟಾ | ೧೯೪೯-೫೦ |
| ಡಾ. ಜಾನ್ ಮಥಾಯ್ | ೧೯೫೧-೫೭ |
| ಸರ್ ಹೋಮಿ ಮೋದಿ | ೧೯೫೭-೬೯ |
| ಶ್ರೀ ಜೆ. ಆರ್. ಡಿ. ಟಾಟಾ | ೧೯೬೯ ರಿಂದ |

ಪ್ರಾ. ಆರ್. ಡಿ. ಚೋಕಶಿ (೧೯೫೦-೮೦) ಹಾಗೂ ೧೯೮೦ರ ನಂತರ ಈ ವರೆಗೆ ಶ್ರೀ ಜೆ.ಜೆ. ಭಾಭಾ ಅವರು ಮ್ಯಾನೇಜಿಂಗ್ ಟ್ರಸ್ಟಿ ಎಂದು ತುಂಬ ಚತುರತೆಯಿಂದ ದೂರದರ್ಶಿತ್ವ ಧೋರಣೆಯಿಂದ ಸೇವೆ ಸಲ್ಲಿಸಿದ್ದಾರೆ.

ಪ್ರಾ. ಎ. ಆರ್. ವಾಡಿಯಾ (೧೯೫೩-೬೨) ಡಾ. ಎಂ. ಎಸ್. ಗೋರೆ (೧೯೬೨-೮೨)ಹಾಗೂ ಡಾ. ಆರ್‌ಮೈಟಿ ದೇಸಾಯಿ (೧೯೮೩ ರಿಂದ) ಈ ಮಹಾನ್ ಸಂಸ್ಥೆಯ ನಿರ್ದೇಶಕರಾಗಿ ಅಪ್ರತಿಮ ಸೇವೆ ಸಲ್ಲಿಸಿ ಈ ಸಂಸ್ಥೆಗೆ ವಿಶ್ವವಿದ್ಯಾಲಯದ ಮನ್ನಣೆಯನ್ನೂ ಅಂತಾರಾಷ್ಟ್ರೀಯ ಖ್ಯಾತಿಯನ್ನೂ ತಂದಿದ್ದಾರೆ.

೧೯೪೧ ರಲ್ಲಿ ಟ್ರಸ್ಟು ಟಾಟಾ ಸ್ಮಾರಕ ಕೇಂದ್ರ (ಆಸ್ಪತ್ರೆ)ಯನ್ನು ಆರಂಭಿಸಿತು. ಕ್ಯಾನ್ಸರ್ ರೋಗ, ಉಪಚಾರ, ಸಂಶೋಧನೆಯಲ್ಲಿ ಕಳೆದ ೪೫ ವರುಷಗಳಿಂದ ಈ ಆಸ್ಪತ್ರೆ ಕೆಲಸಮಾಡುತ್ತಿದೆ. ಭಾರತದ ಎಲ್ಲ ಪ್ರದೇಶಗಳ ಕ್ಯಾನ್ಸರ್ ರೋಗಿಗಳಲ್ಲದೇ ಇನ್ನಿತರ ಹಿಂದುಳಿದ ರಾಷ್ಟ್ರಗಳ ರೋಗಿಗಳು ಇಲ್ಲಿ ಶುಶ್ರೂಷೆ, ಉಪಚಾರಗಳಿಗಾಗಿ ಬರುವುದುಂಟು. ಜಗತ್ಪ್ರಸಿದ್ಧ ಕ್ಯಾನ್ಸರ್ ತಜ್ಞರಾದ ಡಾ. ಜೆ. ಜಿ. ತೆಮೂಸ್ವಾಲ್, ಡಾ. ಡಿ. ಜೆ. ಜುಸ್ಸಾವಾಲಾ, ಡಾ. ಪಿ. ಬಿ. ದೇಸಾಯಿ ಅವರು ಈ ಆಸ್ಪತ್ರೆಯ ನಿರ್ದೇಶಕರಾಗಿ, ಶ್ರೀ ನವಲ ಟಾಟಾ, ಡಾ. ಜಾನ್ ಮಥಾಯ್, ಲೆ. ಕ. ವಿಶ್ವನಾಥನ್, ಡಾ. ಹೋಮಿ ಭಾಭಾ, ಶ್ರೀ ಧರ್ಮವೀರ, ವಿಕ್ರಮ ಸಾರಾಭಾಯಿ, ಡಾ. ಎಚ್. ಎನ್. ಸೇಟ್ನಾ ಮೊದಲಾದ ಖ್ಯಾತರು ಈ ಸಂಸ್ಥೆಯ ಕಾರ್ಯಕಾರಿ ಮಂಡಲಿಯ ಚೇರ್ಮನ್ನರಾಗಿ ನೀಡಿದ, ನೀಡುತ್ತಿರುವ ಸೇವೆ ಅಪೂರ್ವ.

೩೦೦ ಹಾಸಿಗೆಗಳಿರುವ ಈ ಕ್ಯಾನ್ಸರ್ ಆಸ್ಪತ್ರೆ ಏಶಿಯದಲ್ಲಿಯೇ ದೊಡ್ಡದು. ಕ್ಯಾನ್ಸರ್ ಸಂಶೋಧನಾ ಸಂಸ್ಥೆಯೂ ಪ್ರಪಂಚದ ಹಿರಿಯ ಸಂಸ್ಥೆಗಳಲ್ಲಿ ಒಂದಾಗಿದೆ. ಕ್ಯಾನ್ಸರ್ ಹೆಸರು ಕೇಳುತ್ತಲೇ ಬೆಚ್ಚಿ ಬೀಳುವ ನಮ್ಮ ರಾಷ್ಟ್ರದಲ್ಲಿ ಟಾಟಾ ಆಸ್ಪತ್ರೆ ಕ್ಯಾನ್ಸರ್ ರೋಗ ಗುರುತಿಸುವಿಕೆ, ತಪಾಸಣೆ, ಶುಶ್ರೂಷೆ, ಉಪಚಾರ, ಸಂಶೋಧನೆಗಳ ದೃಷ್ಟಿಯಿಂದ ಈ ದೇಶದ ಲಕ್ಷಾವಧಿ ಜನರಿಗೆ ಆಶಾದೀಪವೆನಿಸಿದೆ. ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಸರ್ ದೊರಾಬ್ ಟಾಟಾ ಟ್ರಸ್ಟಿನ ಮತ್ತೊಂದು ಮಹತ್ವಪೂರ್ಣ ಕಾಣಿಕೆ. ಭೌತಶಾಸ್ತ್ರದ ಮೂಲಭೂತ ತತ್ವಗಳನ್ನು ಸಂಶೋಧಿಸಲು ಡಾ. ಹೋಮಿ ಭಾಭಾ ಅವರ ಪ್ರೇರಣೆ, ಕಾರ್ಯಕ್ಷಮತೆಯಿಂದ ೧೯೪೫ ರಲ್ಲಿ ಈ ಸಂಸ್ಥೆಯನ್ನು ಆರಂಭಿಸಲಾಯಿತು, ಮುಂದೆ ಇದೇ ಸಂಸ್ಥೆ ಭಾರತದಲ್ಲಿ ಪ್ರಪ್ರಥಮ ಅಣುಶಕ್ತಿ ಕೇಂದ್ರವನ್ನು ಆರಂಭಿಸಲು ಹಾಗೂ ಕೇಂದ್ರ ಸರಕಾರದಲ್ಲಿ ಅಣುಶಕ್ತಿ ಇಲಾಖೆ, ಆಯೋಗ ಆರಂಭಿಸಲು ಕಾರಣವಾಯಿತು. ಡಾ. ಭಾಭಾ ಅವರ ದಕ್ಷತೆ, ದೂರದರ್ಶಿತ್ವ, ಶಾಂತಿಗಾಗಿ ಅಣುಶಕ್ತಿ ಬಳಕೆಯ ಅವರ ನೀತಿ ಇವುಗಳ-ಸಂಕೇತವಾಗಿ ಕಳೆದ ನಲವತ್ತು ವರುಷಗಳಿಂದ ಈ ಸಂಸ್ಥೆ ಕಾರ್ಯಮಾಡುತ್ತಿದೆ. ಡಾ. ಹೋಮಿ ಭಾಭಾ (೧೯೪೫-೬೬)

### ಟ್ರಸ್ಟುಗಳ ಶೇರುಗಳ ವಿತರಣೆ

| | | |
|---|---|---|
| ಸರ್ ದೊರಾಬಜೀ ಟಾಟಾ ಟ್ರಸ್ಟು | ೧೨೫೬೭ | ಶೇರುಗಳು |
| ಸರ್ ರತನ ಟಾಟಾ ಟ್ರಸ್ಟು | ೧೦೬೨೩ | " |
| ಜಮಶೇಟಜೀ ಟಾಟಾ ಟ್ರಸ್ಟು | ೩೨೪೬ | " |
| ಜೆ. ಆರ್. ಡಿ. ಟಾಟಾ ಟ್ರಸ್ಟು | ೨೭೪೮ | " |
| ವತಾಜಬಾಯಿ ರತನ ಟಾಟಾ ಟ್ರಸ್ಟು | ೮೩೩ | " |
| ಎಂ. ಕೆ. ಟಾಟಾ ಟ್ರಸ್ಟು | ೨೬೯ | " |
| ಒಟ್ಟು | ೩೦೨೮೬ = ೮೦.೯೩% | |

## ಸರ್ ದೊರಾಬ್ ಟಾಟಾ ಟ್ರಸ್ಟು ೫೨ ವರ್ಷಗಳಲ್ಲಿ ನೀಡಿದ ಧನಸಹಾಯ ಹೀಗಿದೆ.

| | | |
|---|---|---|
| ಟಾಟಾ ಸ್ಮಾರಕ ಕೇಂದ್ರ (ಆಸ್ಪತ್ರೆ) | ೧೦೨ | ಲಕ್ಷ ರೂಪಾಯಿಗಳು |
| ಟಾಟಾ ಸಮಾಜ ವಿಜ್ಞಾನ ಸಂಸ್ಥೆ | ೭೩ | " " |
| ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ | ೫೨ | " " |
| ಗ್ರಾಮೀಣ ವಿಕಾಸ ಮಂಡಲಿ | ೫೬ | " " |
| ಟಾಟಾ ಬ್ಲಡ್ ಬ್ಯಾಂಕ್ | ೩೫ | " " |
| ರಾಷ್ಟ್ರೀಯ ಪ್ರದರ್ಶಕ ಕಲೆಗಳ ಕೇಂದ್ರ | ೬೫ | " " |
| ಇತರ ಸಂಸ್ಥೆಗಳು | ೨೩ | " " |

ಪ್ರಾ. ಎಂ.ಜಿ. ಕೆ. ಮೆನನ್ (೧೯೬೬-೭೫) ಡಾ. ಬಿ. ವಿ ಶ್ರೀಕಂಠನ್ (೧೯೭೬ ರಿಂದ) ರಾಷ್ಟ್ರದ ಹಾಗೂ ಅಂತಾರಾಷ್ಟ್ರೀಯ ಖ್ಯಾತಿಯ ವಿಜ್ಞಾನಿಗಳು ಈ ಸಂಸ್ಥೆಯ ನಿರ್ದೇಶಕರಾಗಿ ಅದರ ಪ್ರಗತಿಗಾಗಿ ಶ್ರಮಿಸಿದ್ದಾರೆ. ಸುಪ್ರಸಿದ್ಧ ವಿಜ್ಞಾನಿ ಡಾ. ಜಯಂತ ನಾರಳೀಕರ ಈ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದಾರೆ.

ಏಶಿಯದಲ್ಲಿಯೇ ಅತ್ಯಾಧುನಿಕ ವೆನಿಸಿದ ಸುಸಜ್ಜಿತ ರಂಗಮಂದಿರವನ್ನು ಯೋಚಿಸಿ ನಿರ್ಮಿಸಿದ ಶ್ರೇಯಸ್ಸು ಸರ್ ದೊರಾಬ್ ಟಾಟಾ ಟ್ರಸ್ಟಿಗೆ ಸಲ್ಲುತ್ತದೆ. ರಾಷ್ಟ್ರೀಯ ಪ್ರದರ್ಶಕ ಕಲೆಗಳ ಕೇಂದ್ರವು ಮುಂಬಯಿಯ ನರಿಮನ್ ಪಾಯಿಂಟ್ ಭಾಗದಲ್ಲಿ ಸುಮಾರು ಐದು ಎಕರೆ ಪ್ರದೇಶದಲ್ಲಿ ವಿಶಾಲವಾಗಿ ನಿರ್ಮಾಣಗೊಂಡಿದೆ. ಈ ಕೇಂದ್ರ ನಿರ್ಮಾಣದ ವೆಚ್ಚ ಎರಡು ಕೋಟಿಗೂ ಮಿಕ್ಕಿದೆ. ಅದರಲ್ಲಿ ಸರ್ ದೊರಾಬ್ ಟಾಟಾ ಟ್ರಸ್ಟು ೬೫ ಲಕ್ಷ ರೂಪಾಯಿ ನೀಡಿದೆ. ಉಳಿದ ಹಣವು ಬೇರೆ ಬೇರೆ ಸಂಸ್ಥೆಗಳಿಂದ ಸಂಗ್ರಹಿಸಲ್ಪಟ್ಟಿದೆ. ೧೦೪೦ ಆಸನಗಳ ಟಾಟಾ ಥಿಯೇಟರ್, ಪ್ರಾಯೋಗಿಕ ಚಿಕ್ಕ ರಂಗಮಂದಿರಗಳು ವಿಶಾಲವಾದ ಆವರಣವುಳ್ಳ ಈ ಕೇಂದ್ರ ಪ್ರಪಂಚದ ಖ್ಯಾತ ರಂಗಮಂದಿರಗಳಲ್ಲೊಂದಾಗಿದೆ. ಇಪ್ಪತ್ತು ವರುಷಗಳಲ್ಲಿ ಅದ್ಭುತ ಯಶಸ್ಸು ಸಾಧಿಸಿರುವ ಈ ಕೇಂದ್ರವು ಶ್ರೀ ಜೆ. ಆರ್. ಡಿ. ಟಾಟಾ ಚೇರ್ಮನ್, ಶ್ರೀ ಜೆ. ಜೆ. ಭಾಭಾ ವಾಯಿಸ್ ಚೇರ್ಮನ್, ಡಾ. ವ್ಹಿ. ಕೆ. ನಾರಾಯಣ ಮೆನನ್ (೧೯೬೮-೮೨) ಶ್ರೀ ಪು. ಲ. ದೇಶಪಾಂಡೆ (೧೯೮೨-೮೫) ಕಾರ್ಯಕಾರಿ ನಿರ್ದೇಶಕರ ದಕ್ಷ ಆಡಳಿತದಲ್ಲಿ ಮುನ್ನಡೆದಿದೆ. ಮಹಾರಾಷ್ಟ್ರದ ಸಾತಾರಾ ಬಳಿಯಲ್ಲಿರುವ ದೇವಪುರ, ಪುಣೆಯ ಬಳಿ ಮುಳಶಿ, ಗುಜರಾತಿನ ಮಿಠಾಪುರ, ರಾಜಸ್ಥಾನಗಳಲ್ಲಿಯೂ ಸರ್ ದೊರಾಬ್ ಟಾಟಾ ಟ್ರಸ್ಟು ಗ್ರಾಮೀಣ ವಿಕಾಸ ಯೋಜನೆಗಳನ್ನು ಕಳೆದ ೩೫ ವರುಷಗಳಿಂದ ಸಾಕಾರ ಗೊಳಿಸಿದೆ. ಟಾಟಾ ಕೃಷಿ ಹಾಗೂ ಗ್ರಾಮೀಣ ತರಬೇತಿ ಕೇಂದ್ರ (ಥಾನ್ಸಾ, ಮಹಾರಾಷ್ಟ್ರ) ಕುರುಡರಿಗಾಗಿ ಸರ್ ದೊರಾಬ್ ಟಾಟಾ ಟ್ರಸ್ಟು ನಿರ್ಮಿಸಿದ ಮತ್ತೊಂದು ಆಶಾದೀಪ. ರಾಯಲ್ ಕಾಮನ್-ವೆಲ್ಥ್ ಸೊಸಾಯಿಟಿ ಫಾರ್ ದಿ ಬ್ಲಾಯಿಂಡ್ ಸಂಸ್ಥೆಗಳಿಗೂ ಟ್ರಸ್ಟು ಧನಸಹಾಯ ನೀಡಿದೆ. ✡



# ಇದುವೇ ಜೀವ ಇದು ಜೀವನ

ಕೆಲ ತಿಂಗಳುಗಳ ಹಿಂದೆ ಕಾರ್ಯನಿಮಿತ್ತ ನನ್ನ ಊರಿಗೆ ಹೋಗಿದ್ದೆ. ಅಲ್ಲಿ ಅನಿವಾರ್ಯವಾಗಿ ಕೆಲವು ದಿನ ತಂಗುವ ಸಂದರ್ಭ ಒದಗಿತ್ತು. ಪ್ರತಿದಿನ ಮುಂಜಾನೆ ನನ್ನ ಮನೆಗೆ ಸಮೀಪದಲ್ಲೇ ಇದ್ದ ನಾಲೆಗೆ ನಿತ್ಯಕರ್ಮ ತೀರಿಸಿಕೊಳ್ಳಲು ಹೋಗುತ್ತಿದ್ದೆ. ಆ ನಾಲೆಯ ಮತ್ತೊಂದು ದಡದಲ್ಲಿ ಹರಿಯುವ ನೀರಿನ ಕಡೆಗೆ ಬಾಗಿದಂತೆ ಸೊಂಪಾಗಿ ಬೆಳೆದ ಒಂದು ಮುಳ್ಳಿನ ಗಿಡವಿತ್ತು. ಆ ಗಿಡದಲ್ಲಿ ಹಲವು ಗೀಜಗನ ಹಕ್ಕಿಗಳು ಗೂಡುಗಳನ್ನು ಕಟ್ಟಿಕೊಳ್ಳುವ ಸಿದ್ಧತೆಯಲ್ಲಿದ್ದವು. ಅವು ತಮ್ಮ ಕೊಕ್ಕಿನಿಂದ ಎಲ್ಲಿಂದಲೋ ಎಳೆಎಳೆಯಾದ ನಾರು ತಂದು ಕಲಾತ್ಮಕವಾಗಿ ಗೂಡು ಕಟ್ಟುವುದನ್ನು ನಿತ್ಯ ನೋಡುವುದೇ ನನ್ನ ಕಣ್ಣಿಗೆ ಹಬ್ಬವಾಗಿತ್ತಲ್ಲದೇ, ಅವು ತಮ್ಮದೇ ಆದ ಕಲರವ ಭಾಷೆಯಿಂದ ಪಕ್ಷಿಪ್ರೇಮಿಯಾದ ನನ್ನನ್ನು ಭಾವ ಪರವಶನನ್ನಾಗಿಸುತ್ತಿದ್ದವು. ಸ್ವಲ್ಪ ದಿನ ಕಳೆಯುವುದರಲ್ಲೇ ೧೦-೧೫ ಗೂಡುಗಳು ತಯಾರಾಗಿ ಅವು ಹೊಸ ಸಂಸಾರವನ್ನು ನಡೆಸಲು ಸಿದ್ಧತೆ ನಡೆಸುತ್ತಿರುವಂತೆ ತೋರುತ್ತಿತ್ತು.

ಆದರೆ ಒಂದು ದಿನ ಮುಂಜಾನೆ ಮಾಮೂಲಿನಂತೆ ಆ ಸ್ಥಳಕ್ಕೆ ಹೋದಾಗ ಅಲ್ಲಿನ ದೃಶ್ಯ ಕಂಡು ಗರಬಡಿದವನಂತೆ ನಿಂತೆ. ಕಾರಣ, ಯಾರೋ ಅವಿವೇಕಿಗಳು ಆ ಗಿಡವನ್ನು ಬುಡ ಸಮೇತ ಕಡಿದು ಕೊಂಡೊಯ್ದಿದ್ದರು. ಸಾಕ್ಷಿಯಾಗಿ ದಂಡೆಯಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಗೂಡುಗಳು; ಅವುಗಳ ಸುತ್ತಲೂ ಹಾರುತ್ತಾ ಚೀರಾಡುತ್ತಿದ್ದ ಹಕ್ಕಿಗಳು. ಒಂದು ಕ್ಷಣ ಮೌನವಾಗಿ ನಿಂತೆ. ನನ್ನ ಕಣ್ಣುಗಳು ತುಂಬಿ ಬಂದಿದ್ದವು. ಯಾರೋ ಒಬ್ಬ ರೈತ ತನ್ನ ಹೊಲದ ಬೇಲಿಗಾಗಿ ಈ ಮುಳ್ಳುಗಿಡವನ್ನು ಕಡಿದೊಯ್ದಿದ್ದ ಎಂದು ಗೊತ್ತಾಯಿತು. ಆಗಿನ ನನ್ನ ಪರಿಸ್ಥಿತಿಯಲ್ಲಿ ಪಕ್ಷಿಪ್ರೇಮಿ ಸಲೀಂ ಅಲಿಯವರೇನಾದರೂ ಅಲ್ಲಿ ಇದ್ದಿದ್ದರೆ ಆ ಹಕ್ಕಿಗಳ ಮಾನಸಿಕ ತುಮುಲವನ್ನು ಅರ್ಥಮಾಡಿಕೊಂಡು ಸಾಂತ್ವನ ಮಾಡುತ್ತಿದ್ದರೋ ಏನೋ?

—ಎಚ್. ಆರ್. ಚಂದ್ರಶೇಖರ್

ನಾನು ಹೈಸ್ಕೂಲೊಂದರಲ್ಲಿ ಅಧ್ಯಾಪಕಿ. ಒಮ್ಮೆ ವಾರ್ಷಿಕ ಪರೀಕ್ಷೆ ನಡೆಯುತ್ತಿತ್ತು. ಅಂದು ಕನ್ನಡ ದ್ವಿತೀಯ ಪತ್ರಿಕೆ. ಪರೀಕ್ಷಾ ಕೊಠಡಿಯ ಮೇಲ್ವಿಚಾರಣೆ ಕೆಲಸದಲ್ಲಿ ನಿರತಳಾಗಿದ್ದೆ. ಇದ್ದಕ್ಕಿದಂತೆ ಒಂದು ಮೂಲೆಯಿಂದ ಅಳುವ, ಬಿಕ್ಕಳಿಸುವ ಧ್ವನಿ ಕೇಳಿತು, ಯಾರೆಂದು ಕುತೂಹಲದಿಂದ ನೋಡಿದೆ. ೮ನೇ ತರಗತಿಯ ಚಿಕ್ಕ ಹುಡುಗಿಯೊಬ್ಬಳು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಹತ್ತಿರ ಹೋಗಿ, "ಯಾಕಮ್ಮ? ಏನು ಬೇಕು?" ಎಂದೆ. ಅದಕ್ಕೆ ಆ ಹುಡುಗಿಯ ಉತ್ತರ ಅಳು ಒಂದೇ. ಸ್ವಲ್ಪ ಸಮಾಧಾನ ಮಾಡಿ ಮತ್ತೆ ಕೇಳಿದೆ. ಆಗ ಬಿಕ್ಕುತ್ತಾ ನುಡಿದಳು. "ಟೀಚರ್, ಈ ಪ್ರಶ್ನೆ ಪತ್ರಿಕೆಯಲ್ಲಿ 'ನಿಮ್ಮ ತಾಯಿಗೆ ಒಂದು ಕಾಗದ ಬರೆಯಿರಿ' ಎಂದು ತಿಳಿಸಿದ್ದಾರೆ. ನಮ್ಮ ತಾಯಿ ಸತ್ತು ಹೋಗಿದ್ದಾರೆ. ಅವರಿಗೆ ಹೇಗೆ ಕಾಗದ ಬರೆಯಲಿ?" ಎಂದು ಮತ್ತೆ ಅಳಲು ಪ್ರಾರಂಭಿಸಿದಳು. ಅವಳಿಗೆ ಸಮಾಧಾನ ಹೇಳುವುದೇ ಕಷ್ಟವಾಯಿತು. ಪಾಪ, ಅವರ ತಾಯಿ ಎರಡು ತಿಂಗಳ ಹಿಂದೆ ತೀರಿ ಹೋಗಿದ್ದರಂತೆ. ಇನ್ನೂ ಹಸಿಯಾಗಿದ್ದ ದುಃಖ, ಪ್ರಶ್ನೆ ಪತ್ರಿಕೆ ನೋಡಿ ಹೆಚ್ಚಾಯಿತು. ಅಳಿದ ತಾಯಿಯ ನೆನಪು ಬಂದ ಕಾಡಿಸಿತು. ಆ ಮುಗ್ಧ ಬಾಲಕಿಗೆ ಯಾರು ಸಮಾಧಾನ ಹೇಳಬಲ್ಲರು? ಅವಳು ಪ್ರಶ್ನೆ ಪತ್ರಿಕೆಗೆ ಏನೆಂದು ಉತ್ತರಿಸಿಯಾಳು? ಹೀಗೆ ಮನದಲ್ಲಿ ಪ್ರಶ್ನೆಗಳು ಏಳುತ್ತಿದ್ದಂತೆ, ನಾನು ಮೂಕಳಾಗಿ ಅವಳನ್ನೇ ನೋಡುತ್ತಾ ನಿಂತೆ.

—ಹೆಚ್. ಎಂ. ಪ್ರಭಾವತಿ

ಅಸ್ತಮಾ ರೋಗಿಯಾದ ನನಗೆ ಒಂದು ಬೆಳಗಿನ ಜಾವ, ಏಕಾಏಕಿ ದಮ್ಮು ಪ್ರಾರಂಭವಾಯಿತು. ಹಾಸಿಗೆಯ ಸುತ್ತಲೂ ಮಾತ್ರೆಗಾಗಿ ಹುಡುಕಿದೆ, ಸಿಗಲಿಲ್ಲ. ತಾತ್ಕಾಲಿಕ ಉಪಶಮನವಾದೀತೆಂದು ನೀರು ಬಿಸಿಮಾಡಿ ಕುಡಿದೆ; ಕೆಲ ನಿಮಿಷ ಬಿಟ್ಟು ಬಿಸಿಬಿಸಿ ಕಾಫಿ ಕುಡಿದೆ. ಏನು ಮಾಡಿದರೂ ಉಸಿರಾಟ ತುಂಬಾ ಕಷ್ಟವಾಗತೊಡಗಿತು.

ನಮ್ಮ ಊರಿನ ಔಷಧಿ ಅಂಗಡಿಗಳಲ್ಲಿ

ಸಾಮಾನ್ಯವಾಗಿ ರಾತ್ರಿ ಯಾರಾದರೊಬ್ಬರು ಮಲಗಿರುತ್ತಾರೆ. ಮಾತ್ರೆಯ ಹೆಸರು ಬರೆದು, ನನ್ನ ಮಗನನ್ನು ಎಬ್ಬಿಸಿ, ಅಂಗಡಿಯಿಂದ ಕೂಡಲೆ ತರಲು ಸೂಚಿಸಿದೆ. ಆದರೆ ದುರ್ದೈವದಿಂದ ಅಂಗಡಿಯವನು ಯಕ್ಷಗಾನ ನೋಡಿ ಮನೆಗೆ ಹೋಗಿ ಮಲಗಿರಬೇಕೇ? ಅಲ್ಲಿಗೆ ಹೋಗಿ ಅವನನ್ನು ಹೊರಡಿಸಿಕೊಂಡು ಮಾತ್ರೆ ತರಲು ಸಾಕಷ್ಟು ವಿಳಂಬವಾಯಿತು. ಅಷ್ಟರಲ್ಲಿ ದಮ್ಮು ಹೆಚ್ಚಾಗಿದ್ದುದರಿಂದ, ಎರಡು ಮಾತ್ರೆ ಸೇವಿಸಿದೆ. ಮಾತ್ರೆ ಸೇವಿಸಿದ ಹತ್ತಿಪ್ಪತ್ತು ನಿಮಿಷಗಳಲ್ಲಿ ಉಸಿರಾಟ ಮಾಮೂಲಿನಂತಾಗಬೇಕು, ಆದರೆ ಆಗಲಿಲ್ಲ. ಅನಿವಾರ್ಯವಾಗಿ ರಿಕ್ಷಾ ತರಿಸಿಕೊಂಡು, ನನ್ನ ಖಾಸಗಿ ವೈದ್ಯರ ಮನೆ ತಲುಪಲು ಮತ್ತಷ್ಟು ವೇಳೆಹಿಡಿಯಿತು. ನನಗೋ ಮಾತನಾಡಲು ಸಾಧ್ಯವೇ ಇರಲಿಲ್ಲ. ಕೇವಲ ಮೂಕ ಸಂಜ್ಞೆಯಿಂದ ಕೂಡಲೇ ಇಂಜೆಕ್ಷನ್ ಕೊಡಬೇಕೆಂದು ಸೂಚಿಸಿದೆ.

ಡಾಕ್ಟರಿಗೆ ಅರ್ಥವಾಯಿತು. ಇಂಟ್ರಾವೀನಸ್ ಇಂಜೆಕ್ಷನ್ ಕೊಟ್ಟರು. ಸೋಫಾದ ಮೇಲೆ ವಿಶ್ರಮಿಸಲು, ಮೆಲ್ಲಗೆ ನನ್ನನ್ನು ಮಲಗಿಸಿದರು. ಸುಮಾರು ಅರ್ಧಘಂಟೆ ಕಳೆದ ಮೇಲೆ ಉಸಿರಾಟ ಹತೋಟಿಗೆ ಬಂದಿತು. ನನ್ನ ಮೈ ಎಲ್ಲಾ ಬೆವರಿದ್ದಿತು. ಕಣ್ಣೀರು ಸುರಿಯುತ್ತಿತ್ತು. ಎಷ್ಟೇ ಪ್ರಯತ್ನಿಸಿದರೂ ದುಃಖಿತಾಳದೆ, ನಾನು ಅಳತೊಡಗಿದೆ ಆ ಡಾಕ್ಟರು ನನ್ನ ಹಳೆಯ ವಿದ್ಯಾರ್ಥಿ.

ಅವರು ಬಿಸಿ ಬಿಸಿ ಕಾಫಿ ತಂದುಕೊಟ್ಟರು. ಮೆಲ್ಲಗೆ ಎಬ್ಬಿಸಿ ಕೂಡಿಸಿ, "ನೀವು ಹೇಳಿಕಳಿಸಿದ್ದರೆ, ನಾನೇ ನಿಮ್ಮ ಮನೆಗೆ ಬರುತ್ತಿರಲಿಲ್ಲವೇ? ಇಷ್ಟೇಕೆ ಶ್ರಮತೆಗೆದುಕೊಂಡಿರಿ? ನನ್ನಲ್ಲಿ ಏಕೆ ದಾಕ್ಷಿಣ್ಯ?" ಎನ್ನುತ್ತಾ, ರಿಕ್ಷಾದವನನ್ನು ಒಳಕ್ಕೆ ಕರೆದು ಕೆಲವು ಮಾತ್ರೆಗಳ ಪ್ಯಾಕೆಟ್, ಒಂದು ಸಿರಪ್, ಹಾಗೂ ಅವನ ಕೈಗೆ ಐದುರೂಪಾಯಿ ಕೊಟ್ಟು, "ನೋಡು, ಮೇಷ್ಟ್ರನ್ನು ಮೆಲ್ಲಗೆ ಕರೆದುಕೊಂಡು ಹೋಗಿ ಮನೆಗೆ ಮುಟ್ಟಿಸು" ಎಂದರು. ನಾನು ಎಷ್ಟೇ ಹೇಳಿದರೂ ಹಣ ತೆಗೆದುಕೊಳ್ಳಲಿಲ್ಲ.

—ಕೋಳಿವಾಡ ಕೃಷ್ಣಮೂರ್ತಿ

ಮುಂಬೈ ಮಹಾನಗರದಲ್ಲಿ ಲೋಕಲ್ ಟ್ರೇನುಗಳಲ್ಲಿ ದಿನಂಪ್ರತಿ ಕೆಲಸಕ್ಕೆ ಅಡ್ಡಾಡುವ ನೌಕರದಾರರು ಕೆಲವೊಮ್ಮೆ ಬೇರೆಯವರ ಪಾಸ್ ಹಿಡಿದುಕೊಂಡು ಟ್ರೇನಿನಲ್ಲಿ ತಿರುಗುವದುಂಟು. ಕೆಲವು ವರ್ಷಗಳ ಹಿಂದೆ ನಡೆದ ಇಂಥದೊಂದು ಘಟನೆಯಿದು.

'ಡಾ. ಗುಪ್ತಾ' ಎಂಬ ತರುಣ ಡಾಕ್ಟರ ಒಮ್ಮೆ ತಮ್ಮ ಮಿತ್ರರಾದ ಡಾಕ್ಟರ್ ಸಿಂಗ್ ಅವರ ಪಾಸ್ ಹಿಡಿದುಕೊಂಡು ಚರ್ಚ್‌ಗೇಟಿನಿಂದ ಪ್ರಯಾಣಿಸಿ ಬಾಂದ್ರಾ ಸ್ಟೇಶನ್ನಿಗೆ ಬಂದಿಳಿದಾಗ ಟಿಕೆಟ್ ಕಲೆಕ್ಟರರು, "ನಿಮ್ಮ ಟಿಕೆಟ್ ಎಲ್ಲಿ?" ಎಂದರು. ಡಾಕ್ಟರ್ ಗುಪ್ತಾ ಅವರು ತಮ್ಮ ಕೈಯಲ್ಲಿದ್ದ ಟ್ರೇನ್ ಪಾಸನ್ನು ಧೈರ್ಯದಿಂದ ತೋರಿಸಿ ತಮ್ಮದೇ ಅದು ಎನ್ನುವಂತೆ ನಟಿಸಿದರು. ಇದಕ್ಕೆ ಸೊಪ್ಪು ಹಾಕದ ಟಿಕೆಟ್ ಕಲೆಕ್ಟರ್, "ಹಾಗಾದರೆ ನಿಮ್ಮ ಸಹಿ ಮಾಡಿ ತೋರಿಸಿ," ಎಂದರು. ಈ ಮೊದಲೇ ಅನೇಕ ಸಲ ರೂಢಿಮಾಡಿಕೊಂಡಿದ್ದರಿಂದ ಟ್ರೇನ್ ಪಾಸಿನಲ್ಲಿರುವ ಸಹಿಗೆ ಸರಿಯಾಗಿ ಹೊಂದುವಂತೆ "ಡಾಕ್ಟರ್ ಸಿಂಗ್ ಎಂದು ಹಾಳೆಯೊಂದರ ಮೇಲೆ ಸಹಿ ಮಾಡಿ ಟಿಕೆಟ್ ಕಲೆಕ್ಟರನ ಮುಖಕ್ಕೆ ಹಿಡಿದರು. ಇದಕ್ಕೂ ಆ ಟಿಕೆಟ್ ಕಲೆಕ್ಟರ ಬಗ್ಗಲಿಲ್ಲ. "ಇದು ನಿಮ್ಮ ಪಾಸ್ ಅಲ್ಲ ಮತ್ತೊಬ್ಬರ ಪಾಸ್ ಹಿಡಿದುಕೊಂಡು ಪ್ರವಾಸಿಸುತ್ತಿದ್ದೀರಿ. ಅದು ಅಪರಾಧ," ಎಂದು ಸೌಮ್ಯವಾಗಿ ಎಚ್ಚರಿಸಿದಾಗ ಡಾಕ್ಟರ್ ಗುಪ್ತಾ ಅವರು "ಸಾಧ್ಯವಿಲ್ಲ. ನನ್ನ ಹೆಸರು ಡಾ. ಸಿಂಗ್. ಇದು ನನ್ನದೇ ಪಾಸು" ಎಂದು ಸಾಧಿಸಲೆತ್ನಿಸಿದರು. ಆಗ ಟಿಕೆಟ್ ಕಲೆಕ್ಟರ್ ಟ್ರೇನ್ ಪಾಸನ್ನು ಡಾ. ಗುಪ್ತಾ ಅವರ ಕೈಗೆ ತಿರುಗಿ ಕೊಡುತ್ತಾ "ಡಾ. ಗುಪ್ತಾ ಅವರೆ ನೀವು ಮುಂದೆ ಹೀಗೆ ಮಾತ್ರ ಮಾಡಬೇಡಿ ನನ್ನ ಗುರುತು ನಿಮಗೆ ಸಿಗಲಿಲ್ಲವೆ? ಆರು ತಿಂಗಳ ಹಿಂದೆ ಕೆ. ಇ. ಎಂ. ಆಸ್ಪತ್ರೆ (ಗುಪ್ತಾರವರು ಕೆಲಸ ಮಾಡುತ್ತಿದ್ದ ಆಸ್ಪತ್ರೆ) ಯಲ್ಲಿ ನೀವೇ ನನ್ನ ಅಪ್ಪೆಂಡಿಕ್ಸ್ ಆಪರೇಶನ್ ಮಾಡಿದ್ದಿರಿ" ಎಂದಾಗ, ತಮ್ಮ ನಿಜ ಸ್ವರೂಪ ಹೊರ ಬಿದ್ದ ಡಾ. ಗುಪ್ತಾ ತಬ್ಬಿಬ್ಬಾದರು.

—ರೇಣುಕಾ ದೇಶಪಾಂಡೆ

# ಮಾನವಧರ್ಮ ಘೋಷಣಾಪತ್ರ

**ಸಂಪರ್ಕ ಮಾಧ್ಯಮದಲ್ಲಾದ ಅಪೂರ್ವ ಕ್ರಾಂತಿಯಿಂದಾಗಿ ಜಗತ್ತು ತುಂಬ ಕಿರಿದಾಗಿದೆ-ಯಂತೆ. ಆದರೂ ಈ ವೈಜ್ಞಾನಿಕ ಕ್ರಾಂತಿಯ ಇನ್ನೊಂದು ಮುಖ ಇಷ್ಟು ಆಕರ್ಷಕವಾಗಿಲ್ಲ. ಇಡೀ ಮಾನವಕುಲ ತಿಳಿದೋ ತಿಳಿಯದೆಯೋ ವಿನಾಶದ ದಾರಿಯನ್ನೇ ತುಳಿಯುತ್ತಿದೆಯೇನೋ ಎಂಬ ಸಂಶಯವೂ ದಟ್ಟವಾಗಿದೆ. ಸ್ವಾರ್ಥಿಗಳು ಒಂದೆಡೆ ಎಳೆಯುತ್ತಿದ್ದರೆ, ಪ್ರಜ್ಞಾವಂತರಾದ ಕೆಲವೇ ಜನರಾದರೂ ಸರಿ ದಾರಿಯನ್ನು ತೋರಲು ಹವಣಿಸುತ್ತಿದ್ದಾರೆ. 'ಹ್ಯೂಮನಿಸ್ಟ್' ಪತ್ರಿಕೆಯ ಸದ್ಯದ ಸಂಪಾದಕ ಶ್ರೀ ಪಾಲ್ ಕುರ್ಟ್ಸ್ ಮತ್ತು ಹಿಂದಿನ ಸಂಪಾದಕ ಶ್ರೀ ಎಡ್ವಿನ್ ವಿಲ್ಸನ್ 'ಮಾನವಧರ್ಮ ಘೋಷಣಾಪತ್ರ'ವನ್ನು ಸಿದ್ಧಪಡಿಸಿದರು. ಜಗತ್ತಿನ ನೂರಿಪ್ಪತ್ತಕ್ಕೂ ಹೆಚ್ಚು ಜನ ಪ್ರಜ್ಞಾವಂತ ಬೌದ್ಧಿಕರು ಅದಕ್ಕೆ ಅಂಕಿತ ಹಾಕಿದ್ದಾರೆ. ಮುಂಬಯಿ ಹೈಕೋರ್ಟಿನ ನಿವೃತ್ತ ನ್ಯಾಯಾಧೀಶ ಶ್ರೀ ತಾರಕುಂಡೆಯವರೂ ಅವರಲ್ಲೊಬ್ಬರು. ಅವರೇ ಸಂಪಾದಿಸುತ್ತಿರುವ 'ರ್‍ಯಾಡಿಕಲ್ ಹ್ಯೂಮನಿಸ್ಟ್' ಪತ್ರಿಕೆಯಲ್ಲೂ ಇದು ಪ್ರಕಟವಾಯಿತು.**

ಕನ್ನಡಕ್ಕೆ : **ನರಸಿಂಹ ಗುಡಿ**

ಮುಂದಿನ ಶತಮಾನವು ಮಾನವ ಧರ್ಮದ ಶತಮಾನವಾಗಬಲ್ಲದು, ಆಗಬೇಕು. ವೈಜ್ಞಾನಿಕ, ತಾಂತ್ರಿಕ ಮತ್ತು ಭರದಿಂದ ಬದಲಾಗುತ್ತಿರುವ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳು ಅದ್ಭುತ ನಾಟಕದಲ್ಲಿ ಎಂಬಂತೆ ನಮ್ಮ ವಿಚಾರರಂಗವನ್ನು ತುಂಬುತ್ತಿವೆ. ನಾವು ನಮ್ಮ ಗ್ರಹವನ್ನು ಗೆದ್ದು, ಚಂದ್ರನನ್ನು ಸುತ್ತಾಡಿ ಪರಿಶೀಲಿಸಿದ್ದೇವೆ. ಪ್ರವಾಸ, ಸಂಪರ್ಕಗಳ ಸೀಮೆಗಳನ್ನು ದಾಟಿ ಮುಂದೆ ಹೋಗಿದ್ದೇವೆ. ಆಕಾಶದಲ್ಲಿ ಇನ್ನೂ ಮುಂದೆ ಹೋಗಲು ಬೇರೆ ಗ್ರಹಗಳಲ್ಲಿ ವಾಸವಾಗಲು ಸಿದ್ಧವಾದ ಹೊಸ ಯುಗವೊಂದರ ಅರುಣೋದಯವನ್ನು ಕಾಣುತ್ತಿದ್ದೇವೆ. ತಂತ್ರಜ್ಞಾನವನ್ನು ವಿವೇಕದಿಂದ ಬಳಸಿಕೊಂಡು ನಮ್ಮ ಪರಿಸರವನ್ನು ನಿಯಂತ್ರಿಸಬಲ್ಲೆವು, ದಾರಿದ್ರ್ಯ ಮತ್ತು ರೋಗ-ರುಜಿನಗಳನ್ನು ನಿವಾರಿಸಬಲ್ಲೆವು. ಮಾನವನ ಆಯುರ್ಮಾನವನ್ನು ಹೆಚ್ಚಿಸಬಲ್ಲೆವು. ನಮ್ಮ ನಡವಳಿಕೆಯನ್ನು ಸಾರ್ಥಕವಾಗುವಂತೆ ವ್ಯತ್ಯಾಸಗೊಳಿಸಬಲ್ಲೆವು. ಮಾನವಕುಲದ ವಿಕಾಸದ ದಿಶೆಯನ್ನು, ಸಂಸ್ಕೃತಿಯ ಅಭಿವೃದ್ಧಿಯ ದಿಶೆಯನ್ನು ಬದಲು ಮಾಡಬಲ್ಲೆವು, ಮಾನವಕುಲದ ಸಮೃದ್ಧ, ಸಾರ್ಥಕ ಜೀವನಕ್ಕೆ ಹಿಂದೆಂದೂ ಇಲ್ಲದ ಅವಕಾಶವನ್ನು ಒದಗಿಸಬಲ್ಲೆವು ಎಂಬ ಆತ್ಮವಿಶ್ವಾಸ ನಮಗಿದೆ.

ಆದಾಗ್ಯೂ ಭವಿಷ್ಯವು ಅಪಾಯಭರಿತವಾಗಿದೆ. ನಿಸರ್ಗ ಜೀವನಕ್ಕೂ, ಮಾನವಜೀವನಕ್ಕೂ ವೈಜ್ಞಾನಿಕ ವಿಧಾನವನ್ನು ಪ್ರಯೋಗಿಸಿದ್ದರಿಂದ ಪರಿಸರನಾಶ, ಜನಸಂಖ್ಯಾಭಾರ, ಅಮಾನುಷ ಸಂಸ್ಥೆಗಳು, ಸಾರ್ವತ್ರಿಕ ದಮನ, ವಿಕಿರಣ ಮತ್ತು ಜೀವ ರಸಾಯನಿಕಗಳಿಂದ ವಿನಾಶ ನಮ್ಮ ಮನೆಯ ತಲಬಾಗಿಲಿಗೇ ಬಂದು ನಿಂತಿದೆ. ಕಾಲ ವಿಜ್ಞಾನಿಗಳು ನುಡಿಯುವ ಭವಿಷ್ಯ ಮತ್ತು ಅಂತಿಮ ವಿನಾಶವನ್ನು ಎದುರಿಸಲಾರದೆ ಅನೇಕರು ಹತಾಶರಾಗಿ, ವಿವೇಕ ಪರಾಙ್ಮುಖರಾಗಿ, ಸರ್ವಸಂಗ ತ್ಯಜಿಸಿ ಪರಾವೃತ್ತರಾಗಬೇಕೆನ್ನುವ ಅಸಂಬದ್ಧ ಮತ, ದೇವತೆಗಳ ಆರಾಧನೆಗಳಿಗೆ

ಶರಣಾಗುತ್ತಿದ್ದಾರೆ.

ಪಾರಂಪರಿಕ ನೀತಿನಿಯಮಗಳಾಗಲಿ, ಆಧುನಿಕ ತರ್ಕಸಮ್ಮತವಲ್ಲದ ಮತಗಳಾಗಲಿ ಇಂದಿನ ಮತ್ತು ನಾಳಿನ ಅವಶ್ಯಕತೆಗಳಿಗೆ ಬೇಕಾದಷ್ಟು ಸಮರ್ಥವಿಲ್ಲ. ಆಧ್ಯಾತ್ಮ ವಾದಗಳು ಮತ್ತು ಅವತಾರ ವಾದಗಳು, ಹಳೆಯ ನಂಬಿಕೆಗಳ ಬದಲು ಹೊಸ ನಂಬಿಕೆಗಳನ್ನು ಹೇಳುತ್ತವೆಯೇ ಹೊರತು ಈಗಿನ ಜಗತ್ತಿನ ವಸ್ತುಸ್ಥಿತಿಯನ್ನು ಸಮರ್ಪಕವಾಗಿ ಎದುರಿಸಲಾರವು. ಅವು ಜನತೆಯನ್ನು ಸಂಘಟಿಸಲಾರವು.

ಮಾನವಕುಲವು ಈ ವಿಪತ್ತಿನಿಂದ ಪಾರಾಗಲು ಸಾಹಸಪೂರ್ಣ, ಧೀರ ಉಪಾಯಗಳೇ ಬೇಕು. ವೈಜ್ಞಾನಿಕ ವಿಧಾನಗಳ ಪ್ರಯೋಜನಾ ಕ್ಷೇತ್ರವನ್ನು ವಿಸ್ತರಿಸಬೇಕು. ಅವನ್ನು ಬಿಟ್ಟುಕೊಡಬಾರದು. ವಿವೇಕವನ್ನು ಸಹಾನುಭೂತಿಯೊಡನೆ ಬೆಸೆದು ಸಾಮಾಜಿಕ, ನೈತಿಕ ಮೌಲ್ಯಗಳನ್ನು ರೂಪಿಸಬೇಕು. ಎದುರಾಗಿರುವ ಅನೇಕ ಭವಿಷ್ಯಮಾರ್ಗಗಳಲ್ಲಿ ನಾವು ಅನುಸರಿಸಬೇಕಾದುದನ್ನು ನಿರ್ಧರಿಸಬೇಕು. ಅಂತಿಮ ಧ್ಯೇಯವು ಪ್ರತಿಯೊಬ್ಬ ವ್ಯಕ್ತಿಯ ಪೂರ್ಣವಿಕಾಸ. ಮಾನವರೆಲ್ಲರೂ ಪಾಲುಗಾರರಾದಂತಹ ಜಗತ್ತು ಮತ್ತು ಜಗದ್ವ್ಯಾಪಿ ಉಪಾಯಗಳು ಮಾತ್ರ ಫಲಿಸುವವು.

ಮಾನವೀಯ ದೃಷ್ಟಿಕೋನವು ಮಾತ್ರ ಪ್ರತಿ ಮಾನವನ ಸೃಜನ ಸಾಮರ್ಥ್ಯವನ್ನು ಪ್ರವರ್ತಿಸಬಲ್ಲದು. ಅದುವೇ ನಮಗೆ ಕೂಡಿ ಕೆಲಸ ಮಾಡುವಂತಹ ದೃಷ್ಟಿಯನ್ನೂ (ದರ್ಶನವನ್ನೂ), ಧೈರ್ಯವನ್ನೂ ನೀಡಬಲ್ಲದು. ತಮ್ಮ ಕಾರ್ಯರಂಗಗಳಲ್ಲಿ ಮನುಷ್ಯರು ವಹಿಸಬಹುದಾದ ಪಾತ್ರಗಳನ್ನು ಈ ದೃಷ್ಟಿಕೋನವು ಎತ್ತಿ ತೋರಿಸುತ್ತದೆ. ಮುಂದಿನ ದಶಕಗಳ ಭವಿಷ್ಯವನ್ನು ಕಾಮಿತಾರ್ಥಪ್ರದಾಯಕವಾಗಿ ರೂಪಿಸಿಕೊಳ್ಳಲಿಕ್ಕೆಂದು ಇಚ್ಛಾ, ಬುದ್ಧಿ, ಸಹಕಾರ, ಸಾಮರ್ಥ್ಯಗಳನ್ನು ನಿಷ್ಠೆಯಿಂದ ಸಮರ್ಪಿಸಬಲ್ಲ ಸ್ವಚ್ಛ ಮನಸ್ಸಿನ ಸ್ತ್ರೀ-ಪುರುಷರನ್ನು ಅದು ಆಮಂತ್ರಿಸುತ್ತದೆ. ಮಾನವಧರ್ಮವು ಬಹುಜನರು ಅರಸುತ್ತಿರುವ ಧ್ಯೇಯ ಹಾಗೂ ಸ್ಫೂರ್ತಿಗಳನ್ನು ಒದಗಿಸಬಲ್ಲದು; ಮಾನವ ಜೀವನ ವೈಯಕ್ತಿಕ ಸಾಫಲ್ಯ ನೀಡಬಲ್ಲದೆಂದೂ, ಸಾರ್ಥಕವಾದದ್ದೆಂದೂ ತೋರಿಸಬಲ್ಲದು.

ಈ ಕಾಲದಲ್ಲಿ ನಾನಾ ಪ್ರಕಾರದ ಮಾನವ ಧರ್ಮಗಳಿವೆ. ನೈಸರ್ಗಿಕ (ವೈಜ್ಞಾನಿಕ), ನೈತಿಕ, ಪ್ರಜಾತಂತ್ರೀಯ, ಮತಧರ್ಮೀಯ, ಮಾರ್ಕ್ಸ್‌ಮತೀಯ, ಮೊದಲಾದ ವೈಶಿಷ್ಟ್ಯಗಳನ್ನೂ, ವೈವಿಧ್ಯಗಳನ್ನೂ ಉಳ್ಳದ್ದಾಗಿದೆ– ಈ ಸ್ವಭಾವಸಿದ್ಧ ಮಾನವಧರ್ಮ. ಸ್ವತಂತ್ರ ವಿಚಾರವಾದ, ನಿರೀಶ್ವರವಾದ, ಅಜ್ಞೇಯವಾದ, ಸಂದೇಹವಾದ, ಅವಿಚಾರಣೀಯ (ಸಿದ್ಧಾಂತ) ದೈವವಾದ, ತರ್ಕವಾದ, ನೈತಿಕ ಸಂಸ್ಕಾರವಾದ ಮತ್ತು ಸರ್ವಧರ್ಮ ಸಮನ್ವಯವಾದ ಮೊದಲಾದವೆಲ್ಲವೂ ಮಾನವ ಧರ್ಮದ ಪರಂಪರೆ ತಮ್ಮದೆಂದು ಹೇಳಿಕೊಳ್ಳುತ್ತವೆ. ಪ್ರಾಚೀನ ಚೀನಿ, ಗ್ರೀಕ್, ರೋಮ್ ಸಂಸ್ಕೃತಿಗಳಲ್ಲಿ ಮತ್ತು ಯುರೋಪಿನ ನವಜೀವನ ಮತ್ತು ಜ್ಞಾನೋದಯ ವಿಚಾರ ಸರಣಿಗಳಲ್ಲಿ ಹಾಗೂ ಆಧುನಿಕ ಜಗತ್ತಿನ ವೈಜ್ಞಾನಿಕ ಕ್ರಾಂತಿಯಲ್ಲಿ ಮಾನವ ಧರ್ಮದ ಬೇರುಗಳಿವೆ. ಜಗತ್ತು ದೈವಲೀಲೆ ಎಂಬುದನ್ನು ನಿರಾಕರಿಸುವ ವಾದವೆಲ್ಲವೂ ಮಾನವ ಧರ್ಮವಲ್ಲ. ಮಾನವಪ್ರಗತಿಯ ಭವಿಷ್ಯಕ್ಕೂ ಅದರ ಕೇಂದ್ರ ಮೌಲ್ಯಗಳಿಗೂ ಈ ವಾದಗಳು ವಿಧಾಯಕವಾಗಿ ಬದ್ಧವಾಗಿಲ್ಲ. ಜಗತ್ತು ದೈವನಿರ್ಮಿತ ಅಥವಾ ಕರ್ಮಫಲ ಎನ್ನುವ ಮತವಾದಿಗಳಲ್ಲಿ ಈಗ ಅನೇಕರು ಮಾನವಧರ್ಮದ ಭವಿತವ್ಯದಲ್ಲಿ ವಿಶ್ವಾಸ ತಾಳಿ ತಾವೂ ಮಾನವಧರ್ಮಿಗಳೆಂದು ತಿಳಿದುಕೊಳ್ಳುತ್ತಿದ್ದಾರೆ. ಮಾನವಧರ್ಮವು ಒಂದು ನೈತಿಕ ಕ್ರಮ ಅಥವಾ ಅನುಷ್ಠಾನ. ಇದನ್ನು ನಾವೆಲ್ಲರೂ ಅನುಸರಿಸಬಹುದು. ನಮ್ಮನ್ನು ಬೇರ್ಪಡಿಸುವ ಕಾರಣಗಳನ್ನೂ ಮೀರಿ, ವ್ಯಕ್ತಿಗಳನ್ನು (ಮಹಾಪುರುಷರನ್ನು) ಮೀರಿ, ಅವಿಚಾರಣೀಯ ಸಿದ್ಧಾಂತಗಳನ್ನೂ ಮೀರಿ, ಮತ, ಸಂಪ್ರದಾಯಗಳನ್ನೂ ಮತ ಸಂಪ್ರದಾಯಗಳ ನಿರಾಕರಣೆಯನ್ನೂ ಮೀರಿ ಅನುಸರಿಸಬಹುದು.

ಸಂಯುಕ್ತ ಕಾರ್ಯಾಚರಣೆಯ ಆಧಾರವಾಗಿರುವ ಸಾಮಾನ್ಯ ತತ್ವಗಳನ್ನು ನಾವು ಘೋಷಿಸುತ್ತೇವೆ. (ಇಂದಿನ ಮಾನವನ ಸ್ಥಿತಿಗೆ ತಾರಕವಾದ) ಜಗದ್ವ್ಯಾಪಿ ಮತಾತೀತ ಮಾನವ ಸಮಾಜ ರಚನೆಯ ಸೂತ್ರಗಳಿವು.

ಈ ಉದ್ದೇಶಗಳಿಗಾಗಿ ನಾವು ಈ ಮಾನವ ಧರ್ಮ ಘೋಷಣಾ ಪತ್ರವನ್ನು ಮಾನವ ಭವಿಷ್ಯ ಕಲ್ಯಾಣಕ್ಕಾಗಿ ಸಮರ್ಪಿಸುತ್ತಿದ್ದೇವೆ. ಇದು ನಮಗೆ ನಮ್ಮ ಆಕಾಂಕ್ಷೆಗಳ ಆದರ್ಶ. ಸದ್ಯದ ಸಂಕಟವನ್ನು ಸುಖರೂಪವಾಗಿ ದಾಟಿ ಹೋಗಬೇಕಾದ ಮಾರ್ಗವೂ ಹೌದು.

## ಧರ್ಮ

I. ಅತ್ಯುನ್ನತ ನೈತಿಕ ಧ್ಯೇಯಗಳಿಗೆ ತನ್ನನ್ನು ಸಮರ್ಥಿಸಿಕೊಳ್ಳಲು ಪ್ರೋತ್ಸಾಹಿಸು-ವುದೇ ಉತ್ತಮಾರ್ಥದಲ್ಲಿ ಧರ್ಮವೆಂದೆನಿಸಿ ಕೊಳ್ಳುತ್ತದೆ. ನೈಜವಾದ ಆಧ್ಯಾತ್ಮಿಕ ಅನುಭವ, ಆಕಾಂಕ್ಷೆಗಳು ನೈತಿಕ ಶ್ರದ್ಧೆ, ಸೃಜನಶೀಲ ಕಲ್ಪನೆ ಗಳ ಪೋಷಣೆಯ ಫಲಗಳು.

ಆದರೆ ಸಾಂಪ್ರದಾಯಿಕ ಅವಿಚಾರಣೀಯಂ ಅಥವಾ ಅಧಿಕಾರಜನಿತ ಧರ್ಮಗಳು, ಅಪೌರು ಷೇಯ ಶಬ್ದವನ್ನು, ದೇವನನ್ನು, ವಿಧಿಗಳನ್ನು ಅಥವಾ ಮತಾಚಾರಗಳನ್ನು, ಮಾನವನ ಅವಶ್ಯ ಕತೆಗೆ ಅಥವಾ ಅನುಭವಗಳಿಗೆ ಮೀರಿದಂತಹವು ಎಂದು ಭಾವಿಸುತ್ತವೆ. ನಿಸರ್ಗದ ಯಾವುದೇ ವಿವರಣೆಯೂ ವೈಜ್ಞಾನಿಕ ಪರೀಕ್ಷೆಯಲ್ಲಿ ಯಶಸ್ವಿಯಾಗುವುದು ಅವಶ್ಯ. ಆದರೆ ಸಾಂಪ್ರದಾಯಿಕ ಧರ್ಮಗಳ ಸಿದ್ಧಾಂತಗಳೂ ಪೌರಾಣಿಕ ಕಲ್ಪನೆಗಳೂ ಇಂತಹ ಪರೀಕ್ಷೆಯನ್ನು ದಾಟಲಾರವು. ಮಾನವಕುಲದ ಇತಿಹಾಸ ಆರಂಭವಾಗಿ ಬಹಳ ಕಾಲ ಗತಿಸಿದ್ದರೂ ವೈಜ್ಞಾನಿಕ ವಿಮರ್ಶೆಯಿಂದ ಪುನರ್ವಿವರಣೆ ಮಾಡಬೇಕಾದ ಮೂಲಭೂತ ಸಂಗತಿಗಳು ಇನ್ನೂ ಇವೆ. ಅಲೌಕಿಕದ ಅಸ್ತಿತ್ವವನ್ನು ಸ್ಥಾಪಿಸಲು ಸಾಕ್ಷ್ಯಾಧಾರಗಳು ಸಾಕಷ್ಟಿಲ್ಲ. ಮಾನವಕುಲದ ಉಳಿವು ಗೆಲುವುಗಳ ದೃಷ್ಟಿ ಯಿಂದ ಈ ಅಲೌಕಿಕತೆಯು ಅರ್ಥಹೀನ ಇಲ್ಲವೆ ಅಸಂಬದ್ಧವಾದ ಕಲ್ಪನೆ. ನಾಸ್ತಿಕರಾದ ನಾವು ದೇವರ ಬಗೆಗಲ್ಲದೆ ಮಾನವನ ಬಗ್ಗೆ ಮತ್ತು ಅಲೌಕಿಕದ ಬಗೆಗಲ್ಲದೆ ಲೌಕಿಕದ ಬಗ್ಗೆ ವಿಚಾರಿಸುತ್ತೇವೆ. ಈ ಲೌಕಿಕ ಪ್ರಕೃತಿಯು ನಾವು ಇಂದಿನವರೆಗೆ ತಿಳಿದುದಕ್ಕಿಂತ ಗೂಢವೂ, ವಿಶಾಲವೂ ಆಗಿರಬಹುದು. ಹೊಸ ಅವಿಷ್ಕಾರ-ಗಳು ನಮ್ಮಲ್ಲಿಯ ಜ್ಞಾನವನ್ನು ಹೆಚ್ಚಿಸುತ್ತವೆ.

ಕೆಲವು ಮಾನವಧರ್ಮವಾದಿಗಳು ಸಂಪ್ರದಾಯಿಕ ಧರ್ಮಗಳನ್ನು ಈಗಿನ ಕಾಲಕ್ಕೆ ತಕ್ಕಂತೆ ಅರ್ಥೈಸಬೇಕೆಂದು ನಂಬುತ್ತಾರೆ. ಇಂತಹ ಪುನರ್ವಿವರಣೆಗಳಿಂದ ಹಳೆಯ ಪರಾಧೀನತೆ, ಪಲಾಯನ ಪ್ರವೃತ್ತಿ ಅವಿಚ್ಛಿನ್ನವಾಗಿ ಮುಂದು ವರೆದಂತಾಗುತ್ತದೆ. ಈ ವಿವರಣೆಗಳೂ ಸುಲಭ ವಾಗಿ ರಹಸ್ಯಾತ್ಮಕತೆಯನ್ನು ಬೆಳೆಸಿಕೊಂಡು ಸ್ವತಂತ್ರ ವಿಚಾರಗಳಿಗೆ ಅಡ್ಡಿಯಾಗುತ್ತವೆ.

ನಮಗೆ ಈಗ ಇವುಗಳಿಂದ ಮೂಲತಃ ಭಿನ್ನ ವಾದ ಹೊಸ ಮಾನವೀಯ ಸಂಕಲ್ಪಗಳೂ, ಧ್ಯೇಯಗಳೂ ಬೇಕಾಗಿವೆ. ಧಾರ್ಮಿಕ ಸಂಪ್ರ-ದಾಯಗಳಲ್ಲಿರುವ ಶ್ರೇಷ್ಠ ನೈತಿಕ ಉಪದೇಶ ಗಳ ಸಂರಕ್ಷಣೆಯ ಮಹತ್ವವನ್ನು ನಾವು ಅರಿತಿ-ದ್ದೇವೆ. ಏಕೆಂದರೆ, ಅವು ನಮ್ಮೆಲ್ಲರ ಸಾಮಾನ್ಯ ವಿಚಾರಗಳಾಗಿವೆ. ಆದರೆ ಮಾನವನ ಪೌರುಷದ ಮತ್ತು ಹೊಣೆಗಾರಿಕೆಯ ಮಹತ್ವವನ್ನು ನಿರಾ-ಕರಿಸುವ ಅಂಶಗಳನ್ನು ನಾವು ತಿರಸ್ಕರಿಸುತ್ತೇವೆ. ಸಾಂಪ್ರದಾಯಿಕ ಧರ್ಮಗಳು ಅನೇಕ ಪ್ರಸಂಗ ಗಳಲ್ಲಿ ಮನುಷ್ಯನಿಗೆ ಸಮಾಧಾನವನ್ನು ಕೊಟ್ಟು ಮನುಷ್ಯರಲ್ಲಿ ಪರಸ್ಪರ ಸಹಾಯ, ಸಹಕಾರ ವನ್ನೂ ಅವರು ತಮ್ಮ ಶಕ್ತಿಗಳ ವಿಕಾಸಾನುಭವ ಪಡೆಯುವುದನ್ನೂ ತಡೆಯುತ್ತವೆ. ಇಂತಹ ಸಂಸ್ಥೆಗಳು, ಮತಗಳು, ವಿಧಿಗಳು ಜನಸೇವೆಗೆ ಅಡ್ಡಿಯಾಗುತ್ತವೆ. ಸಾಂಪ್ರದಾಯಿಕ ಧರ್ಮ ಗಳು, ಸ್ವಾಧೀನತೆಗಿಂತ ಪರಾಧೀನತೆಯನ್ನೂ, ಪ್ರಜ್ಞಾಧಾರಕತೆಗಿಂತ ಅಜ್ಞಾಧಾರಕತೆಯನ್ನೂ, ಧೈರ್ಯಕ್ಕಿಂತ ಅಧೈರ್ಯವನ್ನೂ ವಿಶೇಷವಾಗಿ ಬೆಳೆಸುತ್ತವೆ. ಈ ಸಾಂಪ್ರದಾಯಿಕ ಧರ್ಮಗಳು ಸುಸಂಬದ್ಧವಾದ ಹಲವು ಸಾಮಾಜಿಕ ಕಾರ್ಯಾ ಚರಣೆಗಳ ಆರಂಭಕ್ಕೂ ಕಾರಣವಾಗಿವೆ. ಆದಾಗ್ಯೂ ಮಾನವ ಕುಲಕ್ಕೆ ದೈವೀಸಂಕಲ್ಪ

ವಾಗಲಿ, ದೈವೀವಿಧಾತ್ರವಾಗಲಿ ಇದೆಯೆಂದು ನಮಗೆ ತೋರುವುದಿಲ್ಲ. ನಮಗೆ ಗೊತ್ತಿಲ್ಲದ್ದು ಬಹಳವಿದೆ. ಆದರೂ ನಮ್ಮ ಸ್ಥಿತಿಗತಿಗಳಿಗೆ ನಾವೇ ಕಾರಣರು. ಯಾವ ದೇವತೆಯೂ ನಮ್ಮನ್ನು ಉದ್ಧರಿಸಲು ಸಾಧ್ಯವಿಲ್ಲ. ನಮ್ಮನ್ನು ನಾವೇ ಉದ್ಧರಿಸಿಕೊಳ್ಳಬೇಕು.

II. ಅಮರ ಸ್ವರ್ಗದ ಆಕಾಂಕ್ಷೆ ಅಥವಾ ಶಾಶ್ವತ ನರಕದ ಭೀತಿಗಳೆಲ್ಲ ಕೇವಲ ಭ್ರಮೆಗಳು. ಈ ಭ್ರಮೆಗಳು ಅಪಾಯಕಾರಿ ಕೂಡ. ಇವು ಮಾನವನನ್ನು ವರ್ತಮಾನ ಸ್ಥಿತಿಯಿಂದ, ವ್ಯಾವಹಾರಿಕ ಸಾಧನ ಮಾರ್ಗದಿಂದ, ಸಾಮಾಜಿಕ ಅನ್ಯಾಯಗಳ ಪರಿಹಾರೋಪಾಯಗಳಿಂದ ವಿಚಲಿತಗೊಳಿಸುತ್ತವೆ. ಆಧುನಿಕ, ವಿಜ್ಞಾನವು ಇತಿಹಾಸಕಾಲದಿಂದ ಬೆಳೆದುಬಂದ ಜೀವಾತ್ಮ, ಜಗದಾತ್ಮ ಮತ್ತು ಸೃಷ್ಟಿಕರ್ತ ಕಲ್ಪನೆಗಳನ್ನು ತಿರಸ್ಕರಿಸಿದೆ. ಮಾನವಜಾತಿಯು ನೈಸರ್ಗಿಕ ವಿಕಾಸದ ಪರಿಣಾಮವೆಂದು ವಿಜ್ಞಾನ ಪ್ರತಿಪಾದಿಸುತ್ತದೆ. ಸಮಗ್ರ ವ್ಯಕ್ತಿತ್ವವು ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ವ್ಯವಹರಿಸುತ್ತಿರುವ ಜೀವಿಯ ಕಾರ್ಯವೆಂದು ನಮ್ಮ ತಿಳುವಳಿಕೆ. ದೇಹ ನಾಶದ ನಂತರ ಜೀವ ಉಳಿಯುವುದೆಂಬುದಕ್ಕೆ ನಂಬಲರ್ಹವಾದ ಸಾಕ್ಷ್ಯಾಧಾರಗಳಿಲ್ಲ. ನಮ್ಮ ಸಂತಾನದ ಮೂಲಕವೇ ನಾವು ಚಿರಂಜೀವಿಯಾಗುತ್ತೇವೆ.

ಮಾನವ ಪ್ರಗತಿಗೆ ಸಾಂಪ್ರದಾಯಿಕ ಧರ್ಮಗಳಷ್ಟೇ ಅಲ್ಲ, ಇತರ ವಿಚಾರವಾದಗಳೂ ಅಡ್ಡಿಯಾಗಿವೆ. ಕೆಲ ರಾಜಕೀಯ ಮತಗಳು ಧಾರ್ಮಿಕ ಮತಗಳಂತೆಯೇ ಪ್ರವರ್ತಿಸುತ್ತವೆ. ವ್ಯಕ್ತಿಯನ್ನು ಕಲ್ಪನಾಲೋಕದ ಆಶ್ವಾಸನೆಗಳಿಗಾಗಿ ಬಲಿಕೊಡುತ್ತ ಮತೀಯ ಆಗ್ರಹ, ನಿಗ್ರಹಗಳ ಅತಿ ದುಷ್ಟ ಲಕ್ಷಣಗಳನ್ನು ಇವು ಪ್ರದರ್ಶಿಸುತ್ತವೆ. ಆರ್ಥಿಕ ಮತ್ತು ರಾಜಕೀಯ ದೃಷ್ಟಿಕೋನಗಳು— ಬಂಡವಾಳಶಾಹಿ ಅಥವಾ ಕಮ್ಯುನಿಸಂ— ಮತಾಂಧ ಧಾರ್ಮಿಕತೆಯಂತೆಯೇ ವರ್ತಿಸುತ್ತವೆ. ಮನುಷ್ಯರಿಗೆ ಆರ್ಥಿಕ, ರಾಜಕೀಯ ಧ್ಯೇಯಗಳು ಅವಶ್ಯವಾಗಿದ್ದರೂ ಬಾಳಲು ಸೃಜನಶೀಲ ಮೌಲ್ಯಗಳೂ ಬೇಕು.

## ನೀತಿ—ಸದಾಚಾರ

III ನೈತಿಕ ಮೌಲ್ಯಗಳು ಮಾನವೀಯ ಅನುಭವದಿಂದ ಹುಟ್ಟುತ್ತವೆಯೆಂದು ನಾವು ಪ್ರತಿಪಾದಿಸುತ್ತೇವೆ. ಸದಾಚಾರವು, ಸ್ವತಂತ್ರವೂ ಸ್ಥಿತ್ಯಾನುಸಾರಿಯೂ ಆಗಿದ್ದು, ಅದಕ್ಕೆ ದೈವೀ ಅಥವಾ ಸೈದ್ಧಾಂತಿಕ ಮಾನ್ಯತೆ ಬೇಕಿಲ್ಲ. ಮಾನವೀಯ ಆಸಕ್ತಿ ಮತ್ತು ಅಗತ್ಯಗಳಿಂದ ಅದು ಸ್ಫುರಿಸುತ್ತದೆ. ಇದನ್ನು ನಿರಾಕರಿಸುವುದರಿಂದ ಜೀವನದ ಅಡಿಪಾಯವೇ ವಿಕೃತವಾಗುತ್ತದೆ. ನಾವು ನಮ್ಮ ಭವಿಷ್ಯದ ಸೃಷ್ಟಿಕರ್ತರು, ಪೋಷಣಕರ್ತರು ಎಂಬ ಕಾರಣದಿಂದಲೇ ಜೀವನಕ್ಕೆ ಅರ್ಥವಿದೆ. ವೈಯಕ್ತಿಕ ಹಾಗೂ ಸಬಾಂಧವ ಮಾನವೀಯ ಅಗತ್ಯ- ಆಕಾಂಕ್ಷೆಗಳ ಈಡೇರಿಕೆಯೂ ಸೌಖ್ಯವೂ ಮಾನವಧರ್ಮದ ಮುಖ್ಯ ಉದ್ದೇಶ. ಈಗ ಇಲ್ಲಿ ಸುಖೀಜೀವನಕ್ಕಾಗಿ ನಾವು ಯತ್ನಿಸುತ್ತೇವೆ. ದುಷ್ಟ ಶಕ್ತಿಗಳ ವಿರೋಧ ಸಾಕಷ್ಟಿದ್ದರೂ ಜೀವನವನ್ನು ಸಮೃದ್ಧಗೊಳಿಸುವುದೇ ನಮ್ಮ ಗುರಿಯಾಗಿದೆ.

IV. ಬುದ್ಧಿ, ವಿವೇಕ ಸಾಮರ್ಥ್ಯಗಳು ಮಾನವಕುಲದ ಅತ್ಯಂತ ಪರಿಣಾಮಕಾರಿ ಸಾಧನೆಗಳು. ಶ್ರದ್ಧೆ, ಭಾವೋತ್ಕಟತೆಗಳು ಇವುಗಳಿಗೆ ಸಾಟಿಯಲ್ಲ. ನವೋದಯದ ಕಾಲದಿಂದ ಸಾಮಾಜಿಕ ಹಾಗೂ ನೈಸರ್ಗಿಕ ವಿಜ್ಞಾನಗಳನ್ನು ಅಭಿವೃದ್ಧಿಪಡಿಸುತ್ತ ಬಂದಿರುವ ವೈಜ್ಞಾನಿಕ ವಿಧಾನಗಳನ್ನು ಮಾನವನ ಸಮಸ್ಯೆಗಳನ್ನು ಬಿಡಿಸುವುದಕ್ಕೆ ಬಳಸಬೇಕು. ವಿವೇಕ, ಸದಾಚಾರಗಳು ಯಾರೊಬ್ಬರ ಅಥವಾ ಯಾವುದೇ ಒಂದು ಗುಂಪಿನ ಸೊತ್ತಲ್ಲವಾದ್ದರಿಂದ ಬುದ್ಧಿಯ ತೀಕ್ಷ್ಣತೆಯನ್ನು ಸೌಜನ್ಯದಿಂದ ಸಮರಸಗೊಳಿಸಬೇಕು. ಎಲ್ಲ ಸಮಸ್ಯೆಗಳಿಗೂ ಪರಿಹಾರ ಸಾಧ್ಯ ಎಂಬ ಭರವಸೆಯೇನೂ ಇಲ್ಲ. ಆದರೂ ಬಾಂಧವರಿಗಾಗಿ ಸಹಾನುಭೂತಿಯಿಂದ ಕೂಡಿದ

ವಿಮರ್ಶನಶೀಲ ಬುದ್ಧಿಯೊಂದೇ ಮಾನವಜಾತಿಗಿರುವ ಸಮಸ್ಯಾ ಪರಿಹಾರದ ಶ್ರೇಷ್ಠ ಉಪಾಯ. ಬುದ್ಧಿಚಾತುರ್ಯದ ಜೊತೆ ಅನುಕಂಪವೂ, ಪರರ ಬಗ್ಗೆ ಸಹಾನುಭೂತಿಯೂ ಸೇರಿಕೊಂಡು ವ್ಯಕ್ತಿತ್ವದ ಸಾಫಲ್ಯವಾಗಬೇಕು. ಪ್ರೇಮ ಮತ್ತು ಸಂವೇದನಾಶೀಲತೆಯ ಪೋಷಣೆಯಾಗಬೇಕೆಂದು ನಂಬುವ ನಾವು, ವೈಜ್ಞಾನಿಕ ಬುದ್ಧಿ ಕೌಶಲ್ಯವು ಭಾವಜೀವಕ್ಕೆ ವಿರುದ್ಧವಾಗಿದೆ ಎಂದು ಹೇಳುವುದಿಲ್ಲ. ವಿಜ್ಞಾನವು ಜ್ಞಾನದ ಸೀಮೆಯನ್ನು ವಿಸ್ತರಿಸುತ್ತ ಹೋದಂತೆ ಮಾನವನ ವಿಸ್ಮಯಾನುಭವ ನಿತ್ಯನಾವೀನ್ಯವನ್ನು ಪಡೆಯುವುದು. ಕಲೆ, ಕಾವ್ಯ, ಸಂಗೀತಗಳು ಧರ್ಮ ಮತ್ತು ನೀತಿಶಾಸ್ತ್ರಗಳೊಡನೆ ಸ್ಥಾನ ಪಡೆಯುತ್ತವೆ.

## ವ್ಯಕ್ತಿ

V. ವ್ಯಕ್ತಿಯ ಗೌರವವು ಮಾನವೀಯ ಮೌಲ್ಯಗಳ ಕೇಂದ್ರ. ವ್ಯಕ್ತಿಗಳಿಗೆ ತಮ್ಮ ಕೌಶಲ್ಯ ಹಾಗೂ ಅಭಿಲಾಷೆಗಳನ್ನು ಸಫಲಗೊಳಿಸಿಕೊಳ್ಳಲು ಪ್ರೋತ್ಸಾಹ ಬೇಕು. ವ್ಯಕ್ತಿಯನ್ನು ಅಂಧಕಾರಕ್ಕೆ ತಳ್ಳುವ, ಅವನ ಸ್ವಾತಂತ್ರ್ಯವನ್ನು ಹತ್ತಿಕ್ಕುವ, ಬುದ್ಧಿಮಂದಗೊಳಿಸುವ, ವ್ಯಕ್ತಿತ್ವವನ್ನು ಅಮಾನುಷಗೊಳಿಸುವ ಯಾವುದೇ ಧಾರ್ಮಿಕ, ಮತೀಯ ಅಥವಾ ನೈತಿಕ ಆಚಾರ ಸಂಹಿತೆಗಳನ್ನು ನಾವು ತಿರಸ್ಕರಿಸುತ್ತೇವೆ. ಸಾಮಾಜಿಕ ಹೊಣೆಗಾರಿಕೆಗೆ ಸುಸಂಗತವಾದ ಪರಮಾವಧಿ ವ್ಯಕ್ತಿಸ್ವಾತಂತ್ರ್ಯವನ್ನು ನಾವು ನಂಬುತ್ತೇವೆ. ವಿಜ್ಞಾನವು ಮಾನವನ ನಡವಳಿಕೆಗೆ ಕಾರಣಗಳನ್ನು ನೀಡಬಹುದು. ಆದರೆ ಮಾನವನ ಜೀವನದಲ್ಲಿ ಇಚ್ಛಾಸ್ವಾತಂತ್ರ್ಯಕ್ಕೆ ಅವಕಾಶಗಳಿದ್ದು, ಅವನ್ನು ಹೆಚ್ಚಿಸುವುದು ಮುಖ್ಯ.

## ಸ್ತ್ರೀ-ಪುರುಷ ಸಂಬಂಧ

VI. ಸಹನಾರಹಿತಪ್ರವೃತ್ತಿಗಳು, ಸಂಪ್ರದಾಯನಿಷ್ಠ ಧರ್ಮಗಳಿಂದ ಮತ್ತು ನೀತಿ ಸಂಸ್ಕಾರಗಳಿಂದ ಪ್ರೇರಣೆ ಪಡೆದು ಸ್ತ್ರೀ- ಪುರುಷ ಸಂಬಂಧಗಳನ್ನು ನಿಗ್ರಹಿಸುತ್ತವೆ. ಜನನ ನಿಯಂತ್ರಣ, ಗರ್ಭಪಾತ ಮತ್ತು ವಿವಾಹ ವಿಚ್ಛೇದನದ ಹಕ್ಕುಗಳನ್ನು ಮನ್ನಿಸುವುದು ಮುಖ್ಯವಾದುದು. ಶೋಷಕ ಅಥವಾ ಅಧೋಗತಿಗಿಳಿಸುವ ಲೈಂಗಿಕ ವ್ಯವಹಾರಗಳನ್ನು ನಾವು ಮನ್ನಿಸುವುದಿಲ್ಲ. ಆದರೆ ಪ್ರೌಢರ ಲೈಂಗಿಕ ಸ್ವಾತಂತ್ರ್ಯವನ್ನು ಮನ್ನಿಸುತ್ತೇವೆ. ಲೈಂಗಿಕಾನುಭವಗಳಲ್ಲಿಯ ವೈವಿಧ್ಯವನ್ನು ಹೇಗಿದ್ದರೂ ದುಷ್ಟ ಎಂದು ತಿಳಿಯಲಾಗದು. ಬುದ್ಧಿಹೀನ ಅನುಮೋದನೆಯನ್ನು ಅಥವಾ ಅನಿಯಂತ್ರಿತ ಸ್ವೇಚ್ಛಾಚಾರವನ್ನು ಮೆಚ್ಚಬಾರದಾದರೂ, ನಾಗರಿಕ ಸಮಾಜದಲ್ಲಿ ಸಹನೆ ಇರಬೇಕು. ಪರರಿಗೆ ಕೇಡು ಮಾಡದಂತೆ, ತಮ್ಮಂತೆ ಇರಲು ಇತರರನ್ನು ಒತ್ತಾಯಿಸದಂತೆ, ವ್ಯಕ್ತಿಗಳು ತಮ್ಮ ಲೈಂಗಿಕ ಆಸೆ-ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಅವಕಾಶವಿರಬೇಕು. ಲೈಂಗಿಕ ವಿಷಯದಲ್ಲಿ ಹೊಣೆಗಾರಿಕೆ ಪ್ರವೃತ್ತಿ ಬೆಳೆಯಬೇಕು. ಇದರಿಂದ ಮಾನವರನ್ನು ಭೋಗವಸ್ತುವೆಂದು ಶೋಷಿಸುವುದು ತಪ್ಪುತ್ತದೆ. ಅಲ್ಲದೆ, ಸ್ನಿಗ್ಧತೆ, ಸಂವೇದನೆ, ಗೌರವ ಮತ್ತು ಪ್ರಾಮಾಣಿಕತನಗಳು ವ್ಯಕ್ತಿಗಳ ಸಂಬಂಧದಲ್ಲಿ ಪ್ರೋತ್ಸಾಹ ಪಡೆಯುತ್ತವೆ. ಲೈಂಗಿಕ ವಿಷಯದಲ್ಲಿ ಪ್ರೌಢರಾಗಲು ಎಲ್ಲರಿಗೂ ನೈತಿಕ ಶಿಕ್ಷಣ ನೀಡುವುದು ಅಗತ್ಯ.

## ಲೋಕತಂತ್ರ ಸಮಾಜ

VII. ಸ್ವಾತಂತ್ರ್ಯ ಮತ್ತು ಗೌರವ ವರ್ಧನೆಗಾಗಿ ವ್ಯಕ್ತಿಗಳು ಎಲ್ಲ ಸಂಘಗಳಲ್ಲಿಯೂ ಪೂರ್ಣ, ಸಭ್ಯ ಸ್ವಾತಂತ್ರ್ಯ ಅನುಭವಿಸಬೇಕು. ಇದರಲ್ಲಿ ಭಾಷಣ ಮತ್ತು ಮುದ್ರಣ ಸ್ವಾತಂತ್ರ್ಯ, ರಾಜಕೀಯ ಲೋಕತಂತ್ರ, ಸರಕಾರಿ ಧೋರಣೆಯನ್ನು ವಿರೋಧಿಸುವ ಶಾಸನ ದತ್ತ ಹಕ್ಕು, ನ್ಯಾಯವಾದ ವಿಧಿಗಳ ಮೂಲಕ ನ್ಯಾಯ ವಿಚಾರಣೆಯ ಅಧಿಕಾರ, ಧರ್ಮಾನುಸರಣೆಯ ಅಧಿಕಾರ, ಸಂಘಟನಾಧಿಕಾರ, ಕಲೆ,

ವಿಜ್ಞಾನ ಮತ್ತು ಸಾಂಸ್ಕೃತಿಕ ಸ್ವಾತಂತ್ರ್ಯಗಳು ಅಡಕವಾಗಿವೆ. ವ್ಯಕ್ತಿಗೆ ಗೌರವ, ಸಾಯುವ ಹಕ್ಕು ಇದೆ. ಯಾತನೆಯಿಂದ ಮುಕ್ತಿ ಪಡೆಯಲು ಮರಣವನ್ನು ತಂದುಕೊಳ್ಳುವ, ಆತ್ಮಹತ್ಯೆ ಮಾಡಿಕೊಳ್ಳುವ ಅಧಿಕಾರವಿದೆ. ಯಾವುದೇ ವಿಧಾನದಿಂದ ಸರ್ವೈಕತಂತ್ರ ಸಮಾಜದಲ್ಲಾಗಲಿ, ಲೋಕತಂತ್ರ ಸಮಾಜದಲ್ಲಾಗಲಿ ವ್ಯಕ್ತಿಗಳ ಏಕಾಂತ ಭಂಗವನ್ನು ನಾವು ವಿರೋಧಿಸುತ್ತೇವೆ. ಮ್ಯಾಗ್ನಾ ಕಾರ್ಟಾ, ಬಿಲ್ ಆಫ್ ರೈಟ್ಸ್ ಮತ್ತು ಮಾನವೀಯ ಹಕ್ಕುಗಳ ಜಾಗತಿಕ ಘೋಷಣೆಗಳಲ್ಲಿ ಪ್ರತಿಪಾದಿತವಾದ ಮಾನವ ಸ್ವಾತಂತ್ರ್ಯದ ತತ್ವಗಳನ್ನು ಸಂರಕ್ಷಿಸಲು, ವ್ಯಾಪ್ತಿಯನ್ನು ವಿಸ್ತರಿಸಲು ಮತ್ತು ಕಾರ್ಯಗತ ಮಾಡಲು ನಾವು ಬಯಸುತ್ತೇವೆ.

VIII. ಮುಕ್ತವಾದ ಲೋಕತಂತ್ರ ಸಮಾಜ ನಿರ್ಮಾಣಕ್ಕೆ ನಾವು ಪ್ರತಿಜ್ಞಾಬದ್ಧರು. ಪ್ರತಿಯೊಬ್ಬರಿಗೂ ಭಾಗವಹಿಸಲು ಅವಕಾಶವಿರುವಂತಹ ಲೋಕತಂತ್ರದ ಮೂಲಕ ನಮ್ಮ ಅರ್ಥವ್ಯವಸ್ಥೆ, ಕುಟುಂಬ, ಕಾರ್ಯಾಗಾರ ಮತ್ತು ಸ್ವಯಂಪ್ರೇರಿತ ಸಂಘಗಳನ್ನು ವಿಸ್ತರಿಸಬೇಕು. ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಯ ಎಲ್ಲ ಘಟ್ಟಗಳಲ್ಲಿಯೂ ಜನತೆಯು ನಿರ್ಣಯ ತೆಗೆದುಕೊಳ್ಳುವಂತೆ ನಿರ್ಣಯಾಧಿಕಾರವು ವಿಕೇಂದ್ರಿಕೃತವಾಗಬೇಕು. ಈ ಸಂಘಗಳು ಜನರ ಆಕಾಂಕ್ಷೆಗಳಿಗೆ, ಅಗತ್ಯಗಳಿಗೆ ಅನುಸಾರವಾಗಿ ಕಾರ್ಯ ನಿರ್ವಹಿಸಬೇಕು. ಕೆಲಸ, ಶಿಕ್ಷಣ, ಧಾರ್ಮಿಕ ಆಚಾರ ಮತ್ತು ಕ್ರೀಡೆಗಳು ಮಾನುಷವಾಗಿರಬೇಕು. ಜನರಲ್ಲಿ ಪ್ರತ್ಯೇಕತಾ ಭಾವನೆಯನ್ನು ಬೆಳೆಸುವ ದುಷ್ಟ ಶಕ್ತಿಗಳನ್ನು ನಾಶ ಮಾಡಬೇಕು. ಅಧಿಕಾರಶಾಹಿ ಪ್ರವೃತ್ತಿ ಕಡಿಮೆಯಾಗಬೇಕು. ಮತಾಚಾರಗಳ ತತ್ವ ನಿಯಮಗಳಿಗಿಂತ ಮಾನವನ ಮಹತ್ವ ಹೆಚ್ಚಿನದು.

IX. ರಾಜ್ಯಾಧಿಕಾರದಿಂದ, ಮತ ಧರ್ಮ ಮತ್ತು ರಾಜಕೀಯ ತತ್ವವಾದಗಳು ಪ್ರತ್ಯೇಕವಾಗಿರುವುದು ಅತ್ಯವಶ್ಯ. ರಾಜ್ಯಾಧಿಕಾರವು ಸಮಾಜದಲ್ಲಿ ನೈತಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ಮೌಲ್ಯಗಳ ವಿಷಯದಲ್ಲಿ ಪರಮಾವಧಿ ಸ್ವಾತಂತ್ರ್ಯವನ್ನು ಪ್ರೋತ್ಸಾಹಿಸಬೇಕು. ಯಾವುದೇ ಮತ, ಧರ್ಮ ಸಂಸ್ಥೆಗಳಿಗೆ ವಿಶೇಷ ಪ್ರೋತ್ಸಾಹ ನೀಡಬಾರದು. ಅಲ್ಲದೇ ಯಾವುದಾದರೊಂದು ರಾಜಕೀಯ ತತ್ವವಾದಕ್ಕೆ ಅನುಕೂಲತೆಗಳನ್ನು ಕಲ್ಪಿಸಿ, ಅದನ್ನೊಂದು ಪ್ರಚಾರ ಸಾಧನ ಮತ್ತು ವಿರೋಧಿಗಳನ್ನು ಬಗ್ಗು ಬಡಿಯುವ ಸಾಧನವನ್ನಾಗಿ ಮಾಡಿಕೊಳ್ಳಬಾರದು.

X. ಮಾನವಸಮಾಜ ಆರ್ಥಿಕ ವ್ಯವಸ್ಥೆಯ ಮೌಲ್ಯಮಾಪನೆ ಮಾಡುವಾಗ ತತ್ವವಾದ, ವಾಗಾಡಂಬರಗಳಿಗೆ ಬೆಲೆ ನೀಡಬಾರದು. ಪ್ರತಿಯೊಬ್ಬ ವ್ಯಕ್ತಿಯ ಆರ್ಥಿಕ ಸ್ಥಿತಿ ಸುಧಾರಣೆಯೇ ಆ ವ್ಯವಸ್ಥೆಯ ಮುಖ್ಯ ಉದ್ದೇಶವಾಗಬೇಕು. ಆದ್ದರಿಂದ ಆರ್ಥಿಕ ವ್ಯವಸ್ಥೆಯಲ್ಲಿ ಹೊಸ ಪ್ರಯೋಗಗಳಿಗೆ ಅವಕಾಶವಿದೆ.




"ಕನ್ಯಾದಾನ ಮಾಡಿದಕ್ಕೆ ಬಂದ ಪ್ರತಿಫಲ ಏನು ಅಂದ್ರಾ... ಕೈ ತುಂಬಾ ಸಾಲ."

ಸಾಮಾನ್ಯ ಕಲ್ಯಾಣವು ಅದರ ಫಲಗಳನ್ನು ಪರೀಕ್ಷಿಸುವ ಒರೆಗಲ್ಲಾಗಬೇಕು.

XI. ಕುಲ, ಧರ್ಮ, ಲಿಂಗ, ವಯಸ್ಸು ಅಥವಾ ಜನ್ಮಭೂಮಿಗಳ ಆಧಾರಜನಿತವಾದ ಎಲ್ಲ ಪಕ್ಷಪಾತಗಳನ್ನೂ ತೊಡೆದುಹಾಕಿ ನೈತಿಕ ಸಮಾನತೆಯ ತತ್ವವನ್ನು ಪ್ರಚುರಪಡಿಸಬೇಕು. ಎಲ್ಲರಿಗೂ ಸಮಾನ ಅವಕಾಶವಿರಬೇಕು. ಯೋಗ್ಯತೆಗೆ ಮನ್ನಣೆಯಿರಬೇಕು. ಇದು ಪ್ರತಿಯೊಬ್ಬನಿಗೂ ಪ್ರೋತ್ಸಾಹ ನೀಡುತ್ತದೆ. ಅಸಮರ್ಥರಾದವರ ಶಾರೀರಿಕ ಮತ್ತು ಸಾಂಸ್ಕೃತಿಕ ಅವಶ್ಯಕತೆಗಳನ್ನು ಸಮಾಜ ಪೂರೈಸಬೇಕು. ದೈಹಿಕವಾಗಿ ಅಥವಾ ಮಾನಸಿಕವಾಗಿ ಅಸ್ವಸ್ಥರಾದವರು, ಕೈದಿಗಳು, ಮಾದಕ ವಸ್ತುಗಳ ದಾಸರು, ಇಂಥ ಸಮಾಜದಿಂದ ದುರ್ಲಕ್ಷಿಸಲ್ಪಟ್ಟ ಅಥವಾ ಸಮಾಜದ ಲಕ್ಷ್ಯಕ್ಕೇ ಬಾರದೇ ಉಳಿದವರ ಕ್ಷೇಮಕ್ಕಾಗಿ ನಾವು ಕಾತರರಾಗಿದ್ದೇವೆ. ಮಾನವಧರ್ಮದ ಆಚರಣಶೀಲರು ವ್ಯಕ್ತಿಸಂಬಂಧಗಳನ್ನು ಮಾನವ ಸಹಜವಾಗುವಂತೆ ಮಾಡುವ ಪ್ರವೃತ್ತಿಯುಳ್ಳವರಾಗಬೇಕು.

ಎಲ್ಲರಿಗೂ ಅವರವರ ಯೋಗ್ಯತೆಗನುಸಾರವಾಗಿ ಶಿಕ್ಷಣ ಪಡೆಯುವ ಹಕ್ಕಿದೆ. ಶಾಲೆಗಳು ಯಶಸ್ವಿ ಜೀವನದ ಬುನಾದಿಯಾಗಬೇಕು. ಎಲ್ಲ ಮಟ್ಟಗಳಲ್ಲಿಯೂ ಅವು ಹಸ್ತಕ್ಷೇಪದಿಂದ ಮುಕ್ತವಿರಬೇಕು. ಮಹತ್ಸಾಧನೆಯನ್ನು ಪ್ರಶಂಸಿಸಬೇಕು. ನೂತನ ಮತ್ತು ಪ್ರಾಯೋಗಿಕ ಶಿಕ್ಷಣ ಕ್ರಮಗಳನ್ನು ಅವು ಸ್ವಾಗತಿಸಬೇಕು. ಯುವಕರ ಉತ್ಸಾಹ, ಆದರ್ಶಾಪೇಕ್ಷೆಗಳನ್ನು ಗುರುತಿಸಿ ವಿಧಾಯಕ ಧ್ಯೇಯಗಳತ್ತ ಅವನ್ನು ಪ್ರವರ್ತಿಸಬೇಕು.

ಬುಡಕಟ್ಟು, ಮತಧರ್ಮ, ಕುಲನಿಷ್ಠೆ ಅಥವಾ ವರ್ಗಗಳ ವಿರೋಧ ಶೋಚನೀಯವಾದುದು. ಸಾಂಸ್ಕೃತಿಕ ವೈವಿಧ್ಯ, ಬುಡಕಟ್ಟು ಮತ್ತು ಕಲೆಯ ಬಗೆಗಿರುವ ಅಭಿಮಾನವನ್ನು ಪ್ರೋತ್ಸಾಹಿಸಬೇಕು. ಜನತೆಗೆ ಸ್ವೇಚ್ಛೆಯಿಂದ ಸಂಘಟನೆ ಮಾಡಿಕೊಳ್ಳಲು ಪರಮಾವಧಿ ಸ್ವಾತಂತ್ರ್ಯವಿರುವ, ಭಾವೈಕ್ಯ ಹೊಂದಿದ ಸಮಾಜವು ನಮ್ಮ ಆದರ್ಶ.

ಸ್ತ್ರೀ-ಪುರುಷ ಸಂಬಂಧಗಳು ಸ್ವೈರಾಚಾರಕ್ಕೆಡೆ ಮಾಡಿಕೊಡಬಾರದು. ಸ್ತ್ರೀಯಾಗಲಿ, ಪುರುಷನಾಗಲಿ ತಮ್ಮ ವಿಶಿಷ್ಟ ವೃತ್ತಿಜೀವನವನ್ನನುಸರಿಸಲು ಅಧಿಕಾರವುಳ್ಳವರೆಂದು ನಾವು ನಂಬುತ್ತೇವೆ.

XII. ಮಾನವಸಮುದಾಯವು ರಾಷ್ಟ್ರಭೇದಕ್ಕಾಗಿ ಒಡೆದು ಹೋಗಿದ್ದು ನಮ್ಮ ಮನ ನೋಯುತ್ತಿದೆ. ಈಗ ನಾವು ರಾಷ್ಟ್ರ-ರಾಷ್ಟ್ರಗಳ ಬಂಧನವನ್ನು ದಾಟಿ, ಒಂದು ಜಾಗತಿಕ ಸಮಾಜ ರಚಿಸಿ, ಮಾನವ ಇತಿಹಾಸದ ದಿಕ್ಕನ್ನೇ ಬದಲಿಸಬೇಕಾಗಿದೆ. ರಾಷ್ಟ್ರಾತೀತ ಸಂಯುಕ್ತ ಸರಕಾರ ರಚನೆಯಾಗಿ, ಜಾಗತಿಕ ಕಾನೂನು ಮತ್ತು ವ್ಯವಸ್ಥೆಯು ಅಭಿವೃದ್ಧಿಯಾಗುವುದನ್ನು ನಾವು ಎದುರುನೋಡುತ್ತಿದ್ದೇವೆ. ಈ ಸಮಾಜದಲ್ಲಿ ಸಂಸ್ಕೃತಿಯ ಬಾಹುಲ್ಯಕ್ಕೂ, ವೈವಿಧ್ಯಕ್ಕೂ ಮಾನ್ಯತೆ ದೊರೆಯುತ್ತದೆ. ಜನ್ಮಭೂಮಿ ಮತ್ತು ರಾಷ್ಟ್ರೀಯ ಸಾಧನೆಗಳ ಬಗ್ಗೆ ಹೆಮ್ಮೆ ಮತ್ತು ಪ್ರಾದೇಶಿಕ ಸಮಸ್ಯೆಗಳಿಗೆ ಪ್ರಾದೇಶಿಕ ಪರಿಹಾರ ಇರಬಾರದೆಂಬುದು ಇದರರ್ಥವಲ್ಲ. ಆದರೆ ಜಗತ್ತಿನ ಯಾವುದಾದರೊಂದು ಭಾಗದ ಅಭಿವೃದ್ಧಿಯ ಮೂಲಕ ಮಾನವ ಪ್ರಗತಿ ಸಾಧ್ಯವಿಲ್ಲ. ಮಾನವ ಕುಲದ ಇತಿಹಾಸದಲ್ಲಿ ಪ್ರಥಮ ಬಾರಿಗೆ ಮಾನವಕುಲದ ವಿಭಜನೆ ಮತ್ತು ಪ್ರತ್ಯೇಕೀಕರಣ ಅಶಕ್ಯವಾಗಿದೆ. ಪ್ರತಿಯೊಬ್ಬನ ಭವಿಷ್ಯ ಇತರರ ಭವಿಷ್ಯದೊಂದಿಗೆ ತೊಡಕಿಕೊಂಡಿದೆ. ಆದ್ದರಿಂದ ಜಾಗತಿಕ ಸಮಾಜ ರಚನೆಗೆ ನಾವು ಬದ್ಧರಿದ್ದು ಅದಕ್ಕಾಗಿ ನಾವು ಅನುಸರಿಸಬೇಕಾದ ಮಾರ್ಗ ದುರ್ಗಮವೆಂದು ಭಾವಿಸುತ್ತೇವೆ.

XIII. ಈ ಜಾಗತಿಕ ಸಮಾಜವು ಅಂತಾ-ರಾಷ್ಟ್ರೀಯ ವಿವಾದಗಳ ಪರಿಹಾರಕ್ಕೆ, ಬಲ ಪ್ರಯೋಗ ಮತ್ತು ಹಿಂಸಾಕೃತ್ಯಗಳಲ್ಲಿ ತೊಡಗುವುದನ್ನು ತ್ಯಜಿಸಬೇಕು. ಅಂತಾ-

ರಾಷ್ಟ್ರೀಯ ನ್ಯಾಯಾಲಯುಗಳ ಶಾಂತಿ ನಿರ್ಣಯುಗಳು ಮತ್ತು ಸಂಧಾನ ಮಾರ್ಗಗಳೇ ಇಂಥ ವಿವಾದಗಳ ಪರಿಹಾರೋಪಾಯುಗಳು. ಯುದ್ಧ ಅವ್ಯವಹಾರ್ಯ. ಆದ್ದರಿಂದ ಅಣ್ವಸ್ತ್ರ, ರಾಸಾಯನಿಕ ಅಸ್ತ್ರಗಳಂತಹ ಮಾರಕಾಸ್ತ್ರಗಳ ಉತ್ಪಾದನೆ ವೆಚ್ಚ ಮತ್ತು ಸೈನಿಕ ವೆಚ್ಚಗಳನ್ನು ಉಳಿಸಿ ಶಾಂತಿಗಾಗಿ, ಮಾನವನ ಅಭಿವೃದ್ಧಿಗಾಗಿ ಆ ಸಂಪತ್ತನ್ನು ಬಳಸುವದು ಅತ್ಯವಶ್ಯ.

XIV. ಜಾಗತಿಕ ಸಮುದಾಯವು ಭರದಿಂದ ಕರಗುತ್ತಿರುವ ಸಾಧನ ಸಾಮುಗ್ರಿಗಳ ವಿನಿಯೋಗವನ್ನು ಸಹಕಾರಿ ಯೋಜನೆಯಂತೆ ಮಾಡಬೇಕಾಗಿದೆ. ಭೂಮಿಯನ್ನು ಅಖಂಡ ಮತ್ತು ಅವಿಭಾಜ್ಯ ವ್ಯವಸ್ಥೆಯೆಂದು ಭಾವಿಸಬೇಕು. ಜೈವಿಕ ಆವರಣಕ್ಕೆ ಅಪಾಯ, ನೈಸರ್ಗಿಕ ಸಂಪತ್ತಿನ ನಾಶ ಮತ್ತು ಜನಸಂಖ್ಯಾ ಸ್ಫೋಟವನ್ನು ಅಂತಾರಾಷ್ಟ್ರೀಯ ಸಹಮತದಿಂದ ತಡೆಯಬೇಕು. ನಿಸರ್ಗವನ್ನು ರಕ್ಷಿಸುವುದೂ, ಅಭಿವೃದ್ಧಿಪಡಿಸುವುದೂ ಒಂದು ನೈತಿಕ ಮೌಲ್ಯ. ನಾವು ನಿಸರ್ಗದ ಅವಿಭಾಜ್ಯ ಅಂಗ ಎಂಬುದನ್ನು ಅರಿತುಕೊಳ್ಳಬೇಕು. ನೈಸರ್ಗಿಕ ಸಂಪತ್ತಿನ ವಿನಾಶವನ್ನು ತಡೆಗಟ್ಟುವುದಲ್ಲದೆ ಅದನ್ನೂ ಮಾನವ ನಿರ್ಮಿತ ಸಂಪತನ್ನೂ ರಕ್ಷಿಸಿ ವೃದ್ಧಿಗೊಳಿಸುವುದು ನಮ್ಮ ಹೊಣೆಯೆಂದು ನಾವು ಅರಿಯಬೇಕು.

XV. ಆರ್ಥಿಕ ವೃದ್ಧಿ ಮತ್ತು ಅಭಿವೃದ್ಧಿಯ ಸಮಸ್ಯೆಗಳನ್ನು ಯಾವ ರಾಷ್ಟ್ರವೂ ಏಕಾಕಿಯಾಗಿ ಬಿಡಿಸಲು ಸಾಧ್ಯವಿಲ್ಲ. ಅವು ಜಗದ್ವ್ಯಾಪಿಯಾಗಿವೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ನೆರವು ನೀಡುವುದು ಅವುಗಳ ನೈತಿಕ ಹೊಣೆಯಾಗಿದೆ. ಅವು ತಾಂತ್ರಿಕ, ವೈದ್ಯಕೀಯ, ಆರ್ಥಿಕ ಮತ್ತು ಕೃಷಿ ವಿಷಯದಲ್ಲಿ ನೆರವು ನೀಡಬೇಕು. ಈ ಕಾರ್ಯ ಮಾನವೀಯ ಹಕ್ಕುಗಳನ್ನು ರಕ್ಷಿಸುವ ಒಂದು ಅಂತಾರಾಷ್ಟ್ರೀಯ ಅಧಿಕೃತ ಸಂಸ್ಥೆಯಿಂದಾಗಬೇಕು. ಜಗತ್ತಿನಿಂದ ಬಡತನ ತೊಲಗಬೇಕು. ಸಂಪತ್ತು, ಉತ್ಪನ್ನ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿರುವ ಅಂತರವನ್ನು ಜಾಗತಿಕ ತಳಹದಿಯ ಮೇಲೆ ಕಡಿಮೆ ಮಾಡಬೇಕು.

XVI. ಮಾನವಕುಲದ ಪ್ರಗತಿಗೆ ತಂತ್ರಜ್ಞಾನ ಪ್ರಾಣಸ್ವರೂಪ. ವಿಜ್ಞಾನ, ತಂತ್ರಜ್ಞಾನಗಳನ್ನು ವಿವೇಕವಿಲ್ಲದೆ ತೆಗಳುವ ಮತ್ತು ಅವುಗಳ ವಿಸ್ತರಣೆಯನ್ನು ವಿರೋಧಿಸುವ ಅಭಿನವ ಪ್ರವೃತ್ತಿಯನ್ನು ಕಂಡು ಖೇದವಾಗುತ್ತದೆ. ಮೂಲಭೂತ ವೈಜ್ಞಾನಿಕ ಅನ್ವೇಷಣೆಯನ್ನು ನೈತಿಕ, ರಾಜಕೀಯ ಅಥವಾ ಸಾಮಾಜಿಕ ನೆಪಗಳನ್ನೊಡ್ಡಿ ದೂಷಿಸುವುದನ್ನು ನಾವು ವಿರೋಧಿಸುತ್ತೇವೆ. ತಂತ್ರಜ್ಞಾನದ ಗುಣಮಟ್ಟವನ್ನು ಅದರಿಂದ ದೊರೆಯುವ ಫಲದಿಂದಲೇ ನಿರ್ಧರಿಸಬೇಕು. ಅವು ಅಪಾಯಕರವಾಗಿದ್ದರೆ ಅವುಗಳ ಬೆಳವಣಿಗೆಗೆ ಅವಕಾಶ ನೀಡಬಾರದು. ಮನುಷ್ಯರನ್ನೇ ನಿಯಂತ್ರಿಸುವ, ಪ್ರವೃತ್ತಿಸುವ, ರೂಪಾಂತರಿಸುವ ಕ್ರಿಯೆಗಳಲ್ಲಿ ತಂತ್ರಜ್ಞಾನವೂ, ಅಧಿಕಾರಶಾಹಿಯೂ ತೊಡಗಿರುವುದು ಅಶಾಂತಿಗೆಡೆ ನೀಡುತ್ತದೆ. ಸಾಂಸ್ಕೃತಿಕ ದೃಷ್ಟಿಯಿಂದ ಇಂಥ ತಂತ್ರಜ್ಞಾನ ಅಪೇಕ್ಷಣೀಯವಲ್ಲ.

XVII. ಬೇರೆ ಬೇರೆ ದೇಶಗಳ ನಡುವಣ ಸಾರಿಗೆ ವ್ಯವಸ್ಥೆ ವಿಸ್ತಾರವಾಗಬೇಕು. ಪ್ರವಾಸಕ್ಕೆ ನಿರ್ಬಂಧಗಳಿರಬಾರದು. ವಿವಿಧ ರಾಜಕೀಯ, ವೈಚಾರಿಕ ಮತ್ತು ನೈತಿಕ ದೃಷ್ಟಿಕೋನಗಳಿಗೆ ಜಗತ್ತು ಮುಕ್ತವಾಗಿರಬೇಕು. ದೂರದರ್ಶನ ಮತ್ತು ಬಾನುಲಿ ಮೂಲಕ ಶಿಕ್ಷಣ ಹಾಗೂ ಜ್ಞಾನಪ್ರಸಾರಣದ ಜಾಗತಿಕ ವ್ಯವಸ್ಥೆಯು ನಿರ್ಮಾಣವಾಗಬೇಕು. ಸೈದ್ಧಾಂತಿಕ ವಾದಗಳ ಸೀಮೆಗಳನ್ನು ಮೀರುವಂಥ ಸಾಂಸ್ಕೃತಿಕ, ವೈಜ್ಞಾನಿಕ, ಲಲಿತಕಲಾ ಮತ್ತು ತಂತ್ರಜ್ಞಾನ ರಂಗಗಳಲ್ಲಿ ಅಂತಾರಾಷ್ಟ್ರೀಯ ಮಟ್ಟದ ಸಹಕಾರವಿರಬೇಕು. ನಾವೆಲ್ಲರೂ ಮುಕ್ತ ಮನಸ್ಸಿನಿಂದ ಕೂಡಿರಬೇಕು, ಇಲ್ಲವೆ ನಾಶವಾಗಬೇಕು.

## ಸಮಗ್ರ ಮಾನವಕುಲ

ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳು ನಿರ್ಮಾಣವಾಗಿ ಅವು ತನ್ನ ಸಮಸ್ಯೆಗಳನ್ನು ಪರಿಹರಿಸುವುದನ್ನು ಜಗತ್ತು ದಾರಿಕಾಯುತ್ತ ನಿಲ್ಲಲಾರದು. ಸಜ್ಜನರು ಶಾಂತಿ ಪುಷ್ಟಿ ತುಷ್ಟಿಯುಳ್ಳ ಸಮೃದ್ಧ ಜಗತ್ತಿನ ನಿರ್ಮಾಣಕ್ಕೆ ಯತ್ನಿಸಲು ಇದು ಸಕಾಲ. ಇದಕ್ಕಾಗಿ ಸಂಕುಚಿತ ಪ್ರಾದೇಶಿಕ ನಿಷ್ಠೆ ಹಾಗೂ ನೈತಿಕ ಮತ್ತು ಧಾರ್ಮಿಕವಾದಗಳ ನಿಯಮ ನಿಷ್ಠೆಗಳನ್ನು ಮೀರಿ ಸಾಗಬೇಕಾಗಿದೆ. ಈ ಪ್ರಯತ್ನವನ್ನು ನಿರಾಶೆ ಅಥವಾ ಹೇಡಿತನದಿಂದ ಬಿಟ್ಟುಕೊಡಬಾರದು. ನಮ್ಮ ಭವಿಷ್ಯದ ಹೊಣೆ ನಮ್ಮ ಮೇಲೆಯೇ ಇದೆ. ಮಾನವೀಯ ಜಗತ್ತಿನ ನಿರ್ಮಾಣಕ್ಕಾಗಿ ಧ್ಯೇಯಕ್ಕೆ ಅನುಗುಣವಾದ ಉಪಾಯಗಳನ್ನು ಯೋಜಿಸಿ ನಾವೆಲ್ಲರೂ ಕಾರ್ಯಪ್ರವೃತ್ತರಾಗೋಣ. ಕಮ್ಯುನಿಸಂ, ಬಂಡವಾಳವಾದ, ಸಮಾಜವಾದ, ಯಥಾಸ್ಥಿತಿ ರಕ್ಷಕವಾದ, ಉದಾರವಾದ ಮತ್ತು ಉಗ್ರವಾದಗಳನ್ನು ಮೆಟ್ಟಿ ನಿಲ್ಲೋಣ. ದ್ವೇಷ ಮತ್ತು ಭಯಾನಕತೆಯ ಅಂತ್ಯವನ್ನು ಸಾರೋಣ. ಮಾನವೀಯ ಮೌಲ್ಯಗಳ ಸಂವರ್ಧನೆಯಲ್ಲಿ ಭಾಗಿಗಳಾಗಿ ಮಾತ್ರ ನಾವು ಜಗತ್ತಿನಲ್ಲಿ ಬಾಳಬಲ್ಲೆವು; ಅಭಿವೃದ್ಧಿ ಹೊಂದಬಲ್ಲೆವು. ಆಗ ನಾವು ಮಾನವಕುಲಕ್ಕೆ ನವಮಾರ್ಗ ಪ್ರವರ್ತಕರಾಗಲು ಸಾಧ್ಯ. ವಿಶಾಲದೃಷ್ಟಿಯ ಸಹಕಾರವು ಪುರಾತನ ಸ್ಪರ್ಧೆಯನ್ನು ಮೀರುವುದು. ಸಹಿಷ್ಣುತೆ, ತಿಳಿವಳಿಕೆ, ಶಾಂತಿ-ಸಂಧಾನಗಳಿಗೆ ಬದ್ಧರಾಗುವುದೆಂದರೆ ಯಥಾಸ್ಥಿತಿಗೆ ಶರಣು ಬರುವದು ಅಥವಾ ಕ್ರಾಂತಿಕಾರಕ ಶಕ್ತಿಗಳಿಗೆ ತಡೆಯೊಡ್ಡುವದಲ್ಲ. ಅಸಂಖ್ಯ, ಹಿಂಸಾರಹಿತ ಹೊಂದಾಣಿಕೆಗಳ ಮೂಲಕ ನಿಜವಾದ ಕ್ರಾಂತಿ ನಿತ್ಯವೂ ನಡೆಯುತ್ತಿದೆ. ಈಗಿನ ಐತಿಹಾಸಿಕ ಸಂಧಿಕಾಲದಲ್ಲಿ ಸಕಲ ಮಾನವಕುಲದ ಕಲ್ಯಾಣಕ್ಕೆ ಬದ್ಧರಾಗುವದೆಂದರೆ ನಮ್ಮಿಂದ ಪಾಲಿಸಲು ಸಾಧ್ಯವಿರುವ ಪರಮೋಚ್ಚ ಧ್ಯೇಯಗಳಿಗೆ ಅಂಟಿಕೊಳ್ಳುವದು. ಅವು ಮತಧರ್ಮ, ರಾಷ್ಟ್ರ, ಪಕ್ಷ, ವರ್ಗ ಅಥವಾ ಬುಡಕಟ್ಟು ಇವೆಲ್ಲವನ್ನೂ ಮೀರಿದ ಧ್ಯೇಯಗಳಾಗಿರಬೇಕು. ಪ್ರತಿಯೊಬ್ಬನೂ ಜಾಗತಿಕ ಸಮಾಜದ ಸದಸ್ಯನಾಗುವದಕ್ಕಿಂತ ಹೆಚ್ಚಿನ ಸಾಹಸ ಯಾವುದಿದೆ? ಇದು ಅಭಿಜಾತ ಸಂಕಲ್ಪ. ಇದಕ್ಕೆ ನಾವೀಗ ನವಚೈತನ್ಯ ನೀಡಬೇಕು. ಈ ಅರ್ಥದಲ್ಲಿ ಮಾನವತಾವಾದವು ಕಾಲದ ಬೆಂಬಲವುಳ್ಳ ನೈತಿಕಶಕ್ತಿ. ಮುಂಬರುವ ದಶಕಗಳಲ್ಲಿ ಈ ಸಂಕಲ್ಪವನ್ನು ಪೂರ್ಣಗೊಳಿಸುವ ಬುದ್ಧಿ, ಸ್ನೇಹ ಮತ್ತು ಸಹಕಾರ ಮಾನವಕುಲಕ್ಕಿದೆ ಎಂದು ನಂಬಿದ್ದೇವೆ.

ಕೆಳಗೆ ಅಂಕಿತ ಹಾಕುವ ನಾವೆಲ್ಲರೂ, ಈ ಘೋಷಣೆಯ ಪ್ರತಿಯೊಂದು ವಿವರವನ್ನೂ ಅವಶ್ಯಕವಾಗಿ ಒಪ್ಪದೇ ಇದ್ದರೂ, ಮಾನವಕುಲದ ಹಿತಕ್ಕಾಗಿ ನಮ್ಮ ಸಂಪೂರ್ಣ ಬೆಂಬಲ ಕೊಡುತ್ತೇವೆ. ಇದು ಸಿದ್ಧಾಂತವಲ್ಲ; ಜೀವಂತ ಮತ್ತು ವೃದ್ಧಿ ಹೊಂದುತ್ತಿರುವ ಶ್ರದ್ಧೆಯ ಅಭಿವ್ಯಕ್ತಿ ಮಾತ್ರ. ಈ ಘೋಷಣೆಯಲ್ಲಿರುವ ಧ್ಯೇಯಗಳ ಅಭಿವೃದ್ಧಿ ಮತ್ತು ಕಾರ್ಯಾಚರಣೆಗಾಗಿ ನಾವು ಜಗತ್ತಿನ ಎಲ್ಲ ಜನರನ್ನೂ ಆಹ್ವಾನಿಸುತ್ತೇವೆ. (ಈ ಘೋಷಣಾ ಪತ್ರಕ್ಕೆ ಅಂಕಿತ ಹಾಕಿದವರ ಹೆಸರುಗಳಿವೆ.) ✡

ಕೃಪೆ: 'ರ್‍ಯಾಡಿಕಲ್ ಹ್ಯೂಮನಿಸ್ಟ್'



ಕಿರಿ ತಾರೆಯೊಬ್ಬಳಿಗೆ ಚಿತ್ರನಿರ್ದೇಶಕ ಹೇಳಿದ, "ನಿನ್ನ ಧ್ವನಿ ತುಂಬ ಇಂಪಾಗಿದೆ. ಆದ್ದರಿಂದ ಈ ಪಾತ್ರಕ್ಕೆ ನಿನ್ನ ಧ್ವನಿಯನ್ನು ಮಾತ್ರ ಬಳಸಿಕೊಳ್ಳುತ್ತೇನೆ."

‘ದ್ವಾರವಿಲ್ಲದ ದ್ವಾರ’
ದಾರಿತೋರುವುದು ಯಾವುದಕ್ಕೆ?

# ಝೆನ್ನನ ವಿಮರ್ಶೆ

ಬಿ. ಜನಾರ್ದನ ಭಟ್

ಝೆನ್‌ನ ತಾತ್ವಿಕ ಸ್ವರೂಪ ಹೇಗಿದ್ದರೂ ನಾವು ಅದನ್ನು ಸಾಹಿತ್ಯ ಪ್ರಕಾರವಾಗಿ ಓದುತ್ತೇವೆ. ಝೆನ್ ಬುದ್ಧಿಸಂನ ಕಥಾ ಪ್ರಸಂಗಗಳು ಮತ್ತು ಕೊ ಅನ್‌ಗಳು * ನಮಗೆ ಅರ್ಥವಾದಾಗ (ಅಥವಾ ಹಾಗೆಂದು ತಿಳಿದುಕೊಂಡಾಗ) ನಮಗೆ ಹೊಸ ಸತ್ಯದರ್ಶನವಾದ ಸಂತೋಷವಾಗಬಹುದೆ ಹೊರತು ಜೀವನದರ್ಶನದ ಜ್ಞಾನೋದಯುವಾಗುವುದಿಲ್ಲ. ಆದ್ದರಿಂದ ಝೆನ್ ಪ್ರಸಂಗಗಳಲ್ಲಿ ಬರುವ ‘ಆ ಕ್ಷಣ ಅವನಿಗೆ ಜ್ಞಾನೋದಯುವಾಯಿತು’ ಎನ್ನುವ ಮಾತನ್ನು ನನಗೆ ಅಷ್ಟು ಸೀರಿಯಸ್ಸಾಗಿ ತೆಗೆದುಕೊಳ್ಳುವುದು ಸಾಧ್ಯವಾಗಿಲ್ಲ. ಉದಾಹರಣೆಗೆ ಒಂದು ಜ್ಞಾನೋದಯುದ ಕಥೆ ಓದಿ ನೋಡಿ—

ಒಬ್ಬ ಭಿಕ್ಷು ಜೋಶುವನ್ನು ಕೇಳಿದ: ‘ನಾನು ಈಗಷ್ಟೆ ಮಠಕ್ಕೆ ಸೇರಿದ್ದೇನೆ. ದಯವಿಟ್ಟು ನನಗೆ ಬೋಧಿಸಿರಿ.’

ಜೋಶು ಕೇಳಿದ: ‘ಗಂಜಿ ತಿಂದಿಯಾ?’

ಭಿಕ್ಷು ಉತ್ತರಿಸಿದ: ‘ತಿಂದೆ.’

ಜೋಶು ಹೇಳಿದ: ‘ನೀನು ಹಾಗಾದರೆ ಉಂಡ ತಟ್ಟೆ ತೊಳೆಯುವುದು ಒಳ್ಳೆಯದು.’

ಆ ಕ್ಷಣ ಭಿಕ್ಷುವಿಗೆ ಜ್ಞಾನೋದಯವಾಯಿತು. ಇನ್ನೊಂದು ಪ್ರಸಂಗ ಹೀಗಿದೆ—

ಒಮ್ಮೆ ಬಂಝೆನ್ ಮಾರುಕಟ್ಟೆಯಲ್ಲಿ ಒಬ್ಬ ಕಟುಕ ಮತ್ತೊಬ್ಬ ಗಿರಾಕಿಯ ನಡುವಿನ ಸಂಭಾಷಣೆ ಕೇಳಿಸಿಕೊಂಡ.

ಗಿರಾಕಿ ಕೇಳಿದ: ‘ನಿಮ್ಮಲ್ಲಿರುವ ಒಳ್ಳೆಯ ಮಾಂಸ ಕೊಡಿ.’

‘ನನ್ನ ಅಂಗಡಿಯಲ್ಲಿರುವ ಪ್ರತಿಯೊಂದೂ ಒಳ್ಳೆಯದೇ, ನನ್ನ ಅಂಗಡಿಯಲ್ಲಿ ಒಳ್ಳೆಯದಲ್ಲದ ಒಂದು ಚೂರು ಮಾಂಸ ಕೂಡ ಕಾಣಲಾರಿರಿ,’ ಎಂದ ಕಟುಕ.

---

* ಕೊಅನ್ (Koan) ಎಂಬುದನ್ನು ಕೆ. ವಿ. ಸುಬ್ಬಣ್ಣನವರು ತಮ್ಮ ‘ಝೆನ್’ ಎಂಬ ಪುಸ್ತಕದಲ್ಲಿ ‘ಒಗಟು’ ಎಂದು ಅನುವಾದಿಸಿದ್ದಾರೆ. ‘ಮೊಂಡೋ’ ಎಂದು ಕರೆಯಲ್ಪಡುವ ಬೌದ್ಧಿಕ ಸಮಸ್ಯೆಗಳನ್ನು ಅವರು ‘ಮುಂಡಿಗೆ’ಗಳು ಎಂದು ಕರೆದಿದ್ದಾರೆ. ‘ಮುಂಡಿಗೆ’ ಎಂಬ ಶಬ್ದಕ್ಕೆ ಅವರಿಗೆ ಋಣಿಯಾಗಿರುತ್ತ ಅದನ್ನು ಕೊಅನ್‌ಗೆ ಸಮಾನಾರ್ಥ ಪದವಾಗಿ ಬಳಸಬಹುದೆಂದು ನನ್ನ ಅನಿಸಿಕೆ. —ಲೇಖಕ

ಈ ಮಾತುಗಳನ್ನು ಕೇಳಿದ ಬಂರ್ಶೊನ್‌ಗೆ ಜ್ಞಾನೋದಯವಾಯಿತು.

ಈ ಜ್ಞಾನೋದಯಗಳ ನಿಜ ಸ್ವರೂಪ ನಮಗೆ ಅರ್ಥವಾಗದೆ ಹೋದಾಗ ನಾವು ರ್ಝೆನ್ ಪ್ರಸಂಗಗಳನ್ನು ಸಾಹಿತ್ಯ ಪ್ರಕಾರವಾಗಿ ಓದಿದರೆ ತಪ್ಪೇನಿಲ್ಲ. ಚಿಂತನಶೀಲರು ಒಪ್ಪಿಕೊಂಡ ರ್ಝೆನ್‌ನ ಅನನ್ಯ ಶ್ರೇಷ್ಠತೆಯನ್ನು ಅವರು ಹೇಳುವ ಕಾರಣಕ್ಕಾಗಿಯೇ ನಾವು ಒಪ್ಪುವುದಿಲ್ಲ ಎಂಬುದು ರ್ಝೆನ್‌ಗೆ ಮಾಡಿದ ಅಪಚಾರವಾಗುವುದಿಲ್ಲ. (ರ್ಝೆನ್‌ನ ಪ್ರಕಾರವೇ ಉಳಿದವರಿಂದ ನಾವು ಶಾಬ್ದಿಕವಾಗಿ ಕಲಿಯುವಂಥದ್ದೇನಿಲ್ಲ. ಯಾರಾದರೂ ದಾರಿ ತೋರಬಹುದು; ಆದರೆ ಜ್ಞಾನೋದಯ ವ್ಯಕ್ತಿಗತವೇ ಹೊರತು ಅನ್ಯಥಾ ಬರುವಂಥದ್ದಲ್ಲ). ರ್ಝೆನ್ ಎಂಬ ಹಣೆಪಟ್ಟಿಯನ್ನು ಹೊತ್ತುಕೊಂಡ ಯಾವುದೇ ಬರಹವನ್ನು ನಾವು ಹೊಸ ಎಚ್ಚರಿಕೆಯಿಂದ, ಭಯಭಕ್ತಿಯಿಂದ ಓದಬೇಕಾದ ಅಗತ್ಯವೇನಿಲ್ಲ. ರ್ಝೆನ್ ಪ್ರಸಂಗಗಳೆಂದು ಜಪಾನಿನಲ್ಲಿ ಪ್ರಚಲಿತವಿರುವ ಕೆಲವು ಹನಿಗತೆಗಳು 'ಚಂದಮಾಮ'ದಂಥ ಪತ್ರಿಕೆಗಳಲ್ಲಿ ಮಕ್ಕಳ ಕಥೆಗಳಾಗಿ ಪ್ರಕಟವಾದದ್ದನ್ನು ನಾನು ಓದಿದ್ದೇನೆ. ಅವುಗಳನ್ನು ಯಾರೂ ಶ್ರೇಷ್ಠ ತಾತ್ವಿಕ ಚಿಂತನೆಗಳೆಂದು ಗುರುತಿಸಿದ್ದು ನನಗೆ ತಿಳಿದಿಲ್ಲ.

ಇಂಗ್ಲೀಷಿನಲ್ಲಿ ನಾನ್‌ಸೆನ್ಸ್ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಪ್ರಕಾರಕ್ಕೂ ರ್ಝೆನ್ ಸಾಹಿತ್ಯಕ್ಕೂ ಸಾಮ್ಯವಿದೆ ಎಂದು ನನಗನಿಸುವುದು. ರ್ಝೆನ್ ಸಂಪ್ರದಾಯದಲ್ಲಿ ವಿವಿಧ ರೀತಿಯ ಬರಹಗಳಿರುವುದರಿಂದ ಎಲ್ಲವನ್ನೂ ನಾನ್‌ಸೆನ್ಸ್ ಸಾಹಿತ್ಯಕ್ಕೆ ಹೋಲಿಸುವ ಪ್ರಯತ್ನ ನನ್ನದಲ್ಲ. ಮುಮನ್ ಎಂಬ ರ್ಝೆನ್ ಗುರುವಿನ 'ದ್ವಾರವಿಲ್ಲದ ದ್ವಾರ' ಎನ್ನುವ ಪುಸ್ತಕದಿಂದ ಕೆಲವು ಉದಾಹರಣೆಗಳನ್ನು ಆರಿಸಿ ರ್ಝೆನ್ ಸಾಹಿತ್ಯದ ಒಂದು ಪ್ರಮುಖ ಮುಖವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ನನ್ನದು.

ರ್ಝೆನ್ ಸಾಹಿತ್ಯಕ್ಕೂ ನಾನ್‌ಸೆನ್ಸ್ ಸಾಹಿತ್ಯಕ್ಕೂ ಇರುವ ಸಾಮ್ಯವನ್ನು ಕಾಣುವುದಕ್ಕಿಂತ ಮೊದಲು ಇವುಗಳ ನಡುವಿನ ಪ್ರಮುಖ ಭೇದವನ್ನು ಗಮನಿಸುವುದು ಅಗತ್ಯ. ನಾನ್‌ಸೆನ್ಸ್ ಸಾಹಿತ್ಯ ಶುದ್ಧ ಸಂತೋಷ ನೀಡುವುದಕ್ಕಾಗಿ ಇರುತ್ತದೆ. ಓದುಗರಿಗೆ ಕೆಲವು ಅರ್ಥಗಳು ಹೊಳೆಯಬಹುದಾದರೂ ಸಾಮಾನ್ಯವಾಗಿ ನಾನ್‌ಸೆನ್ಸ್ ಬರಹ ಅರ್ಥಹೀನವೆಂದೇ ಜನ ತಿಳಿಯುತ್ತಾರೆ. ರ್ಝೆನ್‌ಗೆ ಧಾರ್ಮಿಕ ಹಿನ್ನೆಲೆಯಿದ್ದು ಅದು ವಿದ್ಯಾರ್ಥಿಗಳ ಶಬ್ದದ ಅಮಲು ಇಳಿಯುವುದಕ್ಕೆ ಗುರುಗಳು ಕೊಡುವ ನಾನ್‌ಸೆನ್ಸ್ ಮದ್ದು ಆಗಿರುವುದರಿಂದ ರ್ಝೆನ್‌ಗೆ ಹೆಚ್ಚು ಗಹನವಾದ ಉದ್ದೇಶವಿರುತ್ತದೆ. ರ್ಝೆನ್‌ನಲ್ಲಿ ಜ್ಞಾನದ ಕಿಡಿ ಅಡಗಿದೆಯೆಂದು ತಿಳಿಯುವ ಜನರಿಗೆ ಅದು ಅರ್ಥಹೀನವಾಗಿರಬಹುದೆಂಬ ಕಲ್ಪನೆಯೂ ಬರುವುದಿಲ್ಲ.

ರ್ಝೆನ್ ಮತ್ತು ನಾನ್‌ಸೆನ್ಸ್ ಎರಡೂ ತರ್ಕಶಾಸ್ತ್ರದ ವಿಚಿತ್ರ ಉಪಯೋಗ ಮಾಡಿಕೊಳ್ಳುತ್ತವೆ. ಇದನ್ನು ನಾನ್‌ಸೆನ್ಸ್ ಲಾಜಿಕ್ ಎಂದು ಕರೆಯಬಹುದು. 'ಜೋಶು ಪತ್ತೆ ಮಾಡಿದ' ಎಂಬ ರ್ಝೆನ್ ಪ್ರಸಂಗವನ್ನು ನೋಡಿ—

ಒಬ್ಬ ಸಂಚಾರಿ ಭಿಕ್ಷು, ಒಬ್ಬಳು ಮುದುಕಿಯ ಬಳಿ ಟೈಜಾನ್ ಎಂಬ ಪ್ರಸಿದ್ಧ ಜ್ಞಾನದೇಗುಲಕ್ಕೆ ಹೋಗಲು ದಾರಿ ವಿಚಾರಿಸಿದ. 'ಸೀದಾ ಮುಂದೆ ಹೋಗು' ಎಂದಳು ಮುದುಕಿ. ಭಿಕ್ಷು ಆಚೆ ಹೋದ ಮೇಲೆ ಮುದುಕಿ ತನ್ನಷ್ಟಕ್ಕೆ, 'ಇವನೂ ಒಬ್ಬ ಸಾಮಾನ್ಯ ದೇವಾಲಯ ದರ್ಶಕ' ಎಂದು ಹೇಳಿಕೊಂಡಳು.

ಈ ಪ್ರಸಂಗವನ್ನು ಯಾರೋ ಜೋಶುಗೆ ಹೇಳಿದರು. 'ನಾನು ಪತ್ತೆ ಮಾಡುವೆನು ತಾಳಿ,' ಎಂದ ಜೋಶು. ಮರುದಿನ ಆತ ಹೋಗಿ ಅದೇ ಪ್ರಶ್ನೆ ಕೇಳಿದ. ಮುದುಕಿ ಅದೇ ಉತ್ತರ ಹೇಳಿದಳು.

ಜೋಶು ಹೇಳಿದ: 'ನಾನು ಆ ಮುದುಕಿಯನ್ನು

ಪತ್ತೆ ಮಾಡಿದೆ.' ಇಂಗ್ಲೀಷಿನ ನಾನ್‌ಸೆನ್ಸ್ ಲೇಖಕ ಲೂಯಿಸ್ ಕೆರೋಲನ ಆಲಿಸ್ ಕಥೆಗಳಿಂದ ಆರಿಸಿದ ಒಂದು ಪ್ರಸಂಗವನ್ನು ಓದಿ—

'ಈಗ ಮಳೆ ಬರಬಹುದೇ?' ಎಂದು ಆಲಿಸ್ ಕೇಳಿದಳು. ಟ್ವೀಡ್ಲ್‌ಡಂ ತಕ್ಷಣ ತನ್ನ ಮತ್ತು ತನ್ನ ತಮ್ಮನ ಮೇಲೆ ದೊಡ್ಡದೊಂದು ಛತ್ರಿ ಬಿಡಿಸಿಕೊಂಡು ಅದರೊಳಗೆ ನೋಡಿ. 'ಇಲ್ಲ; ಬರಲಿಕ್ಕಿಲ್ಲ, ಕೊನೆಪಕ್ಷ ಇದರಡಿಯಲ್ಲಾದರೂ,' ಎಂದ.

'ಆದರೆ ಹೊರಗೆ ಮಳೆ ಬರಬಹುದಲ್ಲಾ?' ಆಲಿಸ್ ಕೇಳಿದಳು.

ಟ್ವೀಡ್ಲ್‌ಡಂ ಹೇಳಿದ: 'ಬರಬಹುದು ಅದಕ್ಕೆ ಮನಸ್ಸಿದ್ದರೆ. ನಮ್ಮದೇನೂ ಅಭ್ಯಂತರವಿಲ್ಲ.'

ಝೆನ್ ಪ್ರಸಂಗಗಳನ್ನು ನಾನ್‌ಸೆನ್ಸಿನೊಂದಿಗೆ ಹೋಲಿಸುವ ಪ್ರಯತ್ನ 'ಮುಮನ್ನನ ವಿಮರ್ಶೆ' ಎಂಬ ಈ ಲೇಖನಕ್ಕೆ ಸ್ವಲ್ಪ ದೀರ್ಘವೆಂದು ಅನಿಸಬಹುದಾದ ಒಂದು ರೀತಿಯ ಪೀಠಿಕೆ ಅಷ್ಟೆ. ಮುಮನ್ ಎಂದು ಕರೆಯಲ್ಪಡುತ್ತಿದ್ದ ಚೀನಾದ ಎಕಾಯಿ (೧೧೮೩–೧೨೬೦) 'ದ್ವಾರವಿಲ್ಲದ ದ್ವಾರ' ಎಂಬ ಪುಸ್ತಕವನ್ನು ೧೨೨೮ರಲ್ಲಿ ಪ್ರಕಟಿಸಿದ. ಇದು ಹಿಂದಿನ ಕಾಲದ ಝೆನ್ ಗುರುಗಳು ಹೇಳಿದ ನಲವತ್ತೆಂಟು ಕೊಅನ್‌ಗಳ ಸಂಗ್ರಹ. ಕೊಅನ್‌ಗಳು ಅಸಂಗತವೆನಿಸುವ ಪ್ರಶ್ನೆಗಳು ಅಥವಾ ಅಸಂಗತವೆನಿಸುವ ಉತ್ತರಗಳು. 'ಕೊಅನ್‌ಗೆ ಸರಿಯಾದ ಉತ್ತರವೇನು? ಅದಕ್ಕೆ ಅನೇಕ ಉತ್ತರಗಳಿರುತ್ತವೆ ಮತ್ತು ಉತ್ತರವೇ ಇರುವುದಿಲ್ಲ ಕೂಡ... ಕೊ ಅನ್‌ಗೆ ಸರಿ ಉತ್ತರ ಸಿಕ್ಕಾಗ ಝೆನ್ ಸತ್ತಿರುತ್ತದೆ' ಎಂದು ಮುಮನ್‌ನ ಪುಸ್ತಕವನ್ನು ಇಂಗ್ಲೀಷಿಗೆ ತಂದಿರುವ ಪಾವುಲ್ ರೆಪ್ಸ್ ಮತ್ತು ನ್ಯೋಗೆನ್ ಸೆಂಜಾಕಿ ಮುನ್ನುಡಿಯಲ್ಲಿ ಬರೆದಿದ್ದಾರೆ.

ಮುಮನ್ ತಾನು ಸಂಗ್ರಹಿಸಿದ ಒಂದೊಂದು ಕೊಅನ್‌ಗೂ ಒಂದು ಗದ್ಯವ್ಯಾಖ್ಯಾ ಮತ್ತು ಚೌಪದಿ ಪದ್ಯರೂಪದಲ್ಲಿ ಟಿಪ್ಪಣಿಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಶುದ್ಧ ತಾತ್ವಿಕವೆನಿಸಬಹುದಾದ ಕೆಲವು ಟಿಪ್ಪಣಿಗಳಿವೆಯಾದರೂ ಹೆಚ್ಚಿನವು ತಮಾಷೆಯಾಗಿದ್ದು, ನಾನ್‌ಸೆನ್ಸ್ ಸಾಹಿತ್ಯದಂತೆ ಓದಿಕೊಳ್ಳಬಹುದು. ಗುರು ಜೋಶುವನ್ನು ಒಬ್ಬ ಭಿಕ್ಷು ಕೇಳಿದ: 'ಒಂದು ನಾಯಿಗೆ ಬುದ್ಧತ್ವವಿದೆಯೆ, ಇಲ್ಲವೆ?' ಅದಕ್ಕೆ ಜೋಶು ಹೇಳಿದ: 'ಊಂಹೂಂ.' (ಊಂಹೂಂ ಎಂಬ ಅನುವಾದಕ್ಕೆ ಸುಬ್ಬಣ್ಣನವರಿಗೆ ಋಣಿಯಾಗಿದ್ದೇನೆ.) ಇದಕ್ಕೆ ಮುಮನ್ ಬರೆದ ಟಿಪ್ಪಣಿ ತತ್ವಶಾಸ್ತ್ರದ ಬೋಧನೆಯಂತಿದೆ. ಇಂಥ ಅಪವಾದಗಳು ಕೂಡ ಮುಮನ್‌ನಲ್ಲಿ ಇವೆಯೆಂದು ಹೇಳುವುದಕ್ಕೆ ಇದನ್ನು ಉದಾಹರಿಸಿದೆ.

೨

ಮುಮನ್ನನ ಪುಸ್ತಕದ ಕೆಲವು ಕೊಅನ್‌ಗಳೂ, ಅವುಗಳಿಗೆ ಆತನ ಟಿಪ್ಪಣಿಗಳೂ ಹೀಗಿವೆ—

ಬುದ್ಧನು ಗೃಧ್ರಕೂಟ ಪರ್ವತದಲ್ಲಿದ್ದಾಗ ಬೆರಳುಗಳೆಡೆ ಒಂದು ಹೂವನ್ನು ತಿರುಗಿಸುತ್ತ ಶ್ರೋತೃಗಳ ಮುಂದೆ ಹಿಡಿದ. ಪ್ರತಿಯೊಬ್ಬರೂ ಮೌನವಾಗಿದ್ದರು. ಮಹಾಕಾಶ್ಯಪ ಮಾತ್ರ ಮುಖದ ಗೆರೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಿಯೂ ಮುಗುಳ್ನಕ್ಕ.

ಬುದ್ಧ ಹೇಳಿದ: 'ನನಗೆ ನಿಜವಾದ ಬೋಧನೆಯ ಕಣ್ಣಿದೆ, ನಿರ್ವಾಣದ ಹೃದಯವಿದೆ, ಅರೂಪದ ನಿಜರೂಪವಿದೆ, ಧರ್ಮದ ಅನಿರ್ವಚನೀಯ ದಾಪುಗಾಲಿದೆ. ಅದು ಶಬ್ದಗಳಲ್ಲಿ ವ್ಯಕ್ತವಾಗುವಂಥದ್ದಲ್ಲ. ಆದರೆ ವಿಶೇಷವಾಗಿ ಬೋಧನಾತೀತವಾಗಿ ವಹನವಾಗುತ್ತದೆ. ಈ ಬೋಧನೆಯನ್ನು ನಾನು ಮಹಾಕಾಶ್ಯಪನಿಗೆ ಕೊಟ್ಟಿದ್ದೇನೆ.'

ಮುಮನ್ನನ ಟಿಪ್ಪಣಿ: ಸ್ವರ್ಣಮುಖಿ ಗೌತಮನು ತಾನು ಯಾರನ್ನೂ ಮೋಸಮಾಡಬಹುದೆಂದುಕೊಂಡಿದ್ದ. ಆತ ಒಳ್ಳೆ ಶ್ರೋತೃಗಳನ್ನು ಕೆಟ್ಟವರನ್ನಾಗಿಸಿ ಕುರಿಮಾಂಸವೆಂದು ನಾಯಿ ಮಾಂಸ ಮಾರಿದ ಹಾಗೂ ಅದು ಬುದ್ಧಿವಂತಿಕೆಯೆಂದೇ ನಂಬಿದ. ಒಂದು ವೇಳೆ ಶ್ರೋತೃವರ್ಗ

ವೆಲ್ಲ ನಗಾಡಿದ್ದರೆ ಏನಾಗುತ್ತಿತ್ತು? ಅವನು ಬೋಧನೆಯನ್ನು ಹೇಗೆ ವಹನಿಸುತ್ತಿದ್ದ? ಅಲ್ಲದೆ ಮಹಾಕಾಶ್ಯಪ ಮುಗುಳ್ನಗದೆ ಇದ್ದಿದ್ದರೂ ಬೋಧನೆಯನ್ನು ವಹನಗೊಳಿಸಲು ಹೇಗೆ ಸಾಧ್ಯವಾಗುತ್ತಿತ್ತು? ಗ್ರಹಣವನ್ನು ವಹನಗೊಳಿಸಲು ಸಾಧ್ಯವೆಂದು ಅವನ ಹೇಳಿದರೆ ಅವನು ಹಳ್ಳಿಯ ಚಿಕ್ಕನಿಗೆ ಟೋಪಿ ಹಾಕುವ ಪೇಟೆಯ ಠಕ್ಕನ ಹಾಗೆ. ವಹನ ಸಾಧ್ಯವಿಲ್ಲವೆಂದು ಹೇಳಿದರೆ ಅವನು ಮಹಾಕಾಶ್ಯಪನನ್ನು ಮೆಚ್ಚಿದ್ದು ಹೇಗೆ?

**ತಿರುಗಿಸಿದಾಗ ಒಂದು ಹೂವನ್ನು**
**ಅವನ ವೇಷ ಬಟ್ಟ ಬಯಲು.**
**ಮಹಾಕಾಶ್ಯಪನ ಸುಕ್ಕು ಮುಖವ ಮೀರಿಸ**
**ಲಾರರು**
**ಭೂಮಿ ಸ್ವರ್ಗಗಳಲ್ಲಿ ಯಾರೂ**

ಇನ್ನೊಂದು ಕೋಅನ್—

ಬೋಧಿಧರ್ಮ ಗೋಡೆಗೆ ಮುಖ ಮಾಡಿ ಕುಳಿತಿದ್ದಾನೆ. ಅವನ ಭಾವಿ ಉತ್ತರಾಧಿಕಾರಿ ಮಂಜಿನಲ್ಲಿ ನಿಂತು ತನ್ನ ಕತ್ತರಿಸಿಕೊಂಡ ಕೈಯನ್ನು ಬೋಧಿಧರ್ಮನಿಗೆ ಅರ್ಪಿಸುತ್ತಾನೆ. 'ನನ್ನ ಮನಸ್ಸು ಶಾಂತವಾಗಿಲ್ಲ, ಅದನ್ನು ಸಮಾಧಾನಗೊಳಿಸಿ ಗುರುವೆ, ಎಂದು ಕೂಗುತ್ತಾನೆ.'

ಬೋಧಿಧರ್ಮ ಹೇಳುತ್ತಾನೆ: 'ಆ ಮನಸ್ಸನ್ನಿಲ್ಲಿ ತಂದರೆ ನಾನು ಶಾಂತಗೊಳಿಸುತ್ತೇನೆ.'

ಉತ್ತರಾಧಿಕಾರಿ ಹೇಳುತ್ತಾನೆ: 'ಅದು ಹುಡುಕಿದರೂ ಹಿಡಿಯಲು ಸಿಗದು.'

ಬೋಧಿಧರ್ಮ ಹೇಳುತ್ತಾನೆ: 'ಹಾಗಾದರೆ ನಿನ್ನ ಮನಸ್ಸು ಶಾಂತಗೊಳಿಸಲ್ಪಟ್ಟಿದೆ.'

ಮುಮನ್ನನ ಟಿಪ್ಪಣಿ: ಆ ಮುರುಕ ಹಲ್ಲಿನ ಹಿಂದೂ ಮುದಿಯ ಬೋಧಿಧರ್ಮ ಸಾವಿರಾರು ಮೈಲು ಸಮುದ್ರ ದಾಟಿ ಚೀನಕ್ಕೆ ಬಂದ, ಅದ್ಭುತವೊಂದನ್ನು ತಂದ ಹಾಗೆ. ಅವನು ಗಾಳಿಯಿಲ್ಲದೆ ಅಲೆ ಎಬ್ಬಿಸಿದ. ಚೀನದಲ್ಲಿ ವರ್ಷಗಟ್ಟಲೆ ಉಳಿದ ಮೇಲೆ ಅವನಿಗೆ ಒಬ್ಬನೇ ಶಿಷ್ಯನಿದ್ದ. ಮತ್ತು ಅವನು ಕೂಡ ಕೈಯಿಲ್ಲದ ಅಂಗವಿಕಲನಾದ. ಪಾಪ, ಆ ಮೇಲೆ ಅವನಿಗೆ ಮೆದುಳಿಲ್ಲದ ಶಿಷ್ಯರೇ ಇದ್ದಾರೆ.

**ಬೋಧಿಧರ್ಮ ಚೀನಕ್ಕೆ ಬಂದನಾದರೂ**
**ಯಾಕೆ?**
**ಭಿಕ್ಷುಗಳಿದನ್ನು ಚರ್ಚಿಸಿದ್ದಾರೆ ವರ್ಷಗಟ್ಟಲೆ**
**ಆ ನಂತರದ ತೊಂದರೆಗಳೆಲ್ಲ ಶುರುವಾದ್ದು**
**ಆ ಗುರು ಮತ್ತವನ ಶಿಷ್ಯನಿಂದಲೇ**

ಗುರು ನ್ಯಾನ್‌ಸೆನ್ ಹೇಳಿದ ಒಂದು ಕೋಅನ್ 'ಮನಸ್ಸು ಬುದ್ಧನಲ್ಲ. ಕಲಿಯುವುದು ದಾರಿಯಲ್ಲ' ಎನ್ನುವುದು. ಅದಕ್ಕೆ ಮುಮನ್ನನ ಟಿಪ್ಪಣಿ ಹೀಗಿದೆ— 'ನ್ಯಾನ್‌ಸೆನ್ ಮುದುಕನಾಗುತ್ತಿದ್ದ ಮತ್ತು ನಾಚಿಕೆ ಎಂಬುದನ್ನೇ ಮರೆತುಬಿಟ್ಟಿದ್ದ. ಅವನು ಬಾಯಿ ದುರ್ವಾಸನೆ ಸೂಸುತ್ತ ಮಾತಾಡಿ ತನ್ನ ಮನೆಯ ಹುಳುಕನ್ನೇ ಜಾಹೀರು ಮಾಡಿದ. ಹೇಗಿದ್ದರೂ ಅವನ ದಯಾಪರತೆಯನ್ನು ಮೆಚ್ಚಿದವರು ಕಡಿಮೆ.' ಕೋಅನ್‌ಗೆ ಯಾವ ಸಂಬಂಧವೂ ಇಲ್ಲದಂತಿರುವ ಈ ಟಿಪ್ಪಣಿಯ ನಂತರ ನ್ಯಾನ್‌ಸೆನ್ ಪರವಾಗಿರುವಂತೆ ಕಾಣುವ ಪದ್ಯರೂಪ ಹೀಗಿದೆ—

**ಆಕಾಶ ಶುಭ್ರವಿದ್ದಾಗ ಸೂರ್ಯ ಕಾಣುವನು**
**ಇಳೆ ಬೆಂದಾಗ ಮಳೆ ಸುರಿವುದು ಕೆಳಗೆ**
**ಅವನು ಹೃದಯದೆರೆದು ಮಾತು ನುಡಿದನು**
**ಆದರೆ ನುಡಿವುದೆ ವ್ಯರ್ಥ ಹಂದಿಗಳಿಗೆ**
**ಮೀನುಗಳಿಗೆ**

ಇನ್ನೊಂದು ಕೋಅನ್ ಉಮ್ಮನ್ ಎಂಬ ಗುರುವಿಗೆ ಸಂಬಂಧಿಸಿದ್ದು, ಅದು ಹೀಗಿದೆ—

**ಉಮ್ಮನ್ನನನ್ನು ಒಬ್ಬ ಭಿಕ್ಷು ಕೇಳಿದ: 'ಬುದ್ಧ**
**ಅಂದರೆ ಏನು?'**
**ಉಮ್ಮನ್ ಉತ್ತರಿಸಿದ: 'ಒಣ ಸೆಗಣಿ.'**

ಮುಮನ್ನನ ಟಿಪ್ಪಣಿ: ಉಮ್ಮನ್ ಎಷ್ಟು ಬಡವನೆಂದರೆ ಅವನು ಒಂದು ಆಹಾರದ ರುಚಿಯಿಂದ ಇನ್ನೊಂದನ್ನು ಪ್ರತ್ಯೇಕಿಸಲಾರ ಅಥವಾ ಓದಲಿಕ್ಕಾಗುವ ಅಕ್ಷರಗಳನ್ನು ಬರೆಯಲು ಅವನಿಗೆ ಪುರಸೊತ್ತಿಲ್ಲ. ಇರಲಿ, ಅವನು ಒಣ

ಸೆಗಣಿಯ ಬಲದಿಂದಲೇ ತನ್ನ ಪರಂಪರೆಯನ್ನು ಆಧರಿಸಲು ಪ್ರಯತ್ನಿಸಿದ. ಹಾಗೂ ಅವನ ಉಪದೇಶ ಒಣಸೆಗಣಿಯಷ್ಟೇ ಅನುಪಯುಕ್ತವಾಗಿತ್ತು.

ಮುಮನ್ ರ್ಝೆನ್ ಪ್ರಸಂಗಗಳನ್ನು ವಿದ್ಯಾರ್ಥಿಗಳಿಗೆ ಹೇಳಿ ತಾನು ಪ್ರಶ್ನೆ ಹಾಕಿ ಸ್ವತಃ ಕೊಅನ್ ಸೃಷ್ಟಿಸಿದ್ದಕ್ಕೆ ಒಂದು ಉದಾ-ಹರಣೆ ಇದು—

ಟೋರ್ಝನ್‌ನನ್ನು ಉಮ್ಮನ್ 'ಎಲ್ಲಿಂದ ಬಂದೆ?' ಎಂದು ಕೇಳಿದ. ಆತ 'ಸ್ಯಾಟೋ ಹಳ್ಳಿಯಿಂದ' ಎಂದ. 'ಈ ಬೇಸಿಗೆ ಯಾವ ಮಂದಿರದಲ್ಲಿ ಕಳೆದೆ?' ಎಂದು ಕೇಳಿದ ಉಮ್ಮನ್. 'ಹೋಜಿ ಮಂದಿರದಲ್ಲಿ' ಎಂದ ಟೋರ್ಝನ್. ಅವನ ವ್ಯವಹಾರಿಕ ಉತ್ತರ ಇನ್ನೂ ಎಷ್ಟು ಮುಂದುವರಿಯಬಹುದೆಂದು ಅಚ್ಚರಿಗೊಂಡ ಉಮ್ಮನ್ ಕೇಳಿದ: 'ಅಲ್ಲಿಂದ ಯಾವಾಗ ಹೊರಟೆ?' 'ಆಗಸ್ಟ್ ಇಪ್ಪತ್ತೈದರಂದು,' ಎಂದ ಟೋರ್ಝನ್. ಉಮ್ಮನ್ ಹೇಳಿದ: 'ನಾನು ನಿನಗೆ ಮೂರು ದೊಣೆಯೇಟು ಕೊಡಬೇಕು. ಆದರೆ ಇವತ್ತು ನಿನ್ನನ್ನು ಕ್ಷಮಿಸಿದ್ದೇನೆ.' ಮರುದಿನ ಟೋರ್ಝನ್ ಉಮ್ಮನ್ನಗೆ ನಮಸ್ಕರಿಸಿ ಕೇಳಿದ, 'ನಿನ್ನೆ ಮೂರು ದೊಣೆಯೇಟು ಕೊಡಬೇಕೆಂದಿರಲ್ಲ; ನಾನೇನು ತಪ್ಪು ಮಾಡಿದೆನೆಂದು ತಿಳಿಯಲಿಲ್ಲ' ಎಂದ. ಉಮ್ಮನ್ ಟೋರ್ಝನ್ನನ ನೀರಸ ಜವಾಬುಗಳಿಗಾಗಿ ಬೈಯುತ್ತ ಹೇಳಿದ: 'ನೀನು ಬರಿ ನಿಷ್ಪ್ರಯೋಜಕ. ಒಂದು ಮಠದಿಂದ ಇನ್ನೊಂದಕ್ಕೆ ವ್ಯರ್ಥ ಅಲೆಯುತ್ತಿ.' ಉಮ್ಮನ್ನನ ಮಾತು ಮುಗಿಯುವುದರೊಳಗೆ ಟೋರ್ಝನ್‌ಗೆ ಜ್ಞಾನೋದಯವಾಗಿತ್ತು.



"ಇದು ಸನ್ಮಾನ ಸಮಾರಂಭ...! 'ಸಂತಾಪ ಸೂಚಕ ಸಭೆ' ನಿಮ್ಮ ಮುಂದಿನ ಕಾರ್ಯಕ್ರಮ..."

ಮುಮನ್ನನ ಟಿಪ್ಪಣಿ: 'ನಾನು ನಿಮ್ಮನ್ನು (ವಿದ್ಯಾರ್ಥಿಗಳನ್ನು) ಕೇಳುತ್ತೇನೆ-ಟೋರ್ಝನ್ ಮೂರು ಪೆಟ್ಟು ತಿನ್ನಲರ್ಹನೆ? ನೀವು ಹೌದೆಂದರೆ ಟೋರ್ಝನ್‌ಗೆ ಮಾತ್ರವಲ್ಲ ನಿಮಗೆ ಪ್ರತಿಯೊಬ್ಬರಿಗೂ ದೊಣ್ಣೆಯೇಟಿನ ಅಗತ್ಯವಿದೆ. ಅಲ್ಲವೆಂದರೆ ಉಮ್ಮನ್ ಸುಳ್ಳು ಹೇಳುತ್ತಾನೆಂದಾಯಿತು. ನೀವಿದನ್ನು ಸರಿಯಾಗಿ ಉತ್ತರಿಸಿದರೆ ಟೋರ್ಝನ್‌ಗೆ ಸಿಕ್ಕಿದ ಉತ್ಕೃಷ್ಟ ರ್ಝೆನ್ ಆಹಾರ ನಿಮಗೂ ಸಿಕ್ಕುವುದು."

ಮುಮನ್ನನ ಈ ಟಿಪ್ಪಣಿಯಲ್ಲದಿದ್ದರೆ ಟೋರ್ಝನ್–ಉಮ್ಮನ್ನರ ಸಂಭಾಷಣೆ ರ್ಝೆನ್ ಪ್ರಸಂಗವಾಗುತ್ತಿತ್ತು; ಕೊಅನ್ ಆಗುತ್ತಿರಲಿಲ್ಲ. ರ್ಝೆನ್ ಕಥೆಗೂ ಮಂಡಿಗೆಗೂ ಏನು ವ್ಯತ್ಯಾಸ ಎಂಬುದನ್ನು ನಿರ್ಧರಿಸುವುದು ಕಷ್ಟವೇ ಆದರೂ ಮುಮನ್ನನ ವಿಮರ್ಶೆಯ ವೈಶಿಷ್ಟ್ಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಮಾತ್ರ ಈ ಮಾತು ಹೇಳಿದೆ. ಓದುಗರು ಸಾಮಾನ್ಯವಾಗಿ ಗಮನಹರಿಸದೆ ಇರಬಹುದಾದ ಅಥವಾ ಅನವಶ್ಯ ಎಂದು ಬಿಟ್ಟುಬಿಡಬಹುದಾದ ವಿಷಯಗಳ

ಕಡೆಗೆ ಗಮನ ಸೆಳೆದು ಇಡೀ ಪ್ರಸಂಗಕ್ಕೆ ಬೇರೆ ಸ್ವರೂಪ ಕೊಡುವುದು ಇವನ ಶೈಲಿ. ಬುದ್ಧನು ಹೂ ತಿರುಗಿಸಿದಾಗ ಮಹಾಕಾಶ್ಯಪ ನಕ್ಕ ಪ್ರಸಂಗಕ್ಕೆ ಮುಮನ್ನನ ಟಿಪ್ಪಣಿ ಈ ರೀತಿಯದು. ಇದಕ್ಕೆ ನಾನ್‌ಸೆನ್ಸ್ ಸಾಹಿತ್ಯದಲ್ಲಿ ಒಂದು ಹೋಲಿಕೆಯನ್ನು ಗಮನಿಸಿ. ಇದು, ಲೂಯಿಸ್ ಕೆರೋಲ್‌ನ 'ಥ್ರೂ ದಿ ಲುಕಿಂಗ್ ಗ್ಲಾಸ್'ನಿಂದ ಆರಿಸಿ ಹೋಲಿಕೆಯ ಅನುಕೂಲಕ್ಕಾಗಿ ರೂಪಾಂತರಿಸಿದ ಒಂದು ಪ್ರಸಂಗ.

ಒಬ್ಬ ಬಡಗಿ ಮತ್ತು ಒಂದು ವಾಲ್ರಸ್ ಕೆಲವು ಆಯ್‌ಸ್ಟರ್‌ಗಳನ್ನು ಮೃದು ಮಾತಿನಿಂದ ಮರಳುಗೊಳಿಸಿ ವಿಹಾರಕ್ಕೆಂದು ದೂರ ಕರೆದುಕೊಂಡು ಹೋಗುತ್ತಾರೆ. ನಂತರ ಅವರಿಬ್ಬರೂ ಆಯ್‌ಸ್ಟರ್‌ಗಳನ್ನು ಕತ್ತರಿಸಿ ತಿನ್ನತೊಡಗುತ್ತಾರೆ. ಬಡಗಿ ಹೆಚ್ಚೇನೂ ಹೇಳದೆ 'ಇನ್ನೊಂದು ತುಂಡು' ಎಂದು ಕೇಳಿ ತಿನ್ನುತ್ತಿರುತ್ತಾನೆ. ವಾಲ್ರಸ್ ಅವುಗಳ ದುರಂತಕ್ಕಾಗಿ ಕಣ್ಣೀರಿಳಿಸುತ್ತ ಸುರಿಯುವ ಕಣ್ಣೀರಿಗೆ ಕರವಸ್ತ್ರ ಅಡ್ಡಹಿಡಿಯುತ್ತ ಅವುಗಳನ್ನು ಕತ್ತರಿಸುತ್ತಿರುತ್ತದೆ. ಕೊನೆಗೆ, 'ಆಯ್‌ಸ್ಟರ್‌ಗಳೇ ವಿಹಾರ ಚೆನ್ನಾಗಿತ್ತಲ್ಲ! ಇನ್ನು ಮನೆಗೆ ಹೊರಡೋಣವೆ?' ಎಂದು ಬಡಗಿ ಕೇಳುತ್ತಾನೆ. ಉತ್ತರ ಕೊಡುವುದಕ್ಕೆ ಒಂದು ಆಯ್‌ಸ್ಟರೂ ಇರುವುದಿಲ್ಲ.

ಟ್ವೀಡ್ಲ್‌ಡಂನ ಟಿಪ್ಪಣಿ: ವಾಲ್ರಸ್ ಆಯ್‌ಸ್ಟರ್‌ಗಳ ಬಗ್ಗೆ ಕರುಣೆ ತಳೆಯಿತೆಂದು ಹೇಳುವುದಕ್ಕಾಗುವುದಿಲ್ಲ. ಅದು ಬಡಗಿಗಿಂತ ಹೆಚ್ಚೇ ತಿಂದಿದೆ. ಯಾಕೆಂದರೆ ಅದು ತಾನೆಷ್ಟು ತಿಂದೆನೆಂದು ಬಡಗಿಗೆ ತಿಳಿಯಬಾರದೆಂದು ಕರವಸ್ತ್ರ ಅಡ್ಡ ಹಿಡಿದಿತ್ತಲ್ಲ! ಬಡಗಿಯನ್ನು ಮೆಚ್ಚೋಣವೆಂದರೆ ಅವನೂ ತನ್ನಿಂದಾದಷ್ಟು ಆಯ್‌ಸ್ಟರ್‌ಗಳನ್ನು ತಿಂದಿದ್ದಾನೆ. ಈಗ ಹೇಳು, ಇವರಿಬ್ಬರಲ್ಲಿ ಯಾರನ್ನು ಮೆಚ್ಚುವಿ?

ಆಲಿಸ್ ಎಂಬ ಹುಡುಗಿ ತಾನು ವಾಲ್ರಸ್‌ನ್ನು ಮೆಚ್ಚುವೆನೆಂದು ಯೋಚಿಸದೆ ಹೇಳಿದ್ದಕ್ಕೆ ಟ್ವೀಡ್ಲ್‌ಡಂ ನೀಡಿದ ನಾನ್‌ಸೆನ್ಸ್ ವಿಶ್ಲೇಷಣೆ ಇದು.

ಮುಮನ್ನನ ಟಿಪ್ಪಣಿಗಳಲ್ಲಿ ಇನ್ನೊಂದು ವೈಶಿಷ್ಟ್ಯವನ್ನು ಗಮನಿಸಬಹುದು. ಬುದ್ಧನಿರಲಿ, ಬೋಧಿ ಧರ್ಮನಿರಲಿ, ಇನ್ನಾರೇ ಝೆನ್ ಗುರುವಿರಲಿ ಮುಮನ್ ಅವರನ್ನು ವೈಯಕ್ತಿಕವಾಗಿ ಹೀಯಾಳಿಸಿಯೇ ಟಿಪ್ಪಣಿ ಬರೆದಿರುವುದನ್ನು ಗಮನಿಸಬಹುದು. ವಿದ್ಯಾರ್ಥಿಗಳು ಯಾವನೇ ಪ್ರಸಿದ್ಧ ಗುರುವಿನ ಹೆಸರು ಬಂದೊಡನೇ ಇಡೀ ಪ್ರಸಂಗವನ್ನೇ ಅರ್ಥದ ಸ್ಫೋಟದ ನಿರೀಕ್ಷೆಯಿಂದಲೇ ಓದಬಹುದು. ಇದನ್ನು ನಿವಾರಿಸಲು ಮುಮನ್ ಮೊದಲು ಪ್ರಸಂಗಕ್ಕೆ ಸಂಬಂಧವೇ ಇಲ್ಲದಿದ್ದರೂ ವೈಯಕ್ತಿಕ ಹೀಯಾಳಿಕೆ ಮಾಡಿರಬಹುದೋ ಏನೋ. ಲೇವಡಿ ಮಾಡುವುದೇ ಅವನ ಗುರಿಯಲ್ಲ, ಅಥವಾ ವೈಯಕ್ತಿಕ ಪೂರ್ವಾಗ್ರಹವೂ ಅಲ್ಲ. ಉಮ್ಮೊನ್ನನನ್ನು ಒಂದು ಟಿಪ್ಪಣಿಯಲ್ಲಿ ಹೀಯಾಳಿಸಿರುವ ಮುಮನ್ ಇನ್ನೊಂದರಲ್ಲಿ ಆತನ ಬಗ್ಗೆ ಮೆಚ್ಚಿಗೆ ಸೂಚಿಸಿರುವುದನ್ನು ಕಾಣಬಹುದು.

ತೀರ ಲಘುವಾಗಿ ಕಾಣುವ ಬರಹಗಳು ಅನೇಕ ವೇಳೆ ಗಹನವಾದ ವಿಚಾರಗಳನ್ನು ಹೊಳೆಯಿಸುತ್ತವೆ. ಕೆರೋಲ್‌ನ ನಾನ್‌ಸೆನ್ಸ್ ಕಥಾನಕದ ಕೊನೆಗೆ ಆಲಿಸ್ ಎಂಬ ಹುಡುಗಿ ತಾನು ಕಂಡ ಕನಸಿನಲ್ಲಿ ಕೆಂಪು ರಾಜನಿದ್ದನೋ, ತಾನೇ ಅವನ ಕನಸಿನಲ್ಲಿದ್ದನೋ ಎಂದು ಯೋಚನೆಗೀಡಾಗುತ್ತಾಳೆ. ಝೆನ್ ಸಾಹಿತ್ಯದಲ್ಲಿ ಬಂದಿದ್ದರೆ ಇದೊಂದು ಮಂಡಿಗೆಯಾಗಬಹುದಿತ್ತು. ನಮ್ಮ ಪೂರ್ವನಿರ್ಧಾರಿತ ಯೋಚನಾಕ್ರಮಗಳಿಗೆ ಶಾಕ್ ಕೊಡುವ ಕೆಲಸವನ್ನು ನಾನ್‌ಸೆನ್ಸ್ ಸಾಹಿತ್ಯ ಮತ್ತು ಝೆನ್ ಸಾಹಿತ್ಯ ಇವೆರಡೂ ಮಾಡುವುದರಿಂದ ಝೆನ್ನನ್ನು ಸಾಹಿತ್ಯವನ್ನಾಗಿ ಓದುವ ಈ ಪ್ರಯತ್ನದಲ್ಲಿ ಇವೆರಡನ್ನು ಹೋಲಿಸಿದೆ. ಅದಕ್ಕೆ ಮುಮನ್ನನ ವಿಮರ್ಶೆ ಒಂದು ಉತ್ತಮ ಪ್ರಾತಿನಿಧಿಕ ಬರಹವೆಂದು ಅನಿಸಿತು.

೩

ಕೊನೆಗೆ ಈ ಲೇಖನಕ್ಕೆ ಅಗತ್ಯವಿಲ್ಲದಿದ್ದರೂ ಅಪ್ರಸ್ತುತವಲ್ಲದ ಒಂದು ಪರಿಶಿಷ್ಟ. ಅಂಬನ್ ಎಂಬ ರ್ಝೆನ್ ವಿದ್ಯಾರ್ಥಿ ಮುಮನ್ನನ ಟಿಪ್ಪಣಿಗಳನ್ನು ಟೀಕಿಸಿದ್ದಾನೆ. ಅದು ನಿಜವಾಗಿಯೂ ಮುಮನ್ ಬರೆದ ಧಾಟಿಯಲ್ಲಿಯೇ, ಅವನೇ ಬರೆದ ಹಾಗೆ ಇದೆ. ಮುಮನ್ನನಿಗೆ ಕೂಡ ಅದು ಖುಷಿ ಕೊಟ್ಟಿರಬಹುದು! ಅದು ಹೀಗಿದೆ—

ಅಂಬನ್ ಎಂಬ ಅದೀಕ್ಷಿತ ರ್ಝೆನ್ ವಿದ್ಯಾರ್ಥಿ ಹೇಳಿದ: 'ಮುಮನ್ ಈಗಷ್ಟೆ ನಲವತ್ತೆಂಟು ಕೋಅನ್‌ಗಳ ಪುಸ್ತಕ ಪ್ರಕಟಿಸಿ ಅದನ್ನು 'ದ್ವಾರವಿಲ್ಲದ ದ್ವಾರ' ಎಂದು ಕರೆದಿದ್ದಾನೆ. ಅವನು ಹಳೆಯ ರ್ಝೆನ್ ಕುಲಪತಿಗಳ ಮಾತು—ಕೃತಿಗಳನ್ನು ಟೀಕಿಸುತ್ತಾನೆ. ಅವನು ಮಹಾ ತಂಟೆಕೋರ ಎಂದು ನನಗನಿಸುತ್ತದೆ. ಅವನು ದಾರಿಹೋಕನನ್ನು ಹಿಡಿದು ಬಲವಂತವಾಗಿ ಅವನ ಬಾಯಿಗೆ ಕಜ್ಜಾಯ ತುರುಕುವ ಹಳೆ ಕಜ್ಜಾಯ ಮಾರುವವನಂತೆ. ಗಿರಾಕಿ ಕಜ್ಜಾಯವನ್ನು ನುಂಗಲೂ ಆರ ಉಗುಳಲೂ ಆರ; ಮತ್ತು ಇದರಿಂದ ಹಿಂಸೆಯಾಗುತ್ತದೆ. ಮುಮನ್ ಎಲ್ಲರನ್ನೂ ಸಾಕಷ್ಟು ರೇಗಿಸಿದ್ದಾನೆ. ಆದ್ದರಿಂದ ನಾನು ಈ ವ್ಯವಹಾರದಲ್ಲಿ ತಲೆ ಹಾಕಿ ಇನ್ನೊಂದು ಕೊಅನ್ ಸೇರಿಸುತ್ತೇನೆ. ಇದನ್ನು ಅವನು ನುಂಗಬಹುದೋ ಎಂದು ನನಗೆ ಕುತೂಹಲವಿದೆ. ಅವನು ತಿಂದು ಜೀರ್ಣಿಸಿಕೊಳ್ಳಬಲ್ಲನಾದರೆ ಒಳ್ಳೆಯದೆ. ಇಲ್ಲದಿದರೆ ನಾವು ಇದನ್ನು ಅವನ ನಲವತ್ತೆಂಟರ ಜತೆ ಸೇರಿಸಿ ಬಾಣಲೆಗೆ ಹಾಕಿ ಪುನಃ ಬೇಯಿಸಬೇಕಾಗುವುದು. ಮುಮನ್, ಉಳಿದವರಿಗಿಂತ ಮುಂಚೆ ನೀನೇ ತಿನ್ನು ನೋಡೋಣ'.

ಒಂದು ಸೂತ್ರದ ಪ್ರಕಾರ ಬುದ್ಧ ಒಮ್ಮೆ ಹೇಳಿದ್ದ: "ನಿಲ್ಲಿಸಿ, ನಿಲ್ಲಿಸಿ. ಮಾತಾಡಬೇಡಿ. ಪರಮಸತ್ಯ ಎಂಬುದನ್ನು ಯೋಚಿಸಲು ಕೂಡ ಬಾರದು."

ಅಂಬನ್ನನ ಟಿಪ್ಪಣಿ: ಮೇಲೆ ಹೇಳಿದ ಬೋಧನೆ ಎಲ್ಲಿಂದ ಬಂತು? ಅದನ್ನು ಯೋಚಿಸಲು ಕೂಡ ಆಗದು ಹೇಗೆ? ಯಾರಾದರೂ ಅದರ ಬಗ್ಗೆ ಮಾತಾಡಿದರೆಂದಿಟ್ಟುಕೊಳ್ಳೋಣ, ಅದರಿಂದ ಏನಾಯಿತು? ಸ್ವತಃ ಬುದ್ಧನೇ ಭಯಂಕರ ವಾಚಾಳಿಯಾಗಿದ್ದ ಮತ್ತು ಈ ಸೂತ್ರದಲ್ಲಿ ತದ್ವಿರುದ್ಧ ಮಾತಾಡಿದ್ದಾನೆ. ಆದ್ದರಿಂದಲೇ ಮುಮನ್ನನ ಹಾಗೆ ಅನುಪಯುಕ್ತ ಕಜ್ಜಾಯ ಮಾಡಿ ಜನರಿಗೆ ಕಿರಿಕಿರಿ ಮಾಡುವಂಥವರು ನಂತರ ಚೀನದಲ್ಲಿ ಹುಟ್ಟಿಕೊಂಡರು. ಹಾಗಾದರೆ ನಾವೇನು ಮಾಡಬೇಕು? ನಾನು ನಿಮಗೆ ತೋರಿಸುವೆನು.

ನಂತರ ಅಂಬನ್ ಕರಗಳನ್ನು ಜೋಡಿಸಿ ನಮಸ್ಕರಿಸಿ ಹೇಳಿದ: 'ನಿಲ್ಲಿಸಿ, ನಿಲ್ಲಿಸಿ. ಮಾತಾಡಬೇಡಿ. ಪರಮಸತ್ಯ ಎಂಬುದನ್ನು ಯೋಚಿಸಲು ಕೂಡ ಬಾರದು. ಈಗ ಈ ಸೂತ್ರದ ಸುತ್ತ ಬೆರಳಿನಿಂದ ನಾನೊಂದು ವೃತ್ತ ಎಳೆಯುತ್ತೇನೆ. ಮತ್ತು ಅದರೊಳಗೆ ಆ ಐದು ಸಾವಿರ ಸೂತ್ರಗಳನ್ನೂ ಸೇರಿಸುತ್ತೇನೆ. ಹಾಗೆಯೇ ವಿಮಲಕೀರ್ತಿಯ ದ್ವಾರವಿಲ್ಲದ ದ್ವಾರ ಎಲ್ಲವೂ ಇಲ್ಲಿವೆ.'

**ಬೆಂಕಿ ಬೆಳಕೆಂದು ಯಾರಾದರೂ ಹೇಳಿದರೆ**
**ನಿಮಗೆ**
**ಅದರತ್ತ ಹರಿಸಬೇಡಿ ಗಮನ,**
**ಇಬ್ಬರು ಕಳ್ಳರು ಭೇಟಿಯಾದಾಗ ಬೇಕಿಲ್ಲ**
**ಪರಿಚಯದ ಮನಃ**
**ಪ್ರಶ್ನೆಯಿಲ್ಲದೆಯೆ ಗುರುತಿಸುವರವರು**
**ಪರಸ್ಪರ**



# ಫೋನು

ಮೂಲ : **ತಾತಿಯಾನಾ ಅಂಡ್ರೈವಾ**
ಕನ್ನಡಕ್ಕೆ : **'ಕುಂವೀ**

ರಾತ್ರಿ ಒಂದು ಗಂಟೆ ಹೊತ್ತಿಗೆ ಟೆಲಿಫೋನ್ ರ್ರಿಣ್‌ಗುಟ್ಟಿದ ಪರಿಣಾಮವಾಗಿ ಆಕೆಯು ಕಣ್ಣಿಗೆ ನಿದ್ದೆ ಮತ್ತೆ ಆಡರಲಿಲ್ಲ.

ಬೇಸರದಿಂದ ರಿಸೀವರನ್ನು ಕೈಗೆತ್ತಿಕೊಂಡಳು.

"ಹಲ್ಲೋ" ಆ ಕಡೆಯಿಂದ ಗಂಡು ಸ್ವರವೊಂದು ಇಂಪಾಗಿ ಕೇಳಿ ಬಂತು. ಅಪರಿಚಿತ ಸ್ವರ.

"ಏನಿದು ! ಏನಾಯ್ತು!" ಆಕೆ ಸಿಟ್ಟಿನಿಂದ ಕಿರುಚಿದಳು.

"ಅಯ್ಯೊ ಏನೂ ಆಗಿಲ್ಲ ನನಗೆ: ಚೆನ್ನಾಗಿಯೇ ಇದ್ದೇನೆ... ಆದರೆ ನಿದ್ದೆ ಮಾತ್ರ ಬರುತ್ತಿಲ್ಲ ಅಷ್ಟೆ," ಬಹಳ ಜಾಣತನದಿಂದ ನುಡಿದ ಆತ.

"ಈ ಹೊತ್ತಿನಲ್ಲಿ ಮಾತಾಡೋದು ನನಗೇನು ಸರಿಕಾಣುವುದಿಲ್ಲ. ರಾತ್ರಿ ತೆಪ್ಪಗೆ ನಿದ್ದೆ ಮಾಡಬೇಕು ಅಷ್ಟೆ!" ಎಂದು ಸಿಟ್ಟಿನಿಂದ ಆಕೆ ರಿಸೀವರನ್ನು ಕುಟ್ಟಿದಳು.

ಮರುದಿನ ರಾತ್ರಿ ಅದೇ ಹೊತ್ತಿಗೆ ಫೋನು ಮತ್ತೆ ರ್ರಿಣ್‌ಗುಟ್ಟಿತು.

"ಹಲ್ಲೋ" ಆಕೆ ಅವಸರದಿಂದ ಗೊಣಗಿದಳು.

"ಹಲ್ಲೋ... ಗುಡ್ ಈವ್ನಿಂಗ್" ಅದೇ ಗಂಡಸಿನ ಸ್ವರ.

"ಈ ದಿನ ಕೂಡ ನಿದ್ದೆ ಬರುತ್ತಿಲ್ಲ... ಅದರಿಂದ ಫೋನು ಮಾಡಬೇಕಾಗಿ ಬಂತು."

"ಅಸಲು ಈಗ ಟೈಮು ಏಷ್ಟಾಗಿದೆ ಅಂತಾದರೂ ಗೊತ್ತೋ?" ಆಕೆ ಉಗ್ರ ಸ್ವರದಿಂದ ಗಟ್ಟಿಯಾಗಿ ಕಿರುಚಿದಳು.

"ಗೊತ್ತಿಲ್ಲ... ನನ್ನ ಗಡಿಯಾರ ಯಾವತ್ತೋ ನಿಂತು ಹೋಗಿದೆ... ಆದರೆ ನೀವು ಸಮಯ ತಿಳಿಯಬಯಸಿರುವಿರಾದರೆ ಅಕ್ಕ ಪಕ್ಕದ ಮನೆಗಳಿಗೆ ಹೋಗಿಯಾದರೂ ಕೇಳಿಕೊಂಡು ಬಂದು ಹೇಳ್ತೇನೆ."

"ನೀವೇನು ಅಕ್ಕಪಕ್ಕದ ಮನೆಗಳಿಗೆ ಹೋಗಿ ಟೈಂ ತಿಳಿದುಕೊಂಡು ಬರಬೇಕಾದ ಅವಶ್ಯಕತೆ ಇಲ್ಲ. ಬೇಕಾದರೆ ನಾನೇ ಹೇಳ್ತೇನೆ. ಈಗ ರಾತ್ರಿ ಸರಿಯಾಗಿ ಒಂದು ಗಂಟೆ. ಬೇರೆ

ಯವರಿಗೆ ಇಂಥ ಹೊತ್ನಲ್ಲಿ ಫೋನು ಮಾಡಿ ತೊಂದರೆ ಕೊಡೋದು ಸರಿಯಲ್ಲ? ತಿಳೀತಾ! ಎಷ್ಟು ಧೈರ್ಯ ನಿಮಗೆ?" ಆಕೆ ಕಿರುಚಿ ಕೊಂಡಳು.

"ಹೋಗ್ಲಿ ಬಿಡಿ. ಯಾಕೆ ಸಿಟ್ಟು ಮಾಡಿ ಕೊಳ್ಳುತ್ತೀರಾ... ಪರಸ್ಪರ ಪರಿಚಯುವನ್ನಾ-ದರೂ ಮಾಡಿಕೊಳ್ಳೋಣ, ನನ್ನ ಹೆಸರು ವಿಕ್ಟರ್... ತಮ್ಮ ಹೆಸರು!" ಆತ ರೆಡಿಮೇಡ್ ಉತ್ತರ ಕೊಟ್ಟ.

"ನೀನೊಬ್ಬ ಚಿಕ್ಕ ಮಗುವಿನ ಥರ ಮಾತಾಡ್ತಿದೀಯಾ!" ಆಕೆ ಬೇಕೆಂದೆ ನುಡಿದಳು.

"ನಾನೊಬ್ಬ ಇಂಜಿನಿಯರ್, ಇಪ್ಪತ್ತೊಂ-ಬತ್ತು ವಯಸ್ಸು ನನಗೀಗ. ಇನ್ನೂ ಅವಿ-ವಾಹಿತ. ಸಾಕಷ್ಟು ಆದಾಯ ಕೂಡಾ ಇದೆ ನನಗೆ" ನಗುತ್ತ ನುಡಿದನಾತ.

"ಏನದು! ಸಾಕಷ್ಟು ಆದಾಯವೆ? ಬಹಳ ವಿಚಿತ್ರವಾಗಿದೆ. ನೀವು ಹೇಳುತ್ತಿರುವುದು!" ಎಂದು ಆಕೆ ರಿಸೀವರನ್ನು ಕುಕ್ಕಿದಳು.

ಮರುದಿನ ರಾತ್ರಿ ಮಾಮೂಲು ಹೊತ್ತಿಗೆ ಐದು ನಿಮಿಷಕ್ಕೂ ಮೊದಲೇ ಆಕೆ ಎಚ್ಚೆತ್ತು ಟೆಲಿಫೋನಿನ ಪಕ್ಕವೆ ಕಾಯುತ್ತ ಕೂತಿದ್ದಳು. ಕೋಣೆಯು ತುಂಬ ಬೆಳಕು ಚೆಲ್ಲಿಕೊಂಡು ಕಾಫಿ ಸೇವಿಸುತ್ತ ಕೂತಿದ್ದ ಆಕೆ ಫೋನು ಸದ್ದು ಮಾಡುತ್ತಲೆ ಗಬಕ್ಕನೆ ರಿಸೀವರ್ ಎತ್ತಿಕೊಂಡಳು.

"ಹಲ್ಲೋ... ಈ ಹೊತ್ತಿನಲ್ಲಿ ಒಂಟಿಯಾಗಿ-ರುವ ನೀವೂ ನನ್ನ ಹಾಗೆ ನಿದ್ದೆ ಮಾಡಲಾರಿರಿ ಎಂದು ತಿಳಿದೇ ನಾನು ಒಂದಿಷ್ಟು ಮುಂಚಿತವಾಗಿ ಫೋನು ಮಾಡುತ್ತಿರುವೆ... ಒಂದೈದು ನಿಮಿಷ ಗಳ ಮಟ್ಟಿಗಾದರೂ ಸುಖವಾಗಿ ಮಾತಾಡಿ ಕೊಳ್ಳೋಣ... ಇದಕ್ಕೆ ನಿಮ್ಮ ಒಪ್ಪಿಗೆ ಇದೆ-ಯಷ್ಟೆ?" ಅಪರಿಚಿತ ಗಂಡು ಸ್ವರ ನಗುತ್ತ ನುಡಿ-ಯಿತು.

"ನಿಜ ಹೇಳು. ನೀನು ನನ್ನಿಂದ ಏನನ್ನು ನಿರೀಕ್ಷಿಸುತ್ತಿರುವೆ?" ಆಕೆ ಆವೇಶದಿಂದ ದೃಢ ವಾಗಿ ಕೇಳಿದಳು.

"ಏನೋ ನನಗೆ ಗೊತ್ತಿಲ್ಲ ಮೇಡಂ. ಸುಮ್ನೆ ತಮಾಷೆಯಾಗಿ ಮಾತಾಡಿಕೊಳ್ಳೋಣ ಅಂತ ಇಷ್ಟಪಡುತ್ತೇನಷ್ಟೆ. ಇಲ್ಲಿ ನನ್ನೊಂದಿಗೆ ಮಾತಾ ಡಲು ಯಾರೂ ಇಲ್ಲ. ನಿಮ್ಮದೂ ಇದೇ ಸ್ಥಿತಿ ಅಲ್ಲವೆ?"

ಅಂಥ ಸಿಟ್ಟಿನ ನಡುವೆಯೂ ಆಕೆ ಮುಸಿ ಮುಸಿ ನಕ್ಕಳು.

"ಹೌದು...ನನಗೂ ಒಮ್ಮೊಮ್ಮೆ ಅಂಥ ಅನುಭವ ಆಗುತ್ತಿರುತ್ತದೆ..." ಎಂದಳು.

"ನಾಳೆಯೊಳಗಾಗಿ ವಾರ್ಷಿಕ ಲೆಕ್ಕಗಳನ್ನೆಲ್ಲ ತಯಾರಾಗಿಡಬೇಕು. ಆದರೆ ಕೆಲವು ಅಂಕಿಗಳು ಇನ್ನೂ ಸಿಗುತ್ತಿಲ್ಲ..."

ನಿರ್ಲಕ್ಷ್ಯದಿಂದ ಆಕೆ ಮೆಲ್ಲಗೆ ನುಡಿದಳು.

"ನಿನ್ನ ಶನಿಕಾಟ ಸದ್ಯಕ್ಕೆ ತಪ್ಪಿದಂತೆ ಕಾಣು ತ್ತಿಲ್ಲ... ದಯವಿಟ್ಟು ಇನ್ನು ಮುಂದೆ ರಾತ್ರಿ ಮಾತ್ರ ನನಗೆ ಈ ಥರ ಫೋನು ಮಾಡಿ ತೊಂದರೆ ಕೊಡಬೇಡ. ಹೀಗೇ ನೀನು ತೊಂದರೆ ಕೊಡ್ತಾ ಇದ್ರೆ ನಿದ್ರೆ ಇಲ್ಲದೆ ನರಳುತ್ತಿರ ಬೇಕಾಗುತ್ತದೆ ನಾನು..."

"ಹಗಲು ಹೊತ್ತಿನಲ್ಲಿ ನನಗೆ ಪುರುಸೊತ್ತಿ ರೋದಿಲ್ಲ... ಹೋಗಲಿ ಯಾವ ಸಮಯದಲ್ಲಿ ನಿಮಗೆ ನಾನು ಫೋನು ಮಾಡಬಹುದು... ಅದನ್ನಾದರೂ ಹೇಳ್ತೀರಾ?" ಎಂದು ದೈನ್ಯದಿಂದ ಕೇಳಿದ ಆತ.

"ಸಾಧ್ಯವಿಲ್ಲಂದ್ರೆ ಸಾಧ್ಯವಿಲ್ಲ." ಒಮ್ಮೆಗೆ ಕೂಗಿದ ಆಕೆ ಫೋನು ಕುಕ್ಕಿದಳು. ಮರುದಿನ ರಾತ್ರಿ ಅರ್ಧ ಗಂಟೆ ಮೊದಲೇ ಆಕೆ ಫೋನಿಗಾಗಿ ಕಾಯುತ್ತ ಕುಳಿತಳು.

"ದಯವಿಟ್ಟು ನನ್ನನ್ನು ಕ್ಷಮಿಸಬೇಕು. ನಿಮ್ಮ ಮನಃಸ್ಥಿತಿ ಸರಿಯಾಗಿರಲಿಲ್ಲವೇನೋ ಎಂದು ಕೊಂಡೆ ನಾನು...ಪ್ರಾಯಶಃ ರಾತ್ರಿ ಹೊತ್ತು ಫೋನು ಮಾಡೋದ್ರಿಂದ ನಿಮಗೆ ತೊಂದರೆ ಯಾಗ್ತದೆ ಏನೊ! ಆದರೆ ಒಂದು ವಿಷಯ..." ಎಂದು ಆತನೇನೋ ಹೇಳಲಿದ್ದಾಗ ಆಕೆ ಮಧ್ಯೆ ಬಾಯಿ ಹಾಕಿ,

"ಏನೋ ಗಂಡಸೇ...ಸ್ವಲ್ಪ ಬಾಯಿ ಮುಚ್ಚಿಕೊಳ್ಳೀಯಾ?" ಎಂದು ಗದರಿಸಿದಳು. "ನೀನು ಹೀಗೆ ಹೊತ್ತಿಲ್ಲದ ಹೊತ್ತಿನಲ್ಲಿ ಫೋನು ಮಾಡಿ ಅಸಭ್ಯ ಮಾತುಗಳನ್ನಾಡುವುದನ್ನು ಗಮನಿಸುತ್ತಲೇ ಇರುವೆನಲ್ಲ. ಹೀಗೆ ವರ್ತಿಸೋರು ಮನುಷ್ಯತ್ವ ಇಲ್ಲದವರು ಮಾತ್ರ ಎಂಬುದನ್ನು ಜ್ಞಾಪಿಸಿಕೋ. ನಾನು ನಿನಗೆ ಏನು ಮಾಡಬೇಕೋ ತಿಳಿಯುತ್ತಿಲ್ಲ. ಇಷ್ಟೆಲ್ಲ ತೊಂದರೆ ಕೊಟ್ಟಿರುವ, ಕೊಡುತ್ತಿರುವ, ನಿನಗೆ ಅಪಾಯಗಳನ್ನು ತಂದೊಡ್ಡುವುದಿಲ್ಲ ಎಂದು ಮಾತ್ರ ಮಾತು ಕೊಡಬಲ್ಲೆ."

"ಥ್ಯಾಂಕ್ಯೂ" ಎಂದು ಆತ ಮತ್ತೆ ನಗೆಯಾಡಿದ.

"ನೀವು ಇವತ್ತು ಯಾಕೋ ತುಂಬ ಸಿಟ್ಟಿನಲ್ಲಿರುವಿರಿ. ನಿಮ್ಮ ಜೊತೆ ಇನ್ನೊಮ್ಮೆ ಒಳ್ಳೇ ಸಮಯದಲ್ಲಿ ಫೋನಿನಲ್ಲಿ ಮಾತಾಡುವೆ" ಎಂದನಾತ.

"ಯಾವ ಸಮಯದಲ್ಲೂ ನೀನು ಫೋನು ಮಾಡಬೇಕಾಗಿಲ್ಲ." ಆಕೆ ಗಟ್ಟಿಯಾಗಿ ಅರಚಿಕೊಂಡು ರಿಸೀವರನ್ನು ಅವನಿಗೆ ಕೇಳಿಸುವಂತೆ ಕುಕ್ಕಿದಳು.

ಮರುದಿನ ರಾತ್ರಿ ಆಕೆಗೆ ನಿದ್ದೆ ಬರಲಿಲ್ಲ... ಕೋಣೆಯಲ್ಲಿ ಅತ್ತಿಂದಿತ್ತ, ಇತ್ತಿಂದತ್ತ ತಿರುಗಾಡತೊಡಗಿದಳು. ತನಗೆ ತಾನೇ ಮಾತಾಡಿಕೊಳ್ಳುತ್ತ; ಹಲ್ಲುಗಳನ್ನು ಉಜ್ಜಿ ಕಟಕರಿಸುತ್ತ ಫೋನು ಬರುತ್ತಲೇ ಆತನಿಗೇನು ಉತ್ತರ



ಕೊಡಬೇಕೆಂದು ತನ್ನಷ್ಟಕ್ಕೆ ತಾನೇ ಊಹಿಸಿಕೊಳ್ಳ ತೊಡಗಿದಳು. ಆತ ಮಾತ್ರ ಆ ರಾತ್ರಿ ಫೋನು ಮಾಡಲೇ ಇಲ್ಲ.

ಆಕೆ ಇಡೀ ವಾರ ನಿದ್ದೆ ಮಾಡದೆ ಫೋನಿಗಾಗಿ ಎದುರು ನೋಡಿದಳು. ಆದರೆ ಆತನಿಂದ ಫೋನು ಬರಲೇ ಇಲ್ಲ. ಆತ ಫೋನು ಮಾಡಿದರೆ ತಾನು ಕೊಡಬೇಕೆಂದಿರುವ ಉತ್ತರವನ್ನು ಸಾಭಿನಯವಾಗಿ ಕಂಠಪಾಠ ಮಾಡಿಟ್ಟುಕೊಂಡಿದ್ದಳಾಕೆ.

ಆದರೆ ಆತ ಫೋನು ಮಾಡಲಿಲ್ಲ.

ಅದರಿಂದಾಗಿ ಆಕೆಗೆ ಆತನ ಬಗ್ಗೆ ಕರುಣೆ ಎನಿಸಿತು. ಒಂದು ಪಕ್ಷದಲ್ಲಿ ಆತ ಫೋನು ಮಾಡಿದಾಕ್ಷಣ ತಾನು ಯಾಕೆ ಆತನನ್ನು ಕೆಟ್ಟ ಶಬ್ದಗಳಿಂದ ಬಯ್ಯಬೇಕು? ತನಗೆ ಯಾವ ಕೇಡನ್ನೂ ಮಾಡದ ಮಾತಿನಲ್ಲೂ ಕೇಡನ್ನು ಬಯಸದ ಆತನೊಂದಿಗೆ ತಾನು ಯಾಕೆ ಕಠಿಣವಾಗಿ ವರ್ತಿಸಬೇಕು? ಈ ಬಾರಿ ಆತನೇನಾದರೂ ಫೋನು ಮಾಡಿದರೆ ತಾನು ಮಾತ್ರ ತುಂಬ ನಾಗರಿಕವಾಗಿ, ನಿರ್ಮಲವಾಗಿ ಉತ್ತರ ಕೊಡಬೇಕೆಂದು ನಿರ್ಧರಿಸಿದಳು.

ಆದರೆ ಆತ ಫೋನು ಮಾಡಲಿಲ್ಲ.

ಆತ ಅಷ್ಟೊಂದು ಸಾರಿ ಫೋನು ಮಾಡಿದಾಗಲೆಲ್ಲ ತಾನು ಮಾತ್ರ ಒಮ್ಮೆಯೂ ಆತನೊಂದಿಗೆ ಸೌಜನ್ಯದಿಂದ ವರ್ತಿಸಲಿಲ್ಲ. ಅಂಥ ಅವಕಾಶವನ್ನೇ ಕೊಡದೆ ಕಠಿಣವಾಗಿ ವರ್ತಿಸಿದೆನೆಂದುಕೊಂಡಳು. ಪಾಪ; ಅವನೊಬ್ಬ ಹುಡುಗಾಟದವನು. ತನ್ನಿಂದಾಗಿ ಅವನು ಎಷ್ಟು ನಿರಾಶೆಗೊಂಡಿರುವನೋ ಏನೋ? ಈ ಸಾರಿ ಅವನೇನಾದರೂ ಫೋನು ಮಾಡಿದಲ್ಲಿ ತಾನು ಮಾತ್ರ ವಿಶ್ವಾಸದ ಮಾತುಗಳನ್ನಾಡಬೇಕೆಂದುಕೊಂಡಳು.

ಆದರೆ ಆತ ಫೋನು ಮಾಡಲಿಲ್ಲ.

ಆಕೆ ನಿದ್ದೆ ಮಾಡುವುದನ್ನೇ ತೊರೆದಿದ್ದಳು. ಆತನೊಂದಿಗೆ ಹೇಗೆ ಮಾತಾಡಬೇಕು; ಸ್ನೇಹ ವಿಶ್ವಾಸ ಸೂಚಿಸುವಂಥ ಯಾವ ವಾಕ್ಯಗಳನ್ನು ಮಾತಾಡಬೇಕು ಎಂದು ಇಡೀ ರಾತ್ರಿ ಲೆಕ್ಕ ಹಾಕತೊಡಗಿದಳು. ಆತನಿಂದ ಫೋನು ಬಂದ ಕೂಡಲೆ ಆತನ ಜೀವನದ ಬಗ್ಗೆ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದುಕೊಂಡಳು. ಆತ್ಮೀಯವಾಗಿ ಚರ್ಚಿಸಬೇಕೆಂದುಕೊಂಡಳು.

ಆದರೆ ಆತ ಫೋನು ಮಾಡಲಿಲ್ಲ!!

ಈ ಸಾರಿ ಆಕೆ ಒಂದು ನಿರ್ಧಾರಕ್ಕೆ ಬಂದಳು.

ಆತನೊಂದಿಗೆ ಬದುಕಿನ ಎಲ್ಲ ವಿಷಯಗಳ ಬಗ್ಗೆ ಚರ್ಚಿಸಬೇಕೆಂದುಕೊಂಡಳು. ತಾನು ಒಂಟಿಯಾಗಿ ಬದುಕುತ್ತಿರುವುದು ಎಷ್ಟು ಕಷ್ಟವೆಂಬುದನ್ನು ಅವನಿಗೆ ಹೇಳಬೇಕು. ಆತ ಫೋನು ಮಾಡದಿದ್ದಾಗ ತಾನೆಷ್ಟು ನಿರಾಶಳಾದೆ ಎಂದು ಹೇಳಬೇಕು. ಆತನ ಸ್ವರ ಕೇಳುವ ತವಕದಿಂದಾಗಿ ನಿದ್ದೆ ಬಾರದೆ ಒದ್ದಾಡಿದ್ದನ್ನೂ ಹೇಳಬೇಕೆಂದುಕೊಂಡಳು.

ಆ ಒಂದು ರಾತ್ರಿ ಫೋನು ಮತ್ತೆ ರಿಂಗ್ ಗುಟ್ಟಿತು. ಅವಸರದಿಂದ ಆಕೆ ರಿಸೀವರ್ ಎತ್ತಿಕೊಂಡು "ಹಲೋ" ಎಂದಳು.

"ನನ್ನನ್ನು ಕ್ಷಮಿಸಬೇಕು. ಮತ್ತೆ ಈ ರಾತ್ರಿ ನನಗೆ ನಿದ್ದೆ ಬರ್ತಾಯಿಲ್ಲ. ಗುರ್ತಿಸಿದಿರಾ ನನ್ನ ಧ್ವನಿಯನ್ನು!" ಆತ ಕೇಳಿದ.

"ಗುರ್ತಿಸದೆ ಏನು?" ನಿರಾಶೆಯಿಂದ ಆಕೆಯ ಧ್ವನಿ ಕಂಪಿಸತೊಡಗಿತು. "ಈ ಮಧ್ಯರಾತ್ರಿಯಲ್ಲಿ; ಅದೂ ಒಂದು ಹೆಣ್ಣಿನ ಜೊತೆ ಫೋನು ಮಾಡುವ ಧೈರ್ಯ ನಿನಗಲ್ಲದೆ ಬೇರೆ ಯಾರಿಗೆ ಬರಲು ಸಾಧ್ಯ? ಮಾನ ಮರ್ಯಾದೆ ನಾಚ್ಕೆ-ಗೀಚ್ಕೆ ಇದ್ದಿದ್ರೆ ಹೀಗೆ ಫೋನು ಮಾಡುತ್ತಿದ್ದೆ ಏನು ನೀನು?"

ಆಕೆ ರಿಸೀವರನ್ನು ಮತ್ತೆ ಕುಕ್ಕಿದಳು. ❁





ಟಿ. ಎಂ. ಸುಬ್ಬರಾಯ

# ಮುತ್ಸದ್ಧಿ, ಶಾಂತಿದೂತ ಝೇವಿಯರ್ ಪೆರೆಜ್ ಡಿ' ಕ್ವಿಲಾರ್

೧೯೮೪ರ ಆಗಸ್ಟ್ ಒಂದರ ರಾತ್ರಿ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಝೇವಿಯರ್ ಪೆರೆಜ್ ಡಿ ಕ್ವಿಲಾರ್ ವಿಯನ್ನಾದ ಅತಿಥಿಗೃಹವೊಂದರಲ್ಲಿ ಗಾಢ ನಿದ್ದೆಯಲ್ಲಿದ್ದಾಗ ಪಕ್ಕದಲ್ಲಿದ್ದ ಟೆಲಿಫೋನ್ ಗಂಟೆ ಬಾರಿಸಿ ಅವರನ್ನು ಎಚ್ಚರಿಸಿತು: ಫ್ರಾನ್ಸ್‌ದೇಶದ ವಿದೇಶಾಂಗ ಸಚಿವ ಕ್ಲಾಡ್ ಚೇಯ್‌ಸನ್‌ರಿಂದ ತುರ್ತು ಕರೆ. ಕಾರಣವೇನೆಂದರೆ, ಕೈಬಾಂಬು ಹಾಗೂ ಚೂರಿಗಳನ್ನು ಹೊಂದಿರುವ ಮೂವರು ಭಯೋತ್ಪಾದಕರು ಫ್ರಾನ್ಸಿನ ಪ್ರಯಾಣಿಕ ವಿಮಾನವೊಂದನ್ನು ತೆಹರಾನ್‌ಗೆ ಅಪಹರಿಸಿಕೊಂಡು ಹೋಗಿದ್ದು, ಫ್ರೆಂಚ್ ಸರಕಾರ ಬಂಧನದಲ್ಲಿಟ್ಟಿರುವ ಇರಾಣಿನ ಐವರು ಭಯೋತ್ಪಾದಕರನ್ನು ಬಿಡುಗಡೆಗೊಳಿಸದಿದ್ದರೆ ಪ್ರಯಾಣಿಕರ ಸಹಿತ ವಿಮಾನವನ್ನು ಸ್ಫೋಟಿಸುವುದಾಗಿ ಬೆದರಿಕೆ ಹಾಕಿದ್ದಾರೆ. ಆದರಿಂದ ಡಿ' ಕ್ವಿಲಾರ್ ಇರಾಣ ಸರಕಾರದೊಡನೆ ಮಾತುಕತೆ ನಡೆಸಿ, ಅಪಹೃತ ವಿಮಾನ ತನ್ನ ಪ್ರಯಾಣಿಕರೊಂದಿಗೆ ಸುರಕ್ಷಿತವಾಗಿ ಮರಳಲು ಅವಕಾಶ ಮಾಡಿಕೊಡಬೇಕೆಂಬುದು ಚೇಯ್‌ಸನ್‌ರ ಕೋರಿಕೆ. ಕ್ಷಣವೂ ವಿಳಂಬ ಮಾಡದೆ ಡಿ' ಕ್ವಿಲಾರ್ ಕಾರ್ಯತತ್ಪರರಾದರು. ಕೆಲವೆ ಗಂಟೆಗಳಲ್ಲಿ ಇರಾಣಿ ಸೈನಿಕರು ಅಪಹೃತ ವಿಮಾನವನ್ನು ಸುತ್ತುವರಿದು ಅಪಹರಣಕಾರರನ್ನು ಬಂಧಿಸಿದರು.

ಅಪಹೃತ ವಿಮಾನ ಹಾಗೂ ಅದರಲ್ಲಿನ ಪ್ರಯಾಣಿಕರನ್ನು ಬಂಧವಿಮುಕ್ತರನ್ನಾಗಿಸಲು ಡಿ ಕ್ವಿಲಾರ್ ನೀಡಿದ ಸಕಾಲಿಕ ನೆರವಿಗಾಗಿ ಮಾರನೆಯ ದಿನ, ಫ್ರಾನ್ಸ್ ಸರಕಾರ ಅವರನ್ನು ಅಭಿನಂದಿಸಿತು. ಆಗಲೇ ಜಗತ್ತಿಗೆ ತಿಳಿದದ್ದು – ಅಪಹೃತ ವಿಮಾನ ಬಿಡುಗಡೆಗೊಳಿಸುವಲ್ಲಿ 'ಡಿ'

( ವಿವಿಧ ಮೂಲಗಳಿಂದ )

ಕ್ವಿಲಾರ್ ವಹಿಸಿದ ಪಾತ್ರ!

ಇದು ಡಿ' ಕ್ವಿಲಾರ್ ಅವರ ಕಾರ್ಯ ವೈಖರಿಯ ಒಂದು ಉದಾಹರಣೆ. ಈ ಬಗೆಯ ಎಷ್ಟೋ ಸಕಾಲಿಕ ಸಮಯಾನುವರ್ತನೆಗಳಿಂದಾಗಿ ಡಿ-ಕ್ವಿಲಾರ್ ಸಾವಿರಾರು ಜನ ನಿರಪರಾಧಿಗಳ ಜೀವ ಉಳಿಸಿದ್ದಾರೆ. ರಾಷ್ಟ್ರಗಳ ನಡುವಣ ಬಿರುಕನ್ನು ಮೈತ್ರಿಯುತ ಮಾತುಕತೆಗಳಿಂದ ಮುಚ್ಚಲೆತ್ನಿಸುತ್ತಿದ್ದಾರೆ.

೧೯೮೪ರಲ್ಲಿ ಇರಾಣಿನ ಸೈನಿಕರು ಇರಾಣಿನ ಪಡೆಗಳ ಮೇಲೆ ವಿಷಪೂರಿತ ಅನಿಲ ಬಾಂಬ್ ಪ್ರಯೋಗಿಸಿದ್ದಾರೆ ಎನ್ನುವ ವರದಿ ವಿಶ್ವಸಂಸ್ಥೆಗೆ ತಲಪಿದಾಗ ಡಿ' ಕ್ವಿಲಾರ್, ಈ ಕುರಿತು ಸಮಗ್ರ ತನಿಖೆ ನಡೆಸಿ ವರದಿ ಸಲ್ಲಿಸಲು ಪರಿಣತರ ತಂಡ-ವೊಂದನ್ನು ಕಳುಹಿಸಿದರು. ವಿಶ್ವ ಸಂಸ್ಥೆಯ ಹಿರಿಯ ಅಧಿಕಾರಿ ಇಕ್ಬಾಲ ರಿಜಾ ನೇತೃತ್ವದ ಈ ತಂಡದಲ್ಲಿ ಸ್ವಿಡ್ಜರ್‌ಲ್ಯಾಂಡ್, ಸ್ವೀಡನ್ ಸ್ಪೇನ್ ಹಾಗೂ ಆಸ್ಟ್ರೇಲಿಯಾ ದೇಶಗಳ ಪರಿಣಿತರಿದ್ದರು. ಈ ಪರಿಣಿತ ತಂಡ ಇರಾಣ ಮತ್ತು ಇರಾಕ್ ದೇಶಗಳ ಗಡಿ ಪ್ರದೇಶಗಳಿಗೆ ಭೇಟಿ ನೀಡಿ, ಸ್ಫೋಟಗೊಂಡು ಸಿಡಿದು ಬಿದ್ದಿದ್ದ ಬಾಂಬಿನ ತುಣುಕುಗಳನ್ನೂ, ಸ್ಫೋಟಗೊಳ್ಳದೆ ಉಳಿದಿದ್ದ ವಿಷಾನಿಲ ತುಂಬಿದ ಬಾಂಬನ್ನೂ ಪರಿಶೀಲಿಸಿತು. ಜೊತೆಗೆ ಯುದ್ಧದಲ್ಲಿ ಗಾಯಗೊಂಡು ಆಸ್ಪತ್ರೆಗೆ ಸೇರಿದ್ದ ಹಲವು ಸೈನಿಕರನ್ನೂ ಈ ತಂಡ ಸಂದರ್ಶಿಸಿತಲ್ಲದೆ, ಇರಾಣಿನ ಹದಿಮೂರು ಜನ ಸೈನಿಕರ ಕಳೇಬರಗಳನ್ನು ವೈಜ್ಞಾನಿಕ ತಪಾಸಣೆಗೆ ಗುರಿಪಡಿಸಿತು. ಆಗ ಇರಾಕ್ ವಿಷಾನಿಲ ಬಾಂಬ್‌ಗಳನ್ನು ಸ್ಫೋಟಿಸಿದ್ದು ದೃಢಪಟ್ಟಿತು. ಅನಂತರ ನಡೆದ ಭದ್ರತಾ ಸಮಿತಿಯ ಸಭೆಯಲ್ಲಿ ವಿಷಾನಿಲ-ಯುಕ್ತ, ಬಾಂಬ್‌ಗಳ ಪ್ರಯೋಗವನ್ನು ಖಂಡಿಸಿದ ಡಿ ಕ್ವಿಲಾರ್ ಇಂಥ ಬಾಂಬ್‌ಗಳನ್ನು ಇನ್ನು ಮುಂದೆ ಪ್ರಯೋಗಿಸಬಾರದೆಂದು ಇರಾಕ್ ಹಾಗೂ ಇರಾಣ ದೇಶಗಳಿಗೆ ಸ್ಪಷ್ಟ ಸೂಚನೆ ನೀಡಿದರು. ಇರಾಣ ತಕ್ಷಣ ಒಪ್ಪಿಕೊಂಡಿತು. ಇರಾಕ್ ಮೊದಲು ಕೆಲ ಷರತ್ತುಗಳನ್ನೊಡ್ಡಿ-ತಾದರೂ, ಕೊನೆಗೆ ಇಂಥ ಬಾಂಬ್‌ಗಳ ಪ್ರಯೋಗ ನಿಲ್ಲಿಸಲು ಸಮ್ಮತಿ ಸೂಚಿಸಿತು.

'ಸೌಹಾರ್ದ ರಾಯಭಾರ, ದೃಢ ನಿರ್ಧಾರ' ಇದು, ಡಿ ಕ್ವಿಲಾರ್‌ರ ನಿಲುವು. ಆದಕ್ಕಾಗಿ ಯಾರನ್ನಾದರೂ ಯಾವುದೇ ಸಂದರ್ಭದಲ್ಲಿ ಸಂಧಿಸಿ ಮಾತನಾಡಲು ಡಿ' ಕ್ವಿಲಾರ್ ಸಿದ್ಧರು. ಕೇವಲ ರಾಷ್ಟ್ರಗಳ ನಡುವಣ ಸಂಬಂಧಿತ ಸಮಸ್ಯೆಯೇ ಮಾತ್ರವಲ್ಲ, ಸಾಮಾನ್ಯ ವ್ಯಕ್ತಿಗಳಿಗೆ ಒದಗುವ ಸಮಸ್ಯೆಗಳನ್ನು ಪರಿಹರಿಸು-ವಲ್ಲಿಯೂ ಡಿ' ಕ್ವಿಲಾರ್ ಮುಂದಾಗುತ್ತಾರೆ. ವಿಶ್ವಸಂಸ್ಥೆಯ ನೌಕರ, ಪೋಲಂಡಿನ ಅಲಿಕ್ಝು ವೆಸಲೋವಸ್ಕಾ, ಪೋಲಂಡಿನಲ್ಲಿಯೇ ಬಂಧಿತ-ನಾದಾಗ ಡಿ' ಕ್ವಿಲಾರ್, ಆ ದೇಶದ ಸರಕಾರದ ವರಿಷ್ಠರೊಂದಿಗೆ ಮಾತುಕತೆ ನಡೆಸಿ ಅವನನ್ನು ಬಿಡುಗಡೆಗೊಳಿಸಿದ್ದರು. ವೀಸಾ ಪಡೆಯದೆ ಅಫಘಾನಿಸ್ಥಾನವನ್ನು ಪ್ರವೇಶಿಸಿದ್ದ ಫ್ರಾನ್ಸಿನ ಪತ್ರಕರ್ತ ಜ್ಯಾಕ್ಯೂಸ್ ಅಬೋಕಾರ್‌ನನ್ನು ಅಫಘಾನಿಸ್ಥಾನ ಬಂಧನದಲ್ಲಿರಿಸಿದಾಗ, ಆ ದೇಶದ ವರಿಷ್ಠರೊಂದಿಗೆ ಸಂಧಾನ ನಡೆಸಿ ಆತನ ಬಿಡುಗಡೆಗೆ ನೆರವಾಗಿದ್ದರು ಡಿ' ಕ್ವಿಲಾರ್. ಇಸ್ರೇಲಿ ಸೈನಿಕರನ್ನು ಲೆಬನಾನ್ ಬಂಧಿಸಿ, ಸಿರಿಯಾದಲ್ಲಿ ಎರಡು ವರುಷ ಸೆರೆ ವಾಸದಲ್ಲಿ ಇರಿಸಿದ್ದನ್ನು. ತಮ್ಮ ೧೯೮೫ರ, ಜೂನ್ ತಿಂಗಳ ಪಶ್ಚಿಮ ಏಶಿಯಾ ಪ್ರವಾಸದ ಸಂದರ್ಭದಲ್ಲಿ ಎರಡೂ ದೇಶಗಳ ಜೊತೆ ಆ ಕುರಿತು ವಿಚಾರವಿನಿಮಯ ನಡೆಸಿ ಸೈನಿಕರನ್ನು ಬಂಧ ವಿಮುಕ್ತಗೊಳಿಸುವಂತೆ ಮನವೊಲಿಸಿದರು.

೬೬ ವರ್ಷ ವಯಸ್ಸಿನ ಡಿ ಕ್ವಿಲಾರ್ ಜನಿಸಿದ್ದು ಪೆರು ದೇಶದಲ್ಲಿ. ಲೀಮಾದ ಕ್ಯಾಥೋಲಿಕ್ ವಿಶ್ವವಿದ್ಯಾಲಯದಲ್ಲಿ ಕಾನೂನು ಪದವಿ ಪಡೆದ ನಂತರ ಅವರು ಪೆರು ಸರಕಾರದ ವಿದೇಶಾಂಗ ವ್ಯವಹಾರ ಶಾಖೆಯನ್ನು ಸೇರಿದರು. ೧೯೪೬ರಲ್ಲಿ ಲಂಡನ್‌ನಲ್ಲಿ ಜರುಗಿದ ವಿಶ್ವ ಸಂಸ್ಥೆಯ ಮಹಾಸಭೆಯ ಪ್ರಥಮ

ಅಧಿವೇಶನದಲ್ಲಿ ಪೆರು ದೇಶದ ಪ್ರತಿನಿಧಿಗಳಲ್ಲಿ ಓರ್ವರಾಗಿ ಡಿ' ಕ್ವಿಲಾರ್ ಭಾಗವಹಿಸಿದ್ದರು. ಅವರು ಫ್ರಾನ್ಸ್, ಬ್ರಿಟನ್, ಬೊಲೀವಿಯಾ, ಬ್ರಾಝಿಲ್, ಪೋಲಂಡ್ ಮತ್ತು ರಶಿಯ ಗಳಲ್ಲಿ ಪೆರು ದೇಶದ ರಾಯಭಾರಿಯಾಗಿ ಸೇವೆ ಸಲ್ಲಿಸಿದ್ದಾರೆ. ಕುರ್ತ್ ವಾಲ್ಡ್‌ಹೈಂ ತರು ವಾಯ ವಿಶ್ವಸಂಸ್ಥೆಯ ಪ್ರಧಾನ ಕಾರ್ಯ ದರ್ಶಿಯಾಗಿ ನೇಮಕಗೊಂಡ ಅವರು ಚಿಕ್ಕವ ರಾಗಿದ್ದಾಗ ಕಲಿತಿದ್ದ ಸ್ಪಾನಿಶ್, ಫ್ರೆಂಚ್, ಭಾಷೆಗಳೊಂದಿಗೆ ಇಂಗ್ಲೀಷ್, ಇಟಾಲಿಯನ್, ಪೋರ್ಚುಗೀಸ್, ರಶಿಯನ್ ಭಾಷೆಗಳನ್ನೂ ಕರತಲಾಮಲಕ ಮಾಡಿಕೊಂಡಿದ್ದಾರೆ. ಫ್ರೆಂಚ್ ಸಾಹಿತ್ಯವನ್ನು ಅವರು ಆಳವಾಗಿ ಅಭ್ಯಸಿ-ಸಿದ್ದಾರೆ.

ವಿಶ್ವ ಸಂಸ್ಥೆಯಲ್ಲಿ ಅಮೇರಿಕದ ಪ್ರತಿನಿಧಿ ಯಾಗಿರುವ ಜೀನ್ ಕಿರ್ಕಪ್ಯಾಟ್ರಿಕ್‌ರ ಮಾತಿ ನಲ್ಲಿ ಹೇಳುವುದಾದರೆ ಡಿ ಕ್ವಿಲಾರ್ ಸರಳ, ಸಾಚಾ ವ್ಯಕ್ತಿ. ದೃಢಕಾಯರು, ಸುರೂಪಿ, ಸೊಗಸಾದ ವೇಷ ಭೂಷಣಧಾರಿ. ಪಾದ ರಸ ದಂತೆ ಚುರುಕಾದ ವ್ಯಕ್ತಿ. ಶ್ರೇಷ್ಠ ಸಂಧಿ ವಿಗ್ರಹಿ. ಸಂಯಮಿ. ತುಂಬಾ ಬುದ್ಧಿವಂತಿಕೆಯ ಮತ್ತು ಸರ್ವರ ಒಳಿತನ್ನೇ ಸದಾ ಬಯಸುವ ಶ್ರೇಷ್ಠ ವ್ಯಕ್ತಿ." ಡಿ ಕ್ವಿಲಾರ ಬಗ್ಗೆ, ವಿಶ್ವ ಸಂಸ್ಥೆಯಲ್ಲಿ ಇರಾಣಿನ ಪ್ರತಿನಿಧಿಯಾಗಿರುವ ಅಲಿ ಆರ್ಕಾಫ್ ಮೋಜ್‌ತಾಹೆದ್ ಹೀಗೆ ಹೇಳುತ್ತಾರೆ: "ತೃತೀಯ ವಿಶ್ವಕ್ಕೆ ಸೇರಿರುವ ಈ ವ್ಯಕ್ತಿ ತೃತೀಯ ವಿಶ್ವ ವನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದಾರೆ. ಎಲ್ಲರೊಂದಿಗೂ ಹೊಂದಿಕೊಂಡು ಹೋಗುವ ವಿಶಿಷ್ಟ ಗುಣ ಇವರದು. ಅಸಾಧ್ಯವೆನಿಸುವಂಥ ಕಾರ್ಯಗಳನ್ನೂ ಸುಲಭ ಸಾಧ್ಯಗೊಳಿಸುವ ಸಾಮರ್ಥ್ಯ ಇವರಲ್ಲಿದೆ. ಯೋಗ್ಯ, ಪ್ರತಿಭಾ ವಂತ, ಚತುರಮತಿ."

"ವಿಶ್ವ ಸಂಸ್ಥೆಯ ಧ್ಯೇಯ ವಾಕ್ಯಗಳಾದ ಶಾಂತಿ ಮತ್ತು ಭದ್ರತೆಗೆ ಆದ್ಯತೆ ನೀಡುವ ವ್ಯಕ್ತಿ ನಾನು. ಆದರೆ, ಯುದ್ಧ ರಹಿತ ವಾತಾವರಣ ಅಥವಾ ಯುದ್ಧ ನಿಲುಗಡೆಯೇ ಶಾಂತಿ ಎಂಬುದನ್ನು ನಾನು ಒಪ್ಪುವುದಿಲ್ಲ. ಮಧ್ಯ ಅಮೇರಿಕದಲ್ಲಿ ಶಾಂತಿ ಇಲ್ಲವೇಕೆ? ಸಾಮಾಜಿಕ ಅಸಮಾನತೆ, ಅನ್ಯಾಯ ಇರುವಲ್ಲಿ ಶಾಂತಿ ನೆಲೆಸಲಾರದು. ಮಧ್ಯ ಅಮೇರಿಕದ ಪರಿಸ್ಥಿತಿ ಇದು. ಸಾಮಾಜಿಕ ನ್ಯಾಯ, ಸಮಾ ನತೆ ಸ್ಥಾಪನೆಗೊಂಡಾಗ ಮಾತ್ರ ನಿಜವಾದ ಶಾಂತಿ ಸ್ಥಾಪನೆಯಾಗುತ್ತದೆ" ಎಂದು ಡಿ ಕ್ವಿಲಾರ್ ಅಭಿಪ್ರಾಯಪಡುತ್ತಾರೆ.

ಕೇವಲ ವಿಶ್ವಶಾಂತಿ ಕುರಿತ ಚಿಂತಕರಷ್ಟೇ ಅಲ್ಲ ಡಿ' ಕ್ವಿಲಾರ್, ಒಳ್ಳೆಯ ಆಡಳಿತಗಾರ ಕೂಡ. ಉತ್ತಮ ನಿರ್ವಾಹಕರು, ನಿರ್ದೇಶ ಕರೂ ಹೌದು. ವಿಶ್ವಸಂಸ್ಥೆಯ ೫,೦೦೦ ಮತ್ತು ಜಗತ್ತಿನಾದ್ಯಂತದ ವಿಶ್ವಸಂಸ್ಥೆಯ ಉಪ ಸಂಸ್ಥೆಗಳಲ್ಲಿ ಕಾರ್ಯನಿರತರಾಗಿರುವ ೧೦,೪೩೧ ಜನ ಉದ್ಯೋಗಿಗಳಿಗೆ ಸೂಕ್ತ ರೀತಿಯಲ್ಲಿ ಮಾರ್ಗದರ್ಶನ ನೀಡಿ ಆಡಳಿತದಲ್ಲಿ ಬಿಗಿ ಹಾಗೂ ಚೇತನ ತುಂಬಿದ್ದಾರೆ. ದಕ್ಷಿಣ ಹಾಗೂ ಉತ್ತರ ಕೋರಿಯಾಗಳ ನಡುವಿನ ಬಿಕ್ಕಟ್ಟು ಪರಿಹರಿಸಲು ಮತ್ತು ರಶಿಯಾ ಪಡೆಗಳು ಅಫ ಘಾನಿಸ್ತಾನದಿಂದ ನಿರ್ಗಮಿಸುವಂತೆ ಮಾಡಲು ಡಿ ಕ್ವಿಲಾರ್ ನಡೆಸಿರುವ ಯತ್ನ ಜಗತ್ತಿ ನಾದ್ಯಂತ ಪ್ರಶಂಸಿಸಲ್ಪಟ್ಟಿದೆ.

"ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳು ಸೌಹಾರ್ದ ವಾತಾವರಣದಲ್ಲಿ ಪರಸ್ಪರ ವಿಚಾರ ವಿನಿಮಯ ನಡೆಸುತ್ತಿರಬೇಕು. ಅದು ಅಶಕ್ಯ ವಾದಲ್ಲಿ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ-ಯೊಂದಿಗಾದರೂ ವಿಚಾರವಿನಿಮಯ ನಡೆಸುತ್ತಿರ ಬೇಕು. ವಿಶ್ವಶಾಂತಿ ಸಾಧಿಸಲು ಇದು ಅತಿ ಅಗತ್ಯ" ಎಂಬುದು ಡಿ ಕ್ವಿಲಾರ್‌ರ ನಿಲುವು.

೧೯೮೬ರ ಡಿಸೆಂಬರ್ ೩೧ಕ್ಕೆ ಡಿ ಕ್ವಿಲಾರ್‌ರ ಐದುವರುಷಗಳ ಕಾರ್ಯಾವಧಿ ಮುಗಿದು ಮತ್ತೊಂದು ಅವಧಿಗೆ (ತಾವು ಮುಂದುವರಿ ಯುವುದಿಲ್ಲ ಎಂಬುದಾಗಿ ಹೇಳಿದ್ದರಾದರೂ) ಮುಂದುವರಿದಿದ್ದಾರೆ.

*

- ೯೭ -

## ಪೋರ್ಚುಗೀಸರ ದಾಯ

"ಸಂಕ ಪಾಷಾಣ ತಕೊಂಡು ಸಾಯುವಾ ಅಂದರೆ ಅದಕ್ಕೂ ಕೈಲಿ ಮೂರು ಕಾಸಿಲ್ಲ," ಅನ್ನುವ ಮಾತೊಂದಿದೆ. "ಪಾಷಾಣ" ಎಂದರೆ ಕಲ್ಲು; ವಿಶೇಷವಾಗಿ ಕಲ್ಲಿನ ಸಣ್ಣ ಹರಳು. ಸಂಕ ಪಾಷಾಣ, ಅಥವಾ ಶಂಖ ಪಾಷಾಣ, ಅಥವಾ ಶಂಕು ಪಾಷಾಣ ಅಂದರೆ ಒಂದು ವಿಷ ಪದಾರ್ಥ—ಇಂಗ್ಲೀಷಿನ arsenic. ಆರ್ಸೆನಿಕ್ ಎಂಬುದೊಂದು ರಾಸಾಯನಿಕ ಮೂಲ ಧಾತು; ಈಗ ಜನರು ಸಾಮಾನ್ಯವಾಗಿ ಆರ್ಸೆನಿಕ್ ಎನ್ನುವುದು ಆ ಧಾತುವಿನ ಒಂದು ಸಂಯುಕ್ತಕಕ್ಕೆ. ಆತ್ಮಹತ್ಯೆಗೂ ವಿಷ ಪ್ರಯೋಗಕ್ಕೂ ಕೆಲ ಘನ ರೋಗಗಳಿಗೆ ಔಷಧಕ್ಕೂ ಉಪಯೋಗಿಸುವ ಈ ದ್ರವ್ಯ ನಮ್ಮ ದೇಶಕ್ಕೆ ಹೊಸದೇನೂ ಅಲ್ಲ. ಕೆಂಪು ಆರ್ಸೆನಿಕ್ ಮನಃಶಿಲಾ ಎಂಬ ಹೆಸರಿಂದ ಮಹಾಭಾರತದಲ್ಲಿ ಹಾಗೂ ಕಾವ್ಯಗಳಲ್ಲಿ ಕಾಣಿಸುತ್ತದೆ. ಫೇನಶಿಲಾ ಎಂಬ ಹೆಸರೂ ಇದೆಯೆಂದು ಆಪಟೆ ಕೋಶ (ಇಂಗ್ಲೀಷ್-ಸಂಸ್ಕೃತ) ಹೇಳುತ್ತದೆ.

ಆದರೆ ಆ ಹೆಸರುಗಳು ಹಿಂದೆ ಬಿದ್ದು ಮುಂದೆ ಶಂಖ ಪಾಷಾಣ ಎಂಬ ಹೆಸರು ಪ್ರಚಾರಕ್ಕೆ ಬಂತು. ಬಂಗಾಲಿಯಲ್ಲಿ ಸೇಂಕೋ, ಹಿಂದಿಯಲ್ಲಿ, ಸಂಸ್ಕೃತದಲ್ಲಿ ಶಂಕು (ಪಾಷಾಣ ಶಬ್ದ ರಹಿತ) ಎಂಬ ಹೆಸರುಗಳಿಂದ ಈ ಪದಾರ್ಥ ಈಗ ಜ್ಞಾತವಾಗಿದೆ. ಈ ಹೊಸ ಹೆಸರು ಪೋರ್ಚುಗೀಸ್ ಭಾಷೆಯಿಂದ ಬಂದದ್ದೆಂದು ಸುನೀತಿ ಕುಮಾರ ಚಟರ್ಜಿ ಹೇಳುತ್ತಾರೆ. ಪೋರ್ಚುಗೀಸಿನಲ್ಲಿ ಅದಕ್ಕೆ ಅಸ್ಸೆಂಕೋ (assenco) ಎಂದು ಹೆಸರು. ಅದು ಲ್ಯಾಟಿನ್ arsenico ಪದದ ಮತ್ತು ಅದು ಗ್ರೀಕ್ arsenikon ಪದದ ಅಪಭ್ರಂಶ. ಭಾರತೀಯ ಭಾಷೆಗಳಿಗೆ ಬರುವಾಗ ಅದರ ಪ್ರಥಮ ವರ್ಣ as ಬಿದ್ದುಹೋಗಿ ಭಾರತೀಯ ಬಾಯಿಗೆ ಸರಿಯಾಗಿ ಶಂಖ, ಶಂಕು, ಸೇಂಕೋ ಆಗಿ ಬದಲಾಯಿತು. ಈ ಶಬ್ದಗಳಿಗೆ ಸಂಸ್ಕೃತ ಅಥವಾ ಇತರ ಭಾರತೀಯ ಭಾಷೆಗಳಲ್ಲಿ ಪ್ರಾಚೀನ ಪ್ರಯೋಗಗಳು ಇಲ್ಲ, ಸರಿಯಾದ ನಿರುಕ್ತಿಯೂ ಇಲ್ಲ.

ಭಾರತದಲ್ಲಿ ಪೋರ್ಚುಗೀಸರು ವ್ಯಾಪಾರ ಮತ್ತು ರಾಜ್ಯ ಸ್ಥಾಪನೆಯ ದಾರಿಯಲ್ಲಿ ಅನೇಕ ಶಬ್ದಗಳನ್ನು ಬಿತ್ತಿ ಹೋಗಿದ್ದಾರೆ. ಕಾಫಿ ಗಿಡ ಅರೇಬಿಯದ್ದಾದರೂ ಕಾಫಿ ಶಬ್ದವನ್ನು ನಮಗೆ ಕೊಟ್ಟವರು ಪೋರ್ಚುಗೀಸರು. ಪೋರ್ಚುಗೀಸ್ cafeಗೆ ತುರ್ಕಿ ಕಹ್‌ವೇ ಮೂಲ; ಅದಕ್ಕೆ ಅರಬ್ಬಿ ಗಹ್‌ವೇ ಮೂಲ. ಅದೇ ಶಬ್ದ ಇಂಗ್ಲೀಷ್, ಫ್ರೆಂಚ್ ಮೊದಲಾದ ಭಾಷೆಗಳಿಗೂ ಹೋಗಿದೆ. ಕುತೂಹಲದ ಒಂದು ಸಂಗತಿಯೆಂದರೆ ಅರಬ್ಬೀ ಮೂಲದಲ್ಲಿ ಅದಕ್ಕೆ ದ್ರಾಕ್ಷಾ ಮದ್ಯ ಎಂಬರ್ಥ; ಕಾಫಿ ಬೀಜಗಳನ್ನು ಮೇದ್ದ ಕುರಿಗಳು ಹೆಂಡ ಕುಡಿದವರಂತೆ ಕುಣಿಯುವುದನ್ನು ನೋಡಿಯೇ ಅರಬರಿಗೆ ಕಾಫಿಯ ಗುಣ ತಿಳಿಯಿತೆಂದು ಹೇಳುತ್ತಾರಲ್ಲವೇ?

ಇಂಗ್ಲೀಷಿನಲ್ಲಿ bottle ಇದ್ದರೂ ನಮ್ಮ ಬಾಟಲಿ, ಬಾಟ್ಲ ಆ ಭಾಷೆಯಿಂದ ಬಂದದ್ದಲ್ಲ; ಪೋರ್ಚುಗೀಸ್ botelha ದಿಂದ ಸ್ವೀಕರಿಸಿದ್ದು; ಅದು ಫ್ರೆಂಚ್ bouteille ನಿಂದ ಎರವಲು; ಈ ಪದ botleನ ಅಲ್ಪಾರ್ಥಕ (dimunative) ರೂಪ. ಉತ್ತರ ಕಾಲದ ಲ್ಯಾಟಿನ್ನಿನಲ್ಲಿ butis ಎಂದರೆ ದ್ರವಗಳನ್ನು ಹಾಕಿಡುವ ಪಾತ್ರೆ. ಅದೇ ಪ್ರಕಾರ ನಮ್ಮ ಬಾಲ್‌ದಿ, ಹಿಂದೀ ಬಾಲ್‌ಟ, ಬಂಗಾಲಿ ಬಾಲ್‌ತಿ (= ನೀರು ತುಂಬುವ ಬಕೆಟ್) ಪೋರ್ಚುಗೀಸ್ baldeಯಿಂದ ತೆಗೆದುಕೊಂಡದ್ದು.

ಪಿಸ್ತೂಲ್ ಎಂಬುದೂ ಪೋರ್ಚುಗೀಸಿನ ದಾಯವೇ. ಪೋರ್ಚುಗೀಸ್ pistola, ಇಂಗ್ಲೀಷ್ pistol ಇವು ಜೆಕ್ ಭಾಷೆಯಿಂದ ಫ್ರೆಂಚ್ ಮತ್ತು ಜರ್ಮನ್ ಮೂಲಕ ಬಂದವು.

ಗಲೂ ಯುದ್ಧದ ಭೀತಿ. ಬಾಂಬ್ ದಾಳಿಯಾದರೆ ಇಡೀ ಹಳ್ಳಿಯ ಜನರು ಇಲ್ಲಿ ಬಂದು ನೆಲೆಸುವ ವ್ಯವಸ್ಥೆ ಮಾಡಲಾಗಿದೆ. ಸುರಕ್ಷಿತೆಯ ದೃಷ್ಟಿಯಿಂದ ಇಂದು ಯಾವುದೇ ಹೊಸ ಮನೆ ಕಟ್ಟಡ ಕಟ್ಟಬೇಕಾದರೆ ಈ ತರಹದ ನೆಲ ಮಾಳಿಗೆಯನ್ನು ಕಟ್ಟುವದು ಅನಿವಾರ್ಯ. ಕಡ್ಡಾಯವಾಗಿ ಪ್ರತಿಯೊಬ್ಬರೂ ಕಟ್ಟಲೇಬೇಕು."

ನೆಲಮಾಳಿಗೆಯಲ್ಲಿ ಮಲಗುವ ಸ್ಥಿತಿ ಬಂದುದಕ್ಕೆ ಸಹಪಾಠಿಗಳು ಬಹಳ ಖೇದ ವ್ಯಕ್ತಪಡಿಸಿದರು. ಅವರಿಗೆ ಒಂದು ತರಹದ ಮುಜುಗರ. ಒಬ್ಬ ಭಾರತೀಯನನ್ನು ನೆಲಮಾಳಿಗೆಯಲ್ಲಿ ಮಲಗಿಸುವದು, ಅದೂ ಶಾಂತಿಗಾಗಿ ಹೋರಾಡುವ ಗುಂಪಿನವರಿಂದ, ಒಂದು ವಿಪರ್ಯಾಸವಾಗಿತ್ತು!

ರಾತ್ರಿ ಬಹಳ ಹೊತ್ತಾದರೂ ನೆಲಮಾಳಿಗೆಯಲ್ಲಿ ಮಲಗಿದ ನನಗೆ ನಿದ್ರೆ ಬರಲಿಲ್ಲ. ಪ್ರಪಂಚದಲ್ಲೇ ಅಲಿಪ್ತ ನೀತಿಗೆ ಹೆಸರುವಾಸಿಯಾದ ಸ್ವಿಟ್ಜರಲಂಡ ಕಳೆದ ೩೦೦ ವರ್ಷಗಳಿಂದ ಯಾವುದೇ ಯುದ್ಧವನ್ನು ಕಂಡಿರಲಿಲ್ಲ. ಮೊದಲನೆಯ ಮತ್ತು ಎರಡನೆಯ ಮಹಾಯುದ್ಧದಲ್ಲಿ ಇಡೀ ಯುರೋಪ್‌ಖಂಡ ಧ್ವಂಸಗೊಂಡರೂ ಈ ಗುಡ್ಡಗಾಡು ಪ್ರದೇಶ ಯುದ್ಧದ ಭೀತಿಯಿಂದ ಪಾರಾಯಿತು. ಹೀಗಿದ್ದರೂ ಇಲ್ಲಿಯ ಜನರಿಗೆ, ಸರಕಾರಕ್ಕೆ ಕಾಣದ ಶತ್ರುವಿನ ಭೀತಿ! ಈ ಯುದ್ಧ ಭಯದ ಭ್ರಮೆಯಿಂದ ಪಾರಾಗಲು ಇಂತಹ ನೆಲಮಾಳಿಗೆಗಳು.

ಈ ಪಾದಯಾತ್ರಿಗಳಿಗೆ ಹಳ್ಳಿಯಲ್ಲಿ ವಾಸಿಸಲೂ ಸ್ಥಳ ಸಿಗದಿರುವದು ನನಗೆ ಹೊಸ ಸಂಗತಿಯಾಗಿತ್ತು. ಹಿಮಾಲಯದ ತಪ್ಪಲಿನಲ್ಲಿ, ಮಲೆನಾಡಿನ ಗುಡ್ಡಗಾಡಿನಲ್ಲಿ ಪರಿಚಯವಿಲ್ಲದ, ಹೊಸ ಸ್ಥಳಗಳಿಗೆ ಕಾಲ್ನಡಿಗೆಯಿಂದ ಹೋದಾಗ ಹಳ್ಳಿಯವರು ತೋರಿಸುವ ಸ್ನೇಹ, ಆದರ ಮತ್ತು ಪ್ರೀತಿಯ ನೆನಪಾಯಿತು. ನಾವು ಹಿಂದುಳಿದ ಸ್ಥಳಗಳೆಂದು ಕರೆಯುವ ಈ ದುರ್ಗಮ ಕ್ಷೇತ್ರದಲ್ಲಿರುವ ಹಳ್ಳಿಯ ಜನರು ಮಾನವೀಯತೆಯನ್ನು ಜೀವಂತವಾಗಿಟ್ಟಿದ್ದರು. ಮುಂದುವರಿದ, ವಿಕಾಸದಲ್ಲಿ ಮೊದಲನೇ ಸ್ಥಾನ ಗಳಿಸಿದ ಸ್ವಿಟ್ಸರಲಂಡಿನಲ್ಲಿ ಮಾನವೀಯತೆ ನಶಿಸುವ ಹಂತದಲ್ಲಿರುವಂತೆ ತೋರಿತು.

## ಪಾದಯಾತ್ರೆ

ಮರುದಿನ ಮುಂಜಾನೆ ಬೇಗನೆ ತಿಂಡಿ ತಿಂದು ಹೊರಡಲು ಅಣಿಯಾದೆವು. ಆ ಸಮಯಕ್ಕೆ ಸರಿಯಾಗಿ ಈ ಹಿಂದೆ ಟೆಲಿಫೋನ್‌ನಲ್ಲಿ ನನ್ನೊಡನೆ ಮಾತನಾಡಿದ ಗೇರಿ ಫಿಸ್ಚರ್ ನಮ್ಮ ಜತೆಗೂಡಿದ. ಹಳೆಯ ಗೆಳೆಯನನ್ನು ಮರಳಿ ಕಂಡ ಅನುಭವ. ನಮ್ಮ ಬೆನ್ನು ಚೀಲಗಳನ್ನು ಸಿಗಿಸಿಕೊಂಡು ಫ್ಲುಯಲಿನ್‌ಗೆ ವಿದಾಯ ಹೇಳಿ ಡಾಂಬರು ರಸ್ತೆಯನ್ನು ತೊರೆದು ಗುಡ್ಡಗಾಡಿನ ಕಾಲು ರಸ್ತೆಯನ್ನು ಹಿಡಿದು ಮುಂದೆ ಸಾಗಿದೆವು.

ಗೇರಿ ಮತ್ತಿತರ ಗೆಳೆಯರ ಜೊತೆ ಮಾತ ಮಾತನಾಡಲು, ಚರ್ಚೆ ಮಾಡಲು ವಿಪುಲ ಅವಕಾಶವಿತ್ತು. ನಾವು ನಿಧಾನವಾಗಿ ಗುಡ್ಡದ ಹತ್ತಿರದ ಕಾಲು ಹಾದಿಯಲ್ಲಿ ಸಾಗುತ್ತಿದ್ದಾಗ–ಗುಡ್ಡದ ತಪ್ಪಲಿನಲ್ಲಿ ದೊಡ್ಡ ಸಿಮೆಂಟಿನ ಗೋಡೆಯನ್ನು ಕಂಡೆ. ಗೇರಿ ನನ್ನ ಹತ್ತಿರ "ಈ ಗೋಡೆಗಳು ಏನೆಂದು ಗೊತ್ತಿದೆಯಾ?" ಎಂದು ಪ್ರಶ್ನಿಸಿದ. ಬಹುಶಃ ಹಳ್ಳಿಯ ನೀರು ಸರಬರಾಜಿನ ಟ್ಯಾಂಕ್ ಇರಬಹುದೆಂದು ಉತ್ತರಿಸಿದೆ. ಅದಕ್ಕೆ ಅವನು ಉತ್ತರಿಸುತ್ತಾ "ಅದು ನೀರಿನ ಟ್ಯಾಂಕ್ ಅಲ್ಲ, ಶತ್ರುಗಳ ಟ್ಯಾಂಕ್. ವಾಹನಗಳು ದಾಳಿ ಮಾಡಿದರೆ ಅವು ಮುನ್ನುಗ್ಗದಂತೆ ತಡೆಯಲು ನಿರ್ಮಿಸಿದ ಕ್ರಾಂಕ್ರೀಟ ಗೋಡೆಗಳು." ಅದನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಮುಂದುವರಿದ ಯುದ್ಧ ತಂತ್ರಗಳ ವಾಸ್ತವಿಕತೆಯಲ್ಲಿ ಈ ತಡೆಗಳು ಬಹಳ ಅಸಂಗತವೆನಿಸುತ್ತಿದ್ದವು. ಇದು ಹಾಸ್ಯಾಸ್ಪದ ಎಂಬು

ದನ್ನು ಅಲ್ಲಿದ್ದ ಗೆಳೆಯರು ಒಪ್ಪಿಕೊಂಡರು. ಈ ಹಿಂದೆ ಈ ದೇಶದ ಗುಡ್ಡಗಾಡಿನಲ್ಲಿ ಇಂತಹ ಗೋಡೆಯ ನಿರ್ಮಾಣವನ್ನು ನೋಡಿದ್ದೆ. ಆದರೆ ಇಂದು ಅದರ ಉದ್ದೇಶ ತಿಳಿದು ಬಂತು.

ನಮ್ಮ ಟೋಳಿಯಲ್ಲಿದ್ದ ಮಾರ್ಕ ಎಂಬ ಫ್ರೆಂಚ ಯುವಕ ಭಾರತದ ಹಳ್ಳಿಯ ಜೀವನದ ಬಗ್ಗೆ ಬಹಳ ಆಸಕ್ತಿಯಿಂದ ವಿಚಾರಿಸಿದ. ನಾನೂ ಫ್ರಾನ್ಸಿನ ಜನ ಜೀವನದ ಬಗ್ಗೆ ಅರಿಯುವ ಪ್ರಯತ್ನ ಮಾಡಿದೆ. ಮಾರ್ಕ ಅರಣ್ಯದಲ್ಲಿ ಸಾಗುತ್ತಿರುವಾಗ ರಸ್ತೆಯ ಪಕ್ಕದಲ್ಲಿ ನುಗ್ಗಿ ಹಲವಾರು ವಿಧದ ಎಲೆಗಳನ್ನು ಕೊಯ್ದು ತನ್ನ ಚೀಲದೊಳಗೆ ತುಂಬಿಕೊಳ್ಳುತ್ತಿದ್ದ. ಅವನೊಬ್ಬ ಗಿಡಮೂಲಿಕೆಯ ತಜ್ಞನಾಗಿದ್ದ. ಪಾದಯಾತ್ರಿಗಳಿಗೆ ಅವಶ್ಯವಿರುವ ಹಸಿರು ಎಲೆಯ ತರಕಾರಿಯನ್ನು ಕಾಡಿನಿಂದ ಸಂಪಾದಿಸುತ್ತಿದ್ದ.

ಮಧ್ಯಾಹ್ನದ ಹೊತ್ತಿಗೆ ಕಾಡಿನ ಮಧ್ಯೆ ಹರಿಯುವ ನೀರಿನ ತೊರೆಯ ಹತ್ತಿರ ವಿಶ್ರಮಿಸಲು ನಿಶ್ಚಯಿಸಿದೆವು. ಅದೇ ಸ್ಥಳದಲ್ಲಿ ಮೊದಲೇ ನಿರ್ಧರಿಸಿದ ಹಾಗೆ ಆ ಕ್ಷೇತ್ರದ ಅರಣ್ಯ ಅಧಿಕಾರಿಯೂ ಬಂದು ಸೇರಿಕೊಂಡ. ಮಾರ್ಕ ಸಿದ್ಧಪಡಿಸಿದ, ಕಾಡಿನಿಂದ ತಂದ ಹಸಿರು ಎಲೆಗಳ ಪಚಡಿ, ಬ್ರೆಡ್, ಹಸಿ ಟೋಮೆಟೋ. ಚೀಸ್, ಕುಡಿಯಲು ಶುದ್ಧವಾದ ತೊರೆಯ ನೀರು, ಇದು ಮಧ್ಯಾಹ್ನದ ಊಟ.

ಊಟದ ನಂತರ ಅರಣ್ಯ ಅಧಿಕಾರಿ-ಲಾಯನ್‌ಬರ್ಜರ ನಮ್ಮನ್ನೆಲ್ಲ ಕರೆದುಕೊಂಡು ಎರಡು ಗಂಟೆ ಕಾಡಿನ ಹಲವಾರು ಕ್ಷೇತ್ರಗಳಲ್ಲಿ ಸುತ್ತಾಡಿ ತನ್ನ ಅನಿಸಿಕೆಗಳನ್ನು ವಿವರಿಸತೊಡಗಿದ.

## ಅರಣ್ಯ ಅಧಿಕಾರಿಯ ವ್ಯಥೆ

ಮೂವತ್ತೈದರ ಹರೆಯದ, ಗಿಡ್ಡನೆಯ ವ್ಯಕ್ತಿತ್ವದ ಅರಣ್ಯ ಅಧಿಕಾರಿ ಗಂಭೀರವಾದ ಧ್ವನಿಯಲ್ಲಿ, ದೂರದಲ್ಲಿ ಎಲೆಯನ್ನು ಉದುರಿಸಿ ನಿಂತ ಪೈನ್ ವೃಕ್ಷಗಳನ್ನು ತೋರಿಸುತ್ತಾ "ಈಗ ಇಪ್ಪತ್ತು ವರ್ಷಗಳ ಹಿಂದೆ ಈ ಶಂಕುಧಾರಿ (ಸೂಜಿಯ ಹಾಗಿರುವ ಎಲೆಗಳು) ವೃಕ್ಷಗಳು ರೋಗಪೀಡಿತವಾಗಿದೆ ಎಂಬುದನು ಕಂಡುಹಿಡಿಯಲಾಯಿತು. ಆಮ್ಲ ಮಳೆಯಿಂದಾಗಿ ಇಂದು ಗಂಭೀರವಾದ ಸ್ಥಿತಿಗೆ ತಲುಪಿವೆ. ಅಲ್ಲಿ ನೋಡಿ ಸಣ್ಣ ಪೈನ್ ಗಿಡ ಹೇಗೆ ಹಳದಿ ಬಣ್ಣದ ಎಲೆಗಳನ್ನು ಹೊಂದಿದೆ. ಈ ಎಲೆಗಳು ಹಚ್ಚ ಹಸಿರಾಗಿರಬೇಕಾಗಿತ್ತು." ನಾವೆಲ್ಲ ಅವನು ಹೇಳಿದತ್ತ ಗಮನಿಸಿದಾಗ ಹಸಿರನ್ನು ಕಳೆದುಕೊಂಡ ಸತ್ವಹೀನ ಗಿಡಗಳನ್ನು ನೋಡಿದೆವು.

ಅಗಲವಾದ ಎಲೆಯುಳ್ಳ 'ಅಹಾರನ್' ಜಾತಿಯ ಗಿಡಗಳನ್ನು ತೋರಿಸುತ್ತಾ "ನೋಡಿ ಈ ಜಾತಿಯ ಗಿಡಗಳು ನಾಲ್ಕು ವರ್ಷಗಳಿಂದೀಚೆ ರೋಗಪೀಡಿತವಾಗತೊಡಗಿವೆ. ಇವುಗಳು ರೋಗದಿಂದ ತಪ್ಪಿಸಿಕೊಳ್ಳುತ್ತವೆ ಎಂದು ತಿಳಿದಿದ್ದ ನಮಗೆ ಆಶ್ಚರ್ಯವನ್ನುಂಟುಮಾಡಿವೆ. ಅಗಲವಾಗಿರಬೇಕಾಗಿದ್ದ ಗಿಡದ ಎಲೆಗಳು ಸಣ್ಣದಾಗುತ್ತಾ ಸಾಯತೊಡಗಿವೆ. ಇಪ್ಪತ್ತು-ಮೂವತ್ತು ವರ್ಷ ಬೆಳೆದ ನಂತರ ಇವು ಬೀಜ ಬಿಡಲಾರಂಭಿಸಿ ತಮ್ಮ ಆಯುಷ್ಯದ ಅಂತ್ಯದ ಸೂಚನೆಯನ್ನು ಕೊಡುತ್ತಿದ್ದವು. ಆದರೆ ಇತ್ತೀಚೆಗೆ ೫-೬ ವರ್ಷದ ಗಿಡಗಳು ಬೀಜ ಬಿಡಲು ಆರಂಭಿಸಿವೆ. ನಮ್ಮ ಸಸ್ಯವಿಜ್ಞಾನಿಗಳು ಈ ಬದಲಾವಣೆಯ ಕಾರಣವನ್ನು ಪತ್ತೆ ಹಚ್ಚಿಲ್ಲ" ಎನ್ನುತ್ತಾ ಅಹಾರನ್ ಗಿಡದ ಸಣ್ಣ ರೆಂಬೆಯೊಂದನ್ನು ಬಗ್ಗಿಸಿ ಬೀಜಗಳನ್ನು ತೋರಿಸಿದ.

ಆಮ್ಲ ಮಳೆ ಬಗ್ಗೆ ವಿವರಿಸುತ್ತಾ "ಈ ವರ್ಷ ಮಳೆ ಹೆಚ್ಚಾಗಿದ್ದು, ಆಮ್ಲ ಮಳೆಯ ಪರಿಣಾಮವೂ ಹೆಚ್ಚಾಗಿದೆ. ಉದ್ದಿಮೆಗಳೂ, ವಾಹನಗಳೂ ಹೊರಬಿಡುವ ಹೊಗೆಯು (ಸಲ್ಫರ್ ಮೊನಾಕ್ಸಾಯಿಡ್) ಗಾಳಿಯಲ್ಲಿರುತ್ತದೆ. ಮಳೆ ಹನಿ ಈ ಗಾಳಿಯ ಜೊತೆಗೆ ಒಂದಾಗಿ ಆಮ್ಲ ಮಳೆಯಾಗಿ ಪರಿವರ್ತನೆ ಹೊಂದುತ್ತದೆ. ಹತ್ತಿರವಿರುವ ಕಸ

ಶುದ್ಧೀಕರಿಸುವ ಘಟಕದಿಂದಾಗಿ ಈ ಅರಣ್ಯ ಕ್ಷೇತ್ರದಲ್ಲಿ ಆಮ್ಲ ಮಳೆಯ ಪರಿಣಾಮ ಅಧಿಕವಾಗಿದೆ."

ಅರಣ್ಯದಲ್ಲಿ ಹಲವಾರು ಕಡೆ ಪ್ಲಾಸ್ಟಿಕ್‌ನ ಒಂದು ಚೌಕ ಆಕಾರದ ಪೆಟ್ಟಿಗೆಯನ್ನು ತೂಗು ಹಾಕಿದ್ದರು. ಒಂದು ಪೆಟ್ಟಿಗೆಯ ಹತ್ತಿರ ನಮ್ಮನ್ನು ಕರೆದೊಯ್ದು ಆ ಪೆಟ್ಟಿಗೆಯನ್ನು ಬಿಚ್ಚಿ ಒಳಗಡೆ ಇಟ್ಟಿರುವ ದ್ರವವನ್ನೂ, ಸತ್ತಿದ್ದ ಸಣ್ಣ ಕೀಟಗಳನ್ನೂ ತೋರಿಸಿದ. ಅರಣ್ಯದಲ್ಲಿ ಆರೋಗ್ಯದಿಂದಿರುವ ಗಿಡಗಳಿಗೆ ವಿಚಿತ್ರವಾದ ಕೀಟಬಾಧೆ ಹಿಡಿದು ಅವು ಸಾಯತೊಡಗುತ್ತವೆ. ಈ ಕೀಟಗಳನ್ನು ಹಿಡಿಯುವ ಸಲುವಾಗಿ ಪ್ಲಾಸ್ಟಿಕ್ ಪೆಟ್ಟಿಗೆಯನ್ನು ತೂಗು ಹಾಕಿ ಅದರೊಳಗೆ ದ್ರವವನ್ನು ಇಟ್ಟಿರುತ್ತಾರೆ. ಯುರೋಪಿನ ಅರಣ್ಯದಲ್ಲಿ ಇದು ಸಾಮಾನ್ಯ ದೃಶ್ಯ. ಇದರ ಬಗ್ಗೆ ಟಿಪ್ಪಣಿ ಮಾಡುತ್ತಾ "ಇದರಿಂದ ಏನಾದರೂ ಉಪಯೋಗವಾಗುವದೆಂದು ನನಗೆ ಅನಿಸುವದಿಲ್ಲ. ಹದಗೆಡುತ್ತಿರುವ ಅರಣ್ಯದ ಬಗ್ಗೆ ಏನಾದರೂ ಮಾಡಬೇಕೆಂದು ಹೀಗೆ ಮಾಡುತ್ತಿದ್ದೇವೆ. ಕೇವಲ ಮನಸ್ಸಿನ ನೆಮ್ಮದಿಗಾಗಿ ಇವೆ, ಈ ಪೆಟ್ಟಿಗೆಗಳು."

ಚಳಿಗಾಲದಲ್ಲಿ ಹಿಮದ ಜೊತೆ ಗಾಳಿ ಬೀಸುವಾಗ ಹಲವಾರು ಗಿಡ ಮರಗಳು ಬೀಳುತ್ತವೆ. ಹೀಗೆ ಬಿದ್ದ ಮರವೊಂದರ ಹತ್ತಿರ ನಮ್ಮನ್ನು ಕರೆದೊಯ್ದು ಆ ಗಿಡದ ಬೇರನ್ನು ತೋರಿಸಿದ. ಭೂಮಿಯಲ್ಲಿರುವ ಮಣ್ಣಿನಲ್ಲೂ ಆಮ್ಲ ಮಳೆಯಿಂದಾಗಿ ಫಲವತ್ತತೆ ಮಾಯವಾಗಿ ಗಿಡದ ಬೇರುಗಳ ಮೇಲೆ ಪರಿಣಾಮ ಬೀರಿತ್ತು. ಮಣ್ಣಿನಲ್ಲಿರುವ ಸೂಕ್ಷ್ಮ ಜೀವಾಣುಗಳು ನಾಶವಾಗಿದ್ದವು. ಬೇರುಗಳಿಗೆ ಅವಶ್ಯಕವಿರುವ ಧಾತುಗಳು ಸಿಗದೆ ಅವು ಸಾಯುತ್ತಿದ್ದು, ಗಾಳಿ ಬಂದಾಗ ನಿಲ್ಲಲಾಗದೆ ಬುಡಸಹಿತ ಕಿತ್ತು ಬೀಳುತ್ತಿದ್ದವು. ಬೇರುಗಳು ಶಕ್ತಿಯನ್ನೇ ಕಳೆದುಕೊಂಡು ಸತ್ವಹೀನವಾಗಿದ್ದವು.

ಸಾಫನ್‌ವೀಲ್ ಅರಣ್ಯದ ಈ ಅಧಿಕಾರಿ ತನ್ನ ಅಧಿಕಾರದ ಅವಧಿಯಲ್ಲಿ ಹದಗೆಡುತ್ತಿರುವ ಅರಣ್ಯದ ಬಗ್ಗೆ ಚಿಂತಾಕ್ರಾಂತನಾಗಿ ತನ್ನ ಮೇಲಾಧಿಕಾರಿಗಳಿಗೆ ವಿವರವಾದ ವರದಿ ಕಳುಹಿಸಿದ್ದ. ಅವರು ಇನ್ನಷ್ಟು ರಾಸಾಯನಿಕ ಗೊಬ್ಬರ ನೀಡುವ ಸಲಹೆ ಮಾಡಿದರು! ಆಗ ಅವನು ಸ್ಥಳೀಯರನ್ನು ಅರಣ್ಯದೊಳಗೆ ಕರೆತಂದು ಗಂಭೀರ ಸ್ಥಿತಿಯ ಪರಿಚಯ ಮಾಡಿಸಿದ್ದ.

ಅರಣ್ಯ ಅಧಿಕಾರಿ ಬಹಳ ಖಿನ್ನ ಮನಸ್ಸಿನಿಂದ "ನಮ್ಮ ಈ ಅರಣ್ಯವನ್ನು ನೀವೇ ನೋಡಿದ್ದೀರಿ. ಮುಕ್ಕಾಲುಪಾಲು ಗಿಡಗಳು ರೋಗಪೀಡಿತ-ವಾಗಿವೆ. ಮುಂಬರುವ ವರ್ಷಗಳಲ್ಲಿ ಮಾಲಿನ್ಯವನ್ನು ಸಂಪೂರ್ಣವಾಗಿ ತಡೆದರೆ ಮಾತ್ರ ನಮ್ಮ ಹಸಿರನ್ನು ಉಳಿಸಲು ಸಾಧ್ಯ. ಇಲ್ಲವಾದರೆ ಇನ್ನು ಐದು ಹತ್ತು ವರ್ಷಗಳಲ್ಲಿ ಗಿಡಗಳು ಸತ್ತು ಬರಡಾಗುತ್ತವೆ, ಎಂದರು'.

ಆ ದಿನ ಮಧ್ಯಾಹ್ನ ನಮಗೆಲ್ಲರಿಗೂ ಈ ಯುವ ಅರಣ್ಯ ಅಧಿಕಾರಿ ತನ್ನ ಮನಸ್ಸಿನ ಆಳದಲ್ಲಿದ್ದ ದುಃಖವನ್ನು ಪ್ರತ್ಯಕ್ಷವಾಗಿ ತೋರಿಸಿ ಅರಣ್ಯಕ್ಕಾದ ಹಾನಿಯನ್ನು ವಿವರಿಸಿದ.

ಶಿಲ್‌ಟ್ರಾನ್ ತಲಪಿದಾಗ ಸಂಜೆಯಾಗಿತ್ತು. ಸ್ನೇಹಿತರು ಆಗಲೆ ಹಲವಾರು ಜನರನ್ನು ಒಟ್ಟು ಹಾಕಿ ಚರ್ಚಿಸಲು ಆರಂಭಿಸಿದ್ದರು. ದೊಡ್ಡದೊಂದು ಪುಸ್ತಕದಲ್ಲಿ ಜನರು ತಮ್ಮ ಅಭಿಪ್ರಾಯಗಳನ್ನು, ಸಲಹೆಯನ್ನು ಬರೆಯುತ್ತಿದ್ದರು. ಪಾದಯಾತ್ರೆಯ ಕೊನೆಯ ಹಂತದಲ್ಲಿ ದೇಶದ ರಾಜಧಾನಿಯಾದ ಬರ್ನ್‌ದಲ್ಲಿ ಈ ಪುಸ್ತಕವನ್ನು ಸಂಸತ್ತಿಗೆ ಮನವಿ ರೂಪದಲ್ಲಿ ಕೊಡುವ ಯೋಜನೆ ಹಾಕಿಕೊಂಡಿದ್ದರು. ನಾನೂ ಈ ಪುಸ್ತಕದಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದೆ. ಜೀವನಕ್ಕೆ ಆಧಾರವಾಗಿರುವ ಶುದ್ಧ ಗಾಳಿ, ನೀರು ಮತ್ತು ಮಣ್ಣನ್ನು ಕೊಡುವ ಅರಣ್ಯವನ್ನು ಕಾಪಾಡುವಂತೆ ಕನ್ನಡ, ಹಿಂದಿ ಮತ್ತು ಇಂಗ್ಲೀಷ್‌ನಲ್ಲಿ ಬರೆದೆ.

ಅಂದೇ ಸಂಜೆ ನಾವು ಹಿಂದಿರುಗಬೇಕಾಗಿತ್ತು. ಬಸ್ ನಿಲ್ದಾಣದವರೆಗೆ ಬಂದು ಸ್ನೇಹಿತರು

ವಿದಾಯ ಹೇಳಿದರು. ಆಗ ಬೀದಿ ನಾಟಕದ ತಂಡದವರು ತಮ್ಮ ವಾದ್ಯಗಳೊಂದಿಗೆ ಬಂದು ನೃತ್ಯ ಗಾಯನದ ಮಾಧುರ್ಯದ ಜೊತೆ ನಮ್ಮನ್ನು ಬೀಳ್ಕೊಟಾಗ ಕಣ್ಣಲ್ಲಿ ನೀರೂರಿತು. ಕೆಲವೇ ಗಂಟೆಗಳಲ್ಲಿ ನಾವು ಹತ್ತಿರದ ಗೆಳೆಯ-ರಾಗಿದ್ದೆವು.

## ಕಾರಿಗೆ ಬದಲಾಗಿ ಕುದುರೆ ಬಂಡಿ!

ನಾನು ಭಾಗವಹಿಸಿದ ಮತ್ತೊಂದು ಪಾದಯಾತ್ರೆ ಗುಂಪಿನವರು ಆರಾಪೋ ರಾಜ್ಯದಿಂದ ಹೊರಟಿದ್ದರು. ಇವರದು ಎಂಟು ಜನರ ಸಣ್ಣ ಗುಂಪು. ಸೂಸಿ ಎಂಬ ಯುವತಿ ಗುಂಪಿನ ನಾಯಕಿ. ಕಾರು ಬಳಕೆಯಿಂದ ವಾಯುಮಾಲಿನ್ಯ ಹೆಚ್ಚಾಗುವದನ್ನು ಪ್ರತಿಭಟಿಸಲು ಇವರು ಒಂದು ಕುದುರೆಯ ಬಂಡಿಯನ್ನು ತೆಗೆದುಕೊಂಡು ಹೊರಟಿದ್ದರು. ಬಂಡಿಯೊಳಗೆ ತಮ್ಮ ಸಾಮಾನುಗಳನ್ನು ಹಾಕಿ ತಮ್ಮ ಬೆನ್ನಿನ ಭಾರವನ್ನು ಕಡಿಮೆ ಮಾಡಿಕೊಂಡಿದ್ದರು. ಕುದುರೆ ಬಂಡಿಯ ಎರಡೂ ಪಕ್ಕದಲ್ಲಿ ಬಟ್ಟೆಯ ಮೇಲೆ ಆಮ್ಲ ಮಳೆಯಿಂದ ನಾಶವಾಗುತ್ತಿರುವ ಆರಣ್ಯದ ದೊಡ್ಡ ಚಿತ್ರ. ಒಂಟಿ ಕುದುರೆಯ ಈ ಬಂಡಿ, ದೊಡ್ಡದಾಗಿ ಬಿಡಿಸಿದ ಚಿತ್ರ, ಜೊತೆಗೆ ಸಣ್ಣ ಪಾದಯಾತ್ರಿಗಳ ಗುಂಪು ಕಾರಿನಲ್ಲಿ ರಭಸವಾಗಿ ಸಾಗುತ್ತಿದ್ದ ಜನರನ್ನೂ ಆಕರ್ಷಿಸಿ, ಅವರ ವೇಗ ತಗ್ಗಿಸಿ ಇದೇನು ಎಂದು ನೋಡಿ ಹೋಗುತ್ತಿದ್ದರು. ಕೆಲವು ಹಳ್ಳಿಗಳಲ್ಲಿ ರೈತರು ಕುದುರೆಯ ಸಲುವಾಗಿ ಜೋಳದ ದಂಟನ್ನು ತೆಗೆದುಕೊಂಡು ಬರುತ್ತಿದ್ದರು. ಕುದುರೆಯ ಹೆಸರು ಫ್ಲಿಕಾ. ಇದೂ ಸಹ ಪಾದಯಾತ್ರಿಗಳ ಪ್ರೀತಿಯ ಜೊತೆಗಾತಿಯಾಗಿತ್ತು. ಅಪರೂಪವಾಗುತ್ತಿರುವ ಕುದುರೆ ಬಂಡಿಯು ಮತ್ತೆ ಕಾಣಿಸಿದಾಗ ಜನರು ಕುತೂಹಲದಿಂದ ಮನೆಯ ಹೊರಗೆ ಬಂದು ನೋಡುತ್ತಿದ್ದರು.

ಕುದುರೆಯಿಂದಾಗಿ ಗುಂಪಿನ ಸದಸ್ಯರಿಗೆ ಹಳ್ಳಿಗಳಲ್ಲಿ ವಸತಿ ಸಮಸ್ಯೆಯ ಪರಿಹಾರ ಸುಲಭವಾಗಿತ್ತು. ಕುದುರೆ ಇದೆ ಎಂದರೆ ಹಳ್ಳಿಯ ರೈತರು ಅದಕ್ಕೆ ಸಹಾಯ ಮಾಡಲು ಮುಂದೆ ಬರುತ್ತಿದ್ದರು. ಹುಲ್ಲು ದಾಣಿ ಒದಗಿಸುತ್ತಿದ್ದರು, ಆದರ ವಾಸಕ್ಕಾಗಿ ಕೊಟ್ಟಿಗೆಯನ್ನು ಬಿಟ್ಟು ಕೊಡುತ್ತಿದ್ದರು. ಸದಸ್ಯರಿಗೂ ಹುಲ್ಲು ಶೇಖರಿಸುವ ಕೋಣೆಯಲ್ಲಿ ಮಲಗುವ ವ್ಯವಸ್ಥೆ ಮಾಡಲಾಗುತ್ತಿತ್ತು. ಫ್ಲಿಕಾ ಹಳ್ಳಿಯ ಜನರ






ಜೊತೆ ಸಂಪರ್ಕಮಾಧ್ಯಮವಾಗಿ ಕೆಲಸ ಮಾಡುತ್ತಿತ್ತು. ಈ ಗುಂಪಿನವರು ಎಂದೂ ನೆಲಮಾಳಿಗೆಯಲ್ಲಿ ಮಲಗುವ ಪ್ರಮೇಯ ಒದಗಿ ಬಂದಿರಲಿಲ್ಲ!

## ಒಣಗಿದ ಹಣ್ಣಿನ ಗಿಡಗಳು

ದಾರಿಯ ಪಕ್ಕದಲ್ಲಿರುವ ಹಣ್ಣಿನ ತೋಟದಲ್ಲಿ ಹಲವಾರು ಗಿಡಗಳು ಒಣಗಿ ನಿಂತಿರುವದನ್ನು ತೋರಿಸುತ್ತಾ ಸೂಸಿ "ನೋಡಿ ಆಮ್ಲ ಮಳೆಯ ಪರಿಣಾಮವನ್ನು. ಇಲ್ಲಿಯವರೆಗೆ ಅಡವಿಗೆ ಮಾತ್ರ ಸೀಮಿತವಾಗಿದ್ದ ಈ ಸಮಸ್ಯೆ ನಿಧಾನವಾಗಿ ಹಣ್ಣಿನ ತೋಟಗಳಿಗೆ, ಕೃಷಿ ಭೂಮಿಗೆ ಆವರಿಸುತ್ತಿದೆ" ಎಂದಳು. ಹಲವಾರು ಸೇಬಿನ ಗಿಡಗಳು, ಚೇರಿ ಹಣ್ಣಿನ ಗಿಡ ಒಣಗಿ ನಿಂತಿದ್ದರೆ, ಇನ್ನೂ ಕೆಲವು ಮರಗಳು ರೋಗಪೀಡಿತವಾಗಿದ್ದವು.

ಹಾರ್ನಸನ್ ಎಂಬ ಹಳ್ಳಿಗೆ ಬಂದಾಗ ದೊಡ್ಡ ಆಳವಾದ ಭಾವಿಯೊಂದನ್ನು ನಿರ್ಮಿಸುತ್ತಿರುವದನ್ನು ತೋರಿಸಿದರು. ಇದನ್ನು ಅರ್ಧ ಕಟ್ಟಿ ನಿಲ್ಲಿಸಲಾಗಿತ್ತು. ಸ್ವಿಟ್ಸರಲಂಡ್‌ನ ಅಣುಶಕ್ತಿ ಘಟಕದಿಂದ ಹೊರ ಬರುವ ಬೂದಿಯನ್ನು ಇಲ್ಲಿ ಹೂಳುವ ಯೋಜನೆ ಮಾಡಲಾಗಿತ್ತು. ಆದರೆ ಜನರ ಪ್ರತಿಭಟನೆಯಿಂದಾಗಿ ಇದನ್ನು ಸ್ಥಗಿತಗೊಳಿಸಲಾಗಿತ್ತು. ಈ ಅಣು ಬೂದಿಯನ್ನು ಚೀನಾಕ್ಕೆ ಕಳುಹಿಸಲಾಗುತ್ತಿದೆ ಎಂದು ತಿಳಿದು ಬಂತು.

ಅರಣ್ಯವನ್ನು ಕಬಳಿಸುತ್ತಿರುವ ಇನ್ನೊಂದು ರಾಕ್ಷಸ– ಇಲ್ಲಿಯ ಫ್ರೀ ವೇ (Free way). ನಮ್ಮಲ್ಲಿಯ ಹೆದ್ದಾರಿಯ ನಾಲ್ಕು ಪಟ್ಟು ದೊಡ್ಡದಾಗಿರುವ ಫ್ರೀ ವೇಗಳು ವಾಹನ ಸಂಚಾರ ಸುಗಮ ಗೊಳಿಸುತ್ತವೆ. ಈ ರಸ್ತೆಗಳಲ್ಲಿ ನೂರು ಕಿಲೋಮೀಟರ್‌ರಿಗಿಂತ ಕಡಿಮೆ ವೇಗದಲ್ಲಿ ನಡೆಸುವುದಿಲ್ಲ! ಸಾಗಿಮುಲತಾಲಿ ಎಂಬ ಸುಂದರ ಕಣಿವೆ ಪ್ರದೇಶದಲ್ಲಿ ಮುಂಬರುವ ದಿನಗಳಲ್ಲಿ ನಿರ್ಮಿಸಲಾಗುವ ಫ್ರೀ ವೇ ವಿರುದ್ಧ ಹಳ್ಳಿಗರು ಧ್ವನಿ ಎತ್ತಿದ್ದಾರೆ.

ಪಾದಯಾತ್ರೆಯ ಕೊನೆ ಅನ್ನರ ಲಿಂಡೆ ಎಂಬ ಹಳ್ಳಿಯಲ್ಲಿ. ಅನ್ನರ ಎಂಬ ಮೂರುನೂರು ವರ್ಷದ ಹಳೆಯ ಮರ ಅಲ್ಲಿ ಇದ್ದುದರಿಂದ ಆ ಹಳ್ಳಿಗೆ ಅನ್ನರಲಿಂಡೆ ಎಂಬ ಹೆಸರು ಬಂದಿತ್ತು. ನಾವು ಅಲ್ಲಿ ತಲಪಿದಾಗ ಬಹಳ ಮಳೆ. ಮಳೆಯಿಂದ ರಕ್ಷಣೆ ಪಡೆಯಲು ವಿಶಾಲವಾಗಿದ್ದ ಅನ್ನರ ಮರದ ಕೆಳಗಡೆ ಹೋಗಿ ಕುಳಿತಕೊಂಡೆವು. ಆಗ ಎನ್ನಾ ಎಂಬ ಯುವತಿ ನನ್ನ ಹತ್ತಿರ "ಭಾರತದಲ್ಲಿ ಜನರು ಸ್ವಿಟ್ಸರಲಂಡ ಬಗ್ಗೆ ಯಾವ ವಿಚಾರವನ್ನು ಇಟ್ಟುಕೊಂಡಿದ್ದಾರೆ?" ಎಂದು ಕೇಳಿದಳು. ನಾನು ಉತ್ತರಿಸುತ್ತಾ "ನಿಮ್ಮ ದೇಶವೆಂದರೆ ಸುಖ ಸಮೃದ್ಧಿಯ ನಾಡು. ವಿಕಾಸ ಹೊಂದಿ ಸ್ವರ್ಗಸುಖವನ್ನು ಅನುಭವಿಸುವ ಜನರು" ಎಂದು ಹೇಳಿದಾಗ ಅವಳು "ಹೌದು ಇದು ನಮ್ಮ ಸ್ವರ್ಗ. ಆದರೆ ಈ ಸ್ವರ್ಗದಲ್ಲಿ ಉಸಿರಾಡಲು ಶುದ್ಧವಾದ ಗಾಳಿಯಿಲ್ಲ, ಸ್ವಚ್ಛ-ವಾದ ನೀರಿಲ್ಲ. ಈ ಸುಖದಲ್ಲಿ ಮುಳುಗಿದ ಜನರಿಗೆ ಆತ್ಮೀಯವಾಗಿ ಮಾತನಾಡಲೂ ಸಮಯವಿಲ್ಲ. ಈ ಸ್ವರ್ಗದ ಮತ್ತೊಂದು ಮುಖವನ್ನು ಭಾರತೀಯರಿಗೆ ತಿಳಿಸುವಿರಾ?" ಎಂದಳು.

ಪಾಶ್ಚಿಮಾತ್ಯ ವಿಕಾಸದ ಹಾದಿಯನ್ನು ಅಂಧಾನುಕರಣೆ ಮಾಡುವ ಭಾರತ ಇಂದು ಮುಂದುವರಿದ ದೇಶಗಳ ಸಮಸ್ಯೆಗಳನ್ನು ಅರಿತು ತನ್ನದೇ ಆದ ಹಾದಿಯನ್ನು ಕಂಡುಕೊಳ್ಳಬೇಕಾ-ಗಿದೆ. ಭೂಪಾಲದಂತಹ ದುರಂತವನ್ನು ಕಂಡಿ-ರುವ ನಾವು, ಎನ್ನಾಳ ಪ್ರಶ್ನೆಯನ್ನು ಅರಿತುಕೊಂಡು ವಿಕಲ್ಪದ ಹಾದಿಯನ್ನು ಹುಡುಕುವುದು ಉತ್ತಮವಲ್ಲವೆ? ✡



# ಡೇಸ್ ರಾಯರ್ ಪ್ರಸ್ತುತ

'ಡೇಸ್ ರಾಯರ್ ಪ್ರಸ್ತುತ' ಎಂಬುದು, ತಮ್ಮ ಓಣಿಯಲ್ಲಿಯೇ ಜಗತ್ಪ್ರಸಿದ್ಧರಾದ ಡೇಸ್ ರಾಯರ್ ಎಂಬ 'ಸರ್ವಜ್ಞ'ರು ಸ್ಥಾಪಿಸಿದ ಸಂಸ್ಥೆ. ಅಂತಾರಾಷ್ಟ್ರೀಯ ಮಟ್ಟವನ್ನು ಮಿಕ್ಕಿ ಅಂತರ್'ತಾರಾ' ವ್ಯಾಪ್ತಿಯನ್ನು ಹೊಂದಿದ ವ್ಯಕ್ತಿ ಡೇಸ್ ರಾಯರ್. 'ತಿಲಕಾಷ್ಠ ಮಹಿಷ ಬಂಧನ' ಗಾಂಧೀಯರ್ಥದ, 'ಪ್ರಸ್ತುತ'ದ ಕೆಲವು ಸಂಶೋಧನಾತ್ಮಕ/ರಹಸ್ಯಾತ್ಮಕ/ಸಮಸ್ಯಾತ್ಮಕ ಕೊಡುಗೆಗಳನ್ನು ಆಗೀಗ (ಆಯಕಟ್ಟಿನ) ಸ್ಥಳ ನೋಡಿ ಕೊಡಲಾಗುವುದು. ಡಾರ್ವಿನ್ನನ ಕಪಿಯಿಂದ ಕೇಶವಾಪುರದ ಕವಿಯವರೆಗೆ ಸಮಸ್ತ ವಿಷಯಗಳೂ 'ಡೇಸ್ ರಾಯರ್ ಪ್ರಸ್ತುತ'ದ ವ್ಯಾಪ್ತಿಯಲ್ಲಿ ಬರುತ್ತವೆ.

-ಸಂಪಾದಕ

೧

[ವಿಕಾಸ ವಿಶ್ವ]

**ಗಾಂಧೀಜಿಯ ಮಂಗಗಳು**

ಸ್ವಾತಂತ್ರ್ಯ ಪೂರ್ವದ ಭಾರತ: ಗಾಂಧೀಜಿ ಇದ್ದರು. ಅವರ ಪ್ರೀತಿಯ ಮೂರೂ ಮಂಗಗಳಿದ್ದವು. "ಕೆಟ್ಟದ್ದನ್ನು ಕೇಳುವದಿಲ್ಲ, ಕಾಣುವದಿಲ್ಲ, ಆಡುವದಿಲ್ಲ" ಎಂಬ ತಮ್ಮ ಭಂಗಿಗಳಲ್ಲಿಯೇ ನಿರತವಾಗಿದ್ದವು. ಆದ್ದರಿಂದ ಮಂಗಗಳಾಗೇ ಉಳಿದಿದ್ದವು.

ಸ್ವಾತಂತ್ರ್ಯೋತ್ತರ ಭಾರತ: ಗಾಂಧೀಜಿ ಇರಲಿಲ್ಲ. ಆದರೆ ಅವರ ಮೂರೂ ಮಂಗಗಳಿದ್ದವು. ದೊಡ್ಡ ಮನುಷ್ಯರನ್ನು ರಕ್ಷಿಸುವಷ್ಟು ದೊಡ್ಡ ಮಂಗಗಳಾಗಿದ್ದವು. ಆದ್ದರಿಂದ ಭಂಗಿಗಳನ್ನು ಬದಲಿಸಿದವು. ಈಗ ಅವು, ಪ್ರತಿಯೊಂದೂ, ತನ್ನ ಎರಡೂ, ಕೈಕಾಲು ಮತ್ತು ಬಾಲಗಳಿಂದ ಉಳಿದ ಎರಡೂ ಮಂಗಗಳ ಕಿವಿ, ಕಣ್ಣು, ಬಾಯಿಯಾದಿ ಒಂಭತ್ತೂ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಹಿಡಿದು, "ನಾನು ಸತ್ತರೂ ಹರಕತ್ತಿಲ್ಲ, ನಿಮ್ಮಿಂದ ಏನನ್ನೂ ಕೇಳಗೊಡುವುದಿಲ್ಲ, ಕಾಣಗೊಡುವುದಿಲ್ಲ, ಆಡಗೊಡುವುದಿಲ್ಲ," ಎಂದು ಒಂದನ್ನೊಂದು ಹತ್ತಿಕ್ಕಿ ಹಿಡಿದ ಭಂಗಿಯಲ್ಲಿ ಭದ್ರವಾಗಿ ಕೂತುಬಿಟ್ಟಿದ್ದವು. ಅಲ್ಪಾವಧಿಯಲ್ಲೇ ಮೂರೂ ಮಂಗಗಳು ಪಕ್ವ ರಾಜಕಾರಣಿಗಳಾಗಿ ಅತ್ಯುನ್ನತ ಹುದ್ದೆಗಳನ್ನು ಅಲಂಕರಿಸಿದವು.

ಡಾರ್ವಿನ್ನನ ವಿಕಾಸವಾದ ಎಷ್ಟು ವಿಚಿತ್ರ ಸತ್ಯ!

೨

[ಲಾಂಗೂಲ ಚಾಲನ ರಂಗ]

**ಕವಿ-ಕಾವ್ಯ-ದೃಷ್ಟಿ**

ಲಾಂಗೂಲಾಚಾರ್ಯರು ಪ್ರೊಫೆಸರರಾಗಿದ ತರಗತಿಯಲ್ಲಿ ನಡೆದ ಸಂಗತಿ. ವಿಷಯ ಕಾವ್ಯ. ಆಗ ಒಂದು ಪ್ರಶ್ನೆ; "ಮಹಾಕವಿಗೂ ಸಾದಾ ಕವಿಗೂ ಅಂತರವೇನು?" ಆಚಾರ್ಯರು ಹೇಳಿದರು; "ಮಹಾತ್ಮನಿಗೂ ಹುತಾತ್ಮನಿಗೂ ಇರುವ ಅಂತರ." ವಿದ್ಯಾರ್ಥಿಗಳಿಗೆ ತಿಳಿಯಲಿಲ್ಲ. ಆಚಾರ್ಯರು ವಿವರಿಸಿದರು; "ಕಾವ್ಯದ ಮೂಲಕ ಕನಿಷ್ಠಪಕ್ಷ ದರ್ಶನವಾದರೂ ಸಿಕ್ಕವನು ಮಹಾತ್ಮನಾಗುತ್ತಾನೆ. ದರ್ಶನ ಹೋಗಲಿ, ಅಶನವೂ ಸಿಗಲಾರದವನು ಸ್ವಾಭಾವಿಕವಾಗಿಯೇ ಹುತಾತ್ಮನಾಗುತ್ತಾನೆ." ಕೊನೆಯ ಬೆಂಚಿನಲ್ಲಿ ಕೂತಿದ್ದ ಕುಲಕರ್ಣಿ ಎಂಕಣ್ಣ ಕೇಳಿದ; "ಹಾಗಾದರೆ ನಮ್ಮ ಕವಿ ಎಂದರೆ ಯಾರು?" ಅದಕ್ಕೆ ಆಚಾರ್ಯರ ಉತ್ತರ: "ಮಹಾತ್ಮ ಹಾಗೂ ಹುತಾತ್ಮ ಇಬ್ಬರನ್ನೂ ಮಿಕ್ಕಿದ ಅನಾಹುತಾತ್ಮ ಈತ." ವಿವರಣೆ: "ದರ್ಶನವನ್ನು ಆಚೆಗೆ ದಬ್ಬಿ ಅಶನದ ನಂತರ (ಕಾಷ್ಠ)ವ್ಯಸನ ಹುಡುಕಿಕೊಂಡು ಅನಾಹುತ ತಂದುಕೊಳ್ಳುವ (ಮಣ್ಣಿನ) ವಾಸನಾ ಜೀವಿ."

೩

[ಸಂಶೋಧನ ರಂಗ]

**ಮುಗಿಲು ಹರಿದು ಬೀಳುತ್ತದೆ**

ಇನ್ನೂ ಒಂದೆರಡು ವರ್ಷಗಳಲ್ಲಿ 'ಕಸ್ತೂರಿ'ಯ ಅಚ್ಚು ಕೂಟದ ಕಾರ್ಮಿಕರೋ, ಕರಡು ಪ್ರತಿ ಓದುವವರೋ, ಮೊಹೆಂಜೊದಾರೋ ಲಿಪಿಯ ರಹಸ್ಯವನ್ನು ಒಡೆದುಬಿಡಲಿದ್ದಾರೆ. ಏಕೆಂದರೆ, ಒಂದು 'ಮೌಲ್ಯ ವಿವೇಚನ ಮಾಲೆ'ಯ ಬರಹಗಾರರ ಹಸ್ತಪ್ರತಿಯಲ್ಲಿಯ ಕಾಗುಣಿತಗಳನ್ನು, ಶೇಕಡಾ ೫೦ ರಷ್ಟು ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲ ಯಾರಾದರೂ, ಜಗತ್ತಿನ ಯಾವುದೇ ಗೂಢಲಿಪಿಯ ರಹಸ್ಯ ಭೇದಿಸಲು ಸಮರ್ಥರಾಗಿಬಿಡುತ್ತಾರೆಂದು, 'ವಾಶಿಂಗ್ಟನ್ ಪೋಸ್ಟ್' ಮೂಲಗಳಿಗೆ ಗುಪ್ತ ಮಾಹಿತಿ ದೊರಕಿದೆಯಂತೆ. (ಕ್ಷಮಿಸಿ, ಇದು ತೀರ ಕಾನ್ಫಿಡೆನ್ಸಿಯಲ್ ವರದಿಯಾದ್ದರಿಂದ, ರಹಸ್ಯ ಕಾಪಾಡಲು ಪ್ರತಿಯೊಬ್ಬ ಓದುಗರಿಗಾಗಿಯೂ ಪ್ರತ್ಯೇಕ ಪ್ರತಿಗಳಲ್ಲಿಯೇ ಪ್ರಕಟಿಸಿದ್ದೇವೆ.)

೪

[ಕಾರ್ಮಿಕ ರಂಗ]

**ಕೊನೆಯುಚು**

ಅಡಿಗೆ ಮನೆ ಕೆಲಸವೂ ಕಾರ್ಮಿಕರಂಥ ದುಡಿತವೇ. ಆದ್ದರಿಂದ, ಆ ಕೆಲಸಗಾರರಿಗೂ 'ಲೇಬರ್ ಆ್ಯಕ್ಟ್' ಲಾಗೂ ಆಗಬೇಕೆಂದು ಸಕಲ ಹೆಂಡಂದಿರಲ್ಲ, ೧೯೮೭ ಮೇ ತಿಂಗಳಿನಲ್ಲಿ ವ್ಯಾಜ್ಯ ಹೂಡಿದ್ದರಷ್ಟೇ. ೧೯೮೭ ಫೆಬ್ರುವರಿ ವರೆಗೆ, ಈ ಬಗ್ಗೆ ವಾದ ಕೇಳಿದ ನಂತರ ನ್ಯಾಯಾಲಯವು, 'ವಿಷಯ'ಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಕೇಸನ್ನು 'ಲೇಬರ್ ಕೋರ್ಟಿ'ಗೆ ಎಂದು ವರ್ಗಾಯಿಸಿದೆ. ತೀರ್ಪು ಟೈಪಾಗಿ ಸಹಿಗೆ ಬಂದಾಗ, ಫಿರ್ಯಾದಿಗಳನ್ನು ಒಮ್ಮೆ ಸರಿಯಾಗಿ ನೋಡಿದ ನ್ಯಾಯಾಧೀಶರು 'ಕೋರ್ಟ್' ಎಂಬ ಶಬ್ದವನ್ನು 'ವಾರ್ಡ್' ಎಂದು ತಿದ್ದಿ ಕಳುಹಿಸಿದ್ದಾರಂತೆ.

೫

[ಸಿನಿಮಾ ಸುದ್ದಿ]

**ಪ್ರಶಸ್ತಿ ಪ್ರದಾನ**

೧೯೮೭: ರಾಷ್ಟ್ರೀಯ ಸ್ವರ್ಣಪದಕ ವಿಜೇತ ಚಲನಚಿತ್ರ ಕುರಿತು ಆಯ್ಕೆ ಸಮಿತಿ ಅಧ್ಯಕ್ಷರ

ಒಂದು ಟಿಪ್ಪಣಿ; "ಈ ಚಿತ್ರ ನಿಜಕ್ಕೂ ಒಂದು ಅಪೂರ್ವ ಕಲಾಕೃತಿಯಾಗಿದೆ ವರ್ಷದ ಶ್ರೇಷ್ಠ ಕೊಡುಗೆಯಾಗಿದೆ. ವಿತರಕರ ಅಸಹಕಾರದಿಂದ ಈ ಚಿತ್ರ ಬಿಡುಗಡೆಯಾಗಲಿಲ್ಲ ಎಂಬ ಗೌಣ ಅಂಶ ಬಿಟ್ಟರೆ, ನಮಗೆ ಅತ್ಯಂತ ಸಮಾಧಾನ ತಂದ ಚಿತ್ರ ಇದಾಗಿದೆ."

೧೯೯೭: ಅಂತಾರಾಷ್ಟ್ರೀಯ ವಜ್ರ ಪದಕ ವಿಜೇತ ಚಲನಚಿತ್ರ ಕುರಿತು ಆಯ್ಕೆ ಸಮಿತಿ ಅಧ್ಯಕ್ಷರ ಟಿಪ್ಪಣಿ: "ಈ ಚಿತ್ರ ನಿಜಕ್ಕೂ. ಮನು ಕುಲದ ಒಂದು ಅದ್ಭುತ ಕೃತಿರತ್ನವಾಗಿದೆ. ಸಾರ್ವಕಾಲಿಕ ಶ್ರೇಷ್ಠ ಚಿತ್ರವಿದು. ನಿರ್ಮಾಪಕರ ಅಸಹಕಾರದಿಂದ ಈ ಚಿತ್ರ ತಯಾರಾಗಲಿಲ್ಲ ಎಂಬ ಗೌಣ ಅಂಶ ಬಿಟ್ಟರೆ ನಮಗೆ ಮರು ಹುಟ್ಟು ಕೊಟ್ಟ ಚಿತ್ರ ಇದಾಗಿದೆ."

೬

[ಕ್ರೀಡಾ ರಂಗ]

**ಒಲಿಂಪಿಕ್ ವಿಶೇಷ ಪದಕ**

೨೧ನೇ ಶತಮಾನದಲ್ಲಿಯ ಒಂದು ಸಮಾರಂಭ ಕುರಿತು, ಆಗಿನ ಬಾನುಲಿ ಸುದ್ದಿಯಲ್ಲಿ ಪ್ರಸಾರಿತವಾಗಲಿದ್ದುದು:

"ಭಾರತೀಯ ಒಲಿಂಪಿಕ್ ಸಂಸ್ಥೆಯು ಸುವರ್ಣಾಕ್ಷರಗಳ ತನ್ನ 'ರಜತೋತ್ಸವ'ವನ್ನು ಪ್ಯಾರಿಸ್ಸಿನಲ್ಲಿ ವಿಜೃಂಭಣೆಯಿಂದ ಆಚರಿಸಿತು. ಪ್ರಪಂಚದ ಎಲ್ಲ ದೇಶಗಳ ಗಣ್ಯರು, ಪ್ರಮುಖರು, ಕ್ರೀಡಾಪಟುಗಳು ಕಿಕ್ಕಿರಿದು ತುಂಬಿದ ಈ ಅಭೂತಪೂರ್ವ ಸಮಾರಂಭದಲ್ಲಿ, ಭಾರತಕ್ಕೆ ಒಲಿಂಪಿಕ್ಸ್ ಪರವಾಗಿ, ಚಾರಿತ್ರ್ಯಕ ವಿಶೇಷದ ಒಂದು ಸ್ವರ್ಣಪದಕವನ್ನು ನೀಡಿ ಗೌರವಿಸಲಾಯಿತು. ಸದರೀ ರಜತೋತ್ಸವದ, ಎಂದರೆ ಕಳೆದ ೨೫ ವರುಷಗಳ ಅವಧಿಯು ಎಲ್ಲ ಒಲಿಂಪಿಕ್ಸ್‌ನ ಪ್ರತಿಯೊಂದು ಸ್ಪರ್ಧೆಯಲ್ಲಿ ಭಾಗವಹಿಸಿಯೂ, ಪ್ರತಿಯೊಂದು ಪದಕವನ್ನೂ ಇತರ ದೇಶಗಳಿಗೇ ಬಿಟ್ಟುಕೊಟ್ಟು, ಭಾರತೀಯ ತ್ಯಾಗ ಸಂಸ್ಕೃತಿಯನ್ನು ಮೆರೆದ ಹಿರಿಮೆಗಾಗಿ ಈ ಸ್ವರ್ಣ ಪದಕವನ್ನು ನೀಡಲಾಗಿದೆ.

೭

[ಕವಿತಾ ವಿಭಾಗ]

**ರುಕ್ಕಮ್ಮನ ರೊಚ್ಚು**

ಕ್ರಿಮಿಗಳ ಕೊಚ್ಚೆಯಾಗಬೇಡಿರೋ ಕತ್ತೆಗಳೇ
ಎಂದು ಎಷ್ಟೋ ಬಾರಿ ಎಚ್ಚರಿಸಿದರೂ
ಮತ್ತೆ ಮತ್ತೆ ಅಲ್ಲೇ ಮುಲುಗುವ
ಮಕ್ಕಳ ತಲೆ ಹರಟೆ ಕಂಡು
ಪಕ್ಕದ ಮನೆ ರುಕ್ಕಮ್ಮ ರೋಸಿ ಹೋಗಿ
ರೊಚ್ಚಿನಲ್ಲಿ ಹುಚ್ಚಿಯಂತಾದಳು.
ಕೈಲಿ ಕಡುಗೆಂಪು ರೋಮಾಸ್ತ್ರ ಝಳಪಿಸಿ
ಉಕ್ಕಿ ಬಂದವಳಂತೆ ಮಕ್ಕಳ ಮೇಲೆ
ಆಕ್ರಮಣಗೈದಳು. ಮೂಲೆ ಮೂಲೆಯಿಂದ
ಒಂದೊಂದನ್ನೇ ನಿರ್ದಯ ಎಳೆದಳು.
ಸಿಕ್ಕಿ ಸಿಕ್ಕಿದ ಹಾಗೆಯೇ ಜೀವ ಕಕ್ಕಿಸಿದಳು.
ಕುಕ್ಕಿ ಕುಕ್ಕಿ ಕೊನೆಯ ಕಂದನ ವರೆಗೂ
ಕೊಂದಳು. ಉಕ್ಕಿ ಬಂದ ಸಿಟ್ಟಿನಲ್ಲಿ
ಎತ್ತಿ ಎಲ್ಲವನ್ನೂ ತಿಪ್ಪೆಗೆ ಬಿಸಾಕಿ
ತಪ್ತ ನೆತ್ತಿಗಳಿಗೆ ತಪತಪ ನೀರು ಹೊಯ್ದಳು.
ಇನ್ನೇನು ಸತ್ತಾಳು!
ತಲೆಗಾಡಿನ ನಡುವೆ ಬೀಡು ಬಿಟ್ಟಿದ್ದ
ಹೇನಿಗಿನ್ನೇನು ಮಾಡಿಯಾಳು, ಪಾಪ!

(ಕಾಪಿರೈಟ್: ಜೇಸ್ ರಾಯ್)



ಗಲೂ ಯುದ್ಧದ ಭೀತಿ. ಬಾಂಬ್ ದಾಳಿಯಾದರೆ ಇಡೀ ಹಳ್ಳಿಯ ಜನರು ಇಲ್ಲಿ ಬಂದು ನೆಲೆಸುವ ವ್ಯವಸ್ಥೆ ಮಾಡಲಾಗಿದೆ. ಸುರಕ್ಷಿತೆಯ ದೃಷ್ಟಿಯಿಂದ ಇಂದು ಯಾವುದೇ ಹೊಸ ಮನೆ ಕಟ್ಟಡ ಕಟ್ಟಬೇಕಾದರೆ ಈ ತರಹದ ನೆಲಮಾಳಿಗೆಯನ್ನು ಕಟ್ಟುವದು ಅನಿವಾರ್ಯ. ಕಡ್ಡಾಯವಾಗಿ ಪ್ರತಿಯೊಬ್ಬರೂ ಕಟ್ಟಲೇಬೇಕು."

ನೆಲಮಾಳಿಗೆಯಲ್ಲಿ ಮಲಗುವ ಸ್ಥಿತಿ ಬಂದುದಕ್ಕೆ ಸಹಪಾಠಿಗಳು ಬಹಳ ಖೇದ ವ್ಯಕ್ತಪಡಿಸಿದರು. ಅವರಿಗೆ ಒಂದು ತರಹದ ಮುಜುಗರ. ಒಬ್ಬ ಭಾರತೀಯನನ್ನು ನೆಲಮಾಳಿಗೆಯಲ್ಲಿ ಮಲಗಿಸುವದು, ಅದೂ ಶಾಂತಿಗಾಗಿ ಹೋರಾಡುವ ಗುಂಪಿನವರಿಂದ. ಒಂದು ವಿಪರ್ಯಾಸವಾಗಿತ್ತು!

ರಾತ್ರಿ ಬಹಳ ಹೊತ್ತಾದರೂ ನೆಲಮಾಳಿಗೆಯಲ್ಲಿ ಮಲಗಿದ ನನಗೆ ನಿದ್ರೆ ಬರಲಿಲ್ಲ. ಪ್ರಪಂಚದಲ್ಲೆ ಅಲಿಪ್ತ ನೀತಿಗೆ ಹೆಸರುವಾಸಿಯಾದ ಸ್ವಿಟ್ಸರಲಂಡ ಕಳೆದ ೩೦೦ ವರ್ಷಗಳಿಂದ ಯಾವುದೇ ಯುದ್ಧವನ್ನು ಕಂಡಿರಲಿಲ್ಲ. ಮೊದಲನೆಯ ಮತ್ತು ಎರಡನೆಯ ಮಹಾಯುದ್ಧದಲ್ಲಿ ಇಡೀ ಯುರೋಪ್‌ಖಂಡ ಧ್ವಂಸಗೊಂಡರೂ ಈ ಗುಡ್ಡಗಾಡು ಪ್ರದೇಶ ಯುದ್ಧದ ಭೀತಿಯಿಂದ ಪಾರಾಯಿತು. ಹೀಗಿದ್ದರೂ ಇಲ್ಲಿಯ ಜನರಿಗೆ, ಸರಕಾರಕ್ಕೆ ಕಾಣದ ಶತ್ರುವಿನ ಭೀತಿ! ಈ ಯುದ್ಧ ಭಯದ ಭ್ರಮೆಯಿಂದ ಪಾರಾಗಲು ಇಂತಹ ನೆಲಮಾಳಿಗೆಗಳು.

ಈ ಪಾದಯಾತ್ರಿಗಳಿಗೆ ಹಳ್ಳಿಯಲ್ಲಿ ವಾಸಿಸಲೂ ಸ್ಥಳ ಸಿಗದಿರುವದು ನನಗೆ ಹೊಸ ಸಂಗತಿಯಾಗಿತ್ತು. ಹಿಮಾಲಯದ ತಪ್ಪಲಿನಲ್ಲಿ, ಮಲೆನಾಡಿನ ಗುಡ್ಡಗಾಡಿನಲ್ಲಿ ಪರಿಚಯವಿಲ್ಲದ, ಹೊಸ ಸ್ಥಳಗಳಿಗೆ ಕಾಲ್ನಡಿಗೆಯಿಂದ ಹೋದಾಗ ಹಳ್ಳಿಯವರು ತೋರಿಸುವ ಸ್ನೇಹ, ಆದರ ಮತ್ತು ಪ್ರೀತಿಯ ನೆನಪಾಯಿತು. ನಾವು ಹಿಂದುಳಿದ ಸ್ಥಳಗಳೆಂದು ಕರೆಯುವ ಈ ದುರ್ಗಮ ಕ್ಷೇತ್ರದಲ್ಲಿರುವ ಹಳ್ಳಿಯ ಜನರು ಮಾನವೀಯತೆಯನ್ನು ಜೀವಂತವಾಗಿಟ್ಟಿದ್ದರು. ಮುಂದುವರಿದ, ವಿಕಾಸದಲ್ಲಿ ಮೊದಲನೇ ಸ್ಥಾನ ಗಳಿಸಿದ ಸ್ವಿಟ್ಸರಲಂಡಿನಲ್ಲಿ ಮಾನವೀಯತೆ ನಶಿಸುವ ಹಂತದಲ್ಲಿರುವಂತೆ ತೋರಿತು.

## ಪಾದಯಾತ್ರೆ

ಮರುದಿನ ಮುಂಜಾನೆ ಬೇಗನೆ ತಿಂಡಿ ತಿಂದು ಹೊರಡಲು ಅಣಿಯಾದೆವು. ಆ ಸಮಯಕ್ಕೆ ಸರಿಯಾಗಿ ಈ ಹಿಂದೆ ಟೆಲಿಫೋನ್‌ನಲ್ಲಿ ನನ್ನೊಡನೆ ಮಾತನಾಡಿದ ಗೇರಿ ಫಿಸ್ಚರ್ ನಮ್ಮ ಜತೆಗೂಡಿದ. ಹಳೆಯ ಗೆಳೆಯನನ್ನು ಮರಳಿ ಕಂಡ ಅನುಭವ. ನಮ್ಮ ಬೆನ್ನು ಚೀಲಗಳನ್ನು ಸಿಗಿಸಿಕೊಂಡು ಫ್ಲುಯಲಿನ್‌ಗೆ ವಿದಾಯ ಹೇಳಿ ಡಾಂಬರು ರಸ್ತೆಯನ್ನು ತೊರೆದು ಗುಡ್ಡಗಾಡಿನ ಕಾಲು ರಸ್ತೆಯನ್ನು ಹಿಡಿದು ಮುಂದೆ ಸಾಗಿದೆವು.

ಗೇರಿ ಮತ್ತಿತರ ಗೆಳೆಯರ ಜೊತೆ ಮಾತನಾಡಲು, ಚರ್ಚೆ ಮಾಡಲು ವಿಪುಲ ಅವಕಾಶವಿತ್ತು. ನಾವು ನಿಧಾನವಾಗಿ ಗುಡ್ಡದ ಹತ್ತಿರದ ಕಾಲು ಹಾದಿಯಲ್ಲಿ ಸಾಗುತ್ತಿದ್ದಾಗ– ಗುಡ್ಡದ ತಪ್ಪಲಿನಲ್ಲಿ ದೊಡ್ಡ ಸಿಮೆಂಟಿನ ಗೋಡೆಯನ್ನು ಕಂಡೆ. ಗೇರಿ ನನ್ನ ಹತ್ತಿರ "ಈ ಗೋಡೆಗಳು ಏನೆಂದು ಗೊತ್ತಿದೆಯಾ?" ಎಂದು ಪ್ರಶ್ನಿಸಿದ. ಬಹುಶಃ ಹಳ್ಳಿಯ ನೀರು ಸರಬರಾಜಿನ ಟ್ಯಾಂಕ್ ಇರಬಹುದೆಂದು ಉತ್ತರಿಸಿದೆ. ಅದಕ್ಕೆ ಅವನು ಉತ್ತರಿಸುತ್ತಾ "ಅದು ನೀರಿನ ಟ್ಯಾಂಕ್ ಅಲ್ಲ, ಶತ್ರುಗಳ ಟ್ಯಾಂಕ್. ವಾಹನಗಳು ದಾಳಿ ಮಾಡಿದರೆ ಅವು ಮುನ್ನುಗ್ಗದಂತೆ ತಡೆಯಲು ನಿರ್ಮಿಸಿದ ಕಾಂಕ್ರೀಟ ಗೋಡೆಗಳು." ಅದನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಮುಂದುವರಿದ ಯುದ್ಧ ತಂತ್ರಗಳ ವಾಸ್ತವಿಕತೆಯಲ್ಲಿ ಈ ತಡೆಗಳು ಬಹಳ ಅಸಂಗತವೆನಿಸುತ್ತಿದ್ದವು. ಇದು ಹಾಸ್ಯಾಸ್ಪದ ಎಂಬು

ದನ್ನು ಅಲ್ಲಿದ್ದ ಗೆಳೆಯರು ಒಪ್ಪಿಕೊಂಡರು. ಈ ಹಿಂದೆ ಈ ದೇಶದ ಗುಡ್ಡಗಾಡಿನಲ್ಲಿ ಇಂತಹ ಗೋಡೆಯ ನಿರ್ಮಾಣವನ್ನು ನೋಡಿದ್ದೆ. ಆದರೆ ಇಂದು ಅದರ ಉದ್ದೇಶ ತಿಳಿದು ಬಂತು.

ನಮ್ಮ ಟೋಳಿಯಲ್ಲಿದ್ದ ಮಾರ್ಕ ಎಂಬ ಫ್ರೆಂಚ ಯುವಕ ಭಾರತದ ಹಳ್ಳಿಯ ಜೀವನದ ಬಗ್ಗೆ ಬಹಳ ಆಸಕ್ತಿಯಿಂದ ವಿಚಾರಿಸಿದ. ನಾನೂ ಫ್ರಾನ್ಸಿನ ಜನ ಜೀವನದ ಬಗ್ಗೆ ಅರಿಯುವ ಪ್ರಯತ್ನ ಮಾಡಿದೆ. ಮಾರ್ಕ ಅರಣ್ಯದಲ್ಲಿ ಸಾಗುತ್ತಿರುವಾಗ ರಸ್ತೆಯ ಪಕ್ಕದಲ್ಲಿ ನುಗ್ಗಿ ಹಲವಾರು ವಿಧದ ಎಲೆಗಳನ್ನು ಕೊಯ್ದು ತನ್ನ ಚೀಲದೊಳಗೆ ತುಂಬಿಕೊಳ್ಳುತ್ತಿದ್ದ. ಅವನೊಬ್ಬ ಗಿಡಮೂಲಿಕೆಯ ತಜ್ಞನಾಗಿದ್ದ. ಪಾದಯಾತ್ರಿಗಳಿಗೆ ಅಪಶ್ಯವಿರುವ ಹಸಿರು ಎಲೆಯ ತರಕಾರಿಯನ್ನು ಕಾಡಿನಿಂದ ಸಂಪಾದಿಸುತ್ತಿದ್ದ.

ಮಧ್ಯಾಹ್ನದ ಹೊತ್ತಿಗೆ ಕಾಡಿನ ಮಧ್ಯೆ ಹರಿಯುವ ನೀರಿನ ತೊರೆಯ ಹತ್ತಿರ ವಿಶ್ರಮಿಸಲು ನಿಶ್ಚಯಿಸಿದೆವು. ಅದೇ ಸ್ಥಳದಲ್ಲಿ ಮೊದಲೇ ನಿರ್ಧರಿಸಿದ ಹಾಗೆ ಆ ಕ್ಷೇತ್ರದ ಅರಣ್ಯ ಅಧಿಕಾರಿಯೂ ಬಂದು ಸೇರಿಕೊಂಡ. ಮಾರ್ಕ ಸಿದ್ಧಪಡಿಸಿದ, ಕಾಡಿನಿಂದ ತಂದ ಹಸಿರು ಎಲೆಗಳ ಪಚಡಿ, ಬ್ರೆಡ್, ಹಸಿ ಟೋಮೆಟೋ, ಚೀಸ್, ಕುಡಿಯಲು ಶುದ್ಧವಾದ ತೊರೆಯ ನೀರು, ಇದು ಮಧ್ಯಾಹ್ನದ ಊಟ.

ಊಟದ ನಂತರ ಅರಣ್ಯ ಅಧಿಕಾರಿ—ಲಾಯನ್‌ಬರ್ಜರ ನಮ್ಮನ್ನೆಲ್ಲ ಕರೆದುಕೊಂಡು ಎರಡು ಗಂಟೆ ಕಾಡಿನ ಹಲವಾರು ಕ್ಷೇತ್ರಗಳಲ್ಲಿ ಸುತ್ತಾಡಿ ತನ್ನ ಅನಿಸಿಕೆಗಳನ್ನು ವಿವರಿಸತೊಡಗಿದ.

## ಅರಣ್ಯ ಅಧಿಕಾರಿಯ ವ್ಯಥೆ

ಮೂವತ್ತೈದರ ಹರೆಯದ, ಗಿಡ್ಡನೆಯ ವ್ಯಕ್ತಿತ್ವದ ಅರಣ್ಯ ಅಧಿಕಾರಿ ಗಂಭೀರವಾದ ಧ್ವನಿಯಲ್ಲಿ, ದೂರದಲ್ಲಿ ಎಲೆಯನ್ನು ಉದುರಿಸಿ ನಿಂತ ಪೈನ್ ವೃಕ್ಷಗಳನ್ನು ತೋರಿಸುತ್ತಾ "ಈಗ ಇಪ್ಪತ್ತು ವರ್ಷಗಳ ಹಿಂದೆ ಈ ಶಂಕುಧಾರಿ (ಸೂಜಿಯ ಹಾಗಿರುವ ಎಲೆಗಳು) ವೃಕ್ಷಗಳು ರೋಗಪೀಡಿತವಾಗಿದೆ ಎಂಬುದನು ಕಂಡುಹಿಡಿಯಲಾಯಿತು. ಆಮ್ಲ ಮಳೆಯಿಂದಾಗಿ ಇಂದು ಗಂಭೀರವಾದ ಸ್ಥಿತಿಗೆ ತಲುಪಿವೆ. ಅಲ್ಲಿ ನೋಡಿ ಸಣ್ಣ ಪೈನ್ ಗಿಡ ಹೇಗೆ ಹಳದಿ ಬಣ್ಣದ ಎಲೆಗಳನ್ನು ಹೊಂದಿದೆ. ಈ ಎಲೆಗಳು ಹಚ್ಚ ಹಸಿರಾಗಿರಬೇಕಾಗಿತ್ತು." ನಾವೆಲ್ಲ ಅವನು ಹೇಳಿದತ್ತ ಗಮನಿಸಿದಾಗ ಹಸಿರನ್ನು ಕಳೆದುಕೊಂಡ ಸತ್ವಹೀನ ಗಿಡಗಳನ್ನು ನೋಡಿದೆವು.

ಅಗಲವಾದ ಎಲೆಯುಳ್ಳ 'ಅಹಾರನ್' ಜಾತಿಯ ಗಿಡಗಳನ್ನು ತೋರಿಸುತ್ತಾ "ನೋಡಿ ಈ ಜಾತಿಯ ಗಿಡಗಳು ನಾಲ್ಕು ವರ್ಷಗಳಿಂದೀಚೆ ರೋಗಪೀಡಿತವಾಗತೊಡಗಿವೆ. ಇವುಗಳು ರೋಗದಿಂದ ತಪ್ಪಿಸಿಕೊಳ್ಳುತ್ತವೆ ಎಂದು ತಿಳಿದಿದ್ದ ನಮಗೆ ಆಶ್ಚರ್ಯವನ್ನುಂಟುಮಾಡಿವೆ. ಅಗಲವಾಗಿರಬೇಕಾಗಿದ್ದ ಗಿಡದ ಎಲೆಗಳು ಸಣ್ಣದಾಗುತ್ತಾ ಸಾಯತೊಡಗಿವೆ. ಇಪ್ಪತ್ತು—ಮೂವತ್ತು ವರ್ಷ ಬೆಳೆದ ನಂತರ ಇವು ಬೀಜ ಬಿಡಲಾರಂಭಿಸಿ ತಮ್ಮ ಆಯುಷ್ಯದ ಅಂತ್ಯದ ಸೂಚನೆಯನ್ನು ಕೊಡುತ್ತಿದ್ದವು. ಆದರೆ ಇತ್ತೀಚೆಗೆ ೫—೬ ವರ್ಷದ ಗಿಡಗಳು ಬೀಜ ಬಿಡಲು ಆರಂಭಿಸಿವೆ. ನಮ್ಮ ಸಸ್ಯವಿಜ್ಞಾನಿಗಳು ಈ ಬದಲಾವಣೆಯ ಕಾರಣವನ್ನು ಪತ್ತೆ ಹಚ್ಚಿಲ್ಲ" ಎನ್ನುತ್ತಾ ಅಹಾರನ್ ಗಿಡದ ಸಣ್ಣ ರೆಂಬೆಯೊಂದನ್ನು ಬಗ್ಗಿಸಿ ಬೀಜಗಳನ್ನು ತೋರಿಸಿದ.

ಆಮ್ಲ ಮಳೆ ಬಗ್ಗೆ ವಿವರಿಸುತ್ತಾ "ಈ ವರ್ಷ ಮಳೆ ಹೆಚ್ಚಾಗಿದ್ದು, ಆಮ್ಲ ಮಳೆಯ ಪರಿಣಾಮವೂ ಹೆಚ್ಚಾಗಿದೆ. ಉದ್ದಿಮೆಗಳೂ, ವಾಹನಗಳೂ ಹೊರಬಿಡುವ ಹೊಗೆಯು (ಸಲ್ಫರ್ ಮೊನಾಕ್ಸಾಯಿಡ್) ಗಾಳಿಯಲ್ಲಿರುತ್ತದೆ. ಮಳೆ ಹನಿ ಈ ಗಾಳಿಯ ಜೊತೆಗೆ ಒಂದಾಗಿ ಆಮ್ಲ ಮಳೆಯಾಗಿ ಪರಿವರ್ತನೆ ಹೊಂದುತ್ತದೆ. ಹತ್ತಿರವಿರುವ ಕಸ

ಶುದ್ಧೀಕರಿಸುವ ಘಟಕದಿಂದಾಗಿ ಈ ಅರಣ್ಯ ಕ್ಷೇತ್ರದಲ್ಲಿ ಆಮ್ಲ ಮಳೆಯ ಪರಿಣಾಮ ಅಧಿಕ ವಾಗಿದೆ."

ಅರಣ್ಯದಲ್ಲಿ ಹಲವಾರು ಕಡೆ ಪ್ಲಾಸ್ಟಿಕ್‌ನ ಒಂದು ಚೌಕ ಆಕಾರದ ಪೆಟ್ಟಿಗೆಯನ್ನು ತೂಗು ಹಾಕಿದ್ದರು. ಒಂದು ಪೆಟ್ಟಿಗೆಯ ಹತ್ತಿರ ನಮ್ಮನ್ನು ಕರೆದೊಯ್ದು ಆ ಪೆಟ್ಟಿಗೆಯನ್ನು ಬಿಚ್ಚಿ ಒಳಗಡೆ ಇಟ್ಟಿರುವ ದ್ರವವನ್ನೂ, ಸತ್ತಿದ್ದ ಸಣ್ಣ ಕೀಟಗಳನ್ನೂ ತೋರಿಸಿದ. ಅರಣ್ಯ ದಲ್ಲಿ ಆರೋಗ್ಯದಿಂದಿರುವ ಗಿಡಗಳಿಗೆ ವಿಚಿತ್ರ ವಾದ ಕೀಟಬಾಧೆ ಹಿಡಿದು ಅವು ಸಾಯತೊಡ ಗುತ್ತವೆ. ಈ ಕೀಟಗಳನ್ನು ಹಿಡಿಯುವ ಸಲು ವಾಗಿ ಪ್ಲಾಸ್ಟಿಕ್ ಪೆಟ್ಟಿಗೆಯನ್ನು ತೂಗು ಹಾಕಿ ಅದರೊಳಗೆ ದ್ರವವನ್ನು ಇಟ್ಟಿರುತ್ತಾರೆ. ಯುರೋಪಿನ ಅರಣ್ಯದಲ್ಲಿ ಇದು ಸಾಮಾನ್ಯ ದೃಶ್ಯ. ಇದರ ಬಗ್ಗೆ ಟಿಪ್ಪಣಿ ಮಾಡುತ್ತಾ "ಇದರಿಂದ ಏನಾದರೂ ಉಪಯೋಗವಾಗುವ ದೆಂದು ನನಗೆ ಅನಿಸುವದಿಲ್ಲ. ಹದಗೆಡುತ್ತಿರುವ ಅರಣ್ಯದ ಬಗ್ಗೆ ಏನಾದರೂ ಮಾಡಬೇಕೆಂದು ಹೀಗೆ ಮಾಡುತ್ತಿದ್ದೇವೆ. ಕೇವಲ ಮನಸ್ಸಿನ ನೆಮ್ಮದಿಗಾಗಿ ಇವೆ, ಈ ಪೆಟ್ಟಿಗೆಗಳು."

ಚಳಿಗಾಲದಲ್ಲಿ ಹಿಮದ ಜೊತೆ ಗಾಳಿ ಬೀಸು ವಾಗ ಹಲವಾರು ಗಿಡ ಮರಗಳು ಬೀಳುತ್ತವೆ. ಹೀಗೆ ಬಿದ್ದ ಮರವೊಂದರ ಹತ್ತಿರ ನಮ್ಮನ್ನು ಕರೆದೊಯ್ದು ಆ ಗಿಡದ ಬೇರನ್ನು ತೋರಿಸಿದ. ಭೂಮಿಯಲ್ಲಿರುವ ಮಣ್ಣಿನಲ್ಲೂ ಆಮ್ಲ ಮಳೆಯಿಂದಾಗಿ ಫಲವತ್ತತೆ ಮಾಯವಾಗಿ ಗಿಡದ ಬೇರುಗಳ ಮೇಲೆ ಪರಿಣಾಮ ಬೀರಿತ್ತು. ಮಣ್ಣಿನಲ್ಲಿರುವ ಸೂಕ್ಷ್ಮ ಜೀವಾಣುಗಳು ನಾಶ ವಾಗಿದ್ದವು. ಬೇರುಗಳಿಗೆ ಅವಶ್ಯಕವಿರುವ ಧಾತುಗಳು ಸಿಗದೆ ಅವು ಸಾಯುತ್ತಿದ್ದು, ಗಾಳಿ ಬಂದಾಗ ನಿಲ್ಲಲಾಗದೆ ಬುಡಸಹಿತ ಕಿತ್ತು ಬೀಳು-ತ್ತಿದ್ದವು. ಬೇರುಗಳು ಶಕ್ತಿಯನ್ನೇ ಕಳೆದು ಕೊಂಡು ಸತ್ವಹೀನವಾಗಿದ್ದವು.

ಸಾಫನ್‌ವೀಲ್ ಅರಣ್ಯದ ಈ ಅಧಿಕಾರಿ ತನ್ನ ಅಧಿಕಾರದ ಅವಧಿಯಲ್ಲಿ ಹದಗೆಡುತ್ತಿರುವ ಅರ ಣ್ಯದ ಬಗ್ಗೆ ಚಿಂತಾಕ್ರಾಂತನಾಗಿ ತನ್ನ ಮೇಲಾಧಿ ಕಾರಿಗಳಿಗೆ ವಿವರವಾದ ವರದಿ ಕಳುಹಿಸಿದ್ದ. ಅವರು ಇನ್ನಷ್ಟು ರಾಸಾಯನಿಕ ಗೊಬ್ಬರ ನೀಡುವ ಸಲಹೆ ಮಾಡಿದರು! ಆಗ ಅವನು ಸ್ಥಳೀಯರನ್ನು ಅರಣ್ಯದೊಳಗೆ ಕರೆತಂದು ಗಂಭೀರ ಸ್ಥಿತಿಯ ಪರಿಚಯ ಮಾಡಿಸಿದ್ದ.

ಅರಣ್ಯ ಅಧಿಕಾರಿ ಬಹಳ ಖಿನ್ನ ಮನಸ್ಸಿನಿಂದ "ನಮ್ಮ ಈ ಅರಣ್ಯವನ್ನು ನೀವೇ ನೋಡಿದ್ದೀರಿ. ಮುಕ್ಕಾಲುಪಾಲು ಗಿಡಗಳು ರೋಗಪೀಡಿತ-ವಾಗಿವೆ. ಮುಂಬರುವ ವರ್ಷಗಳಲ್ಲಿ ಮಾಲಿನ್ಯ ವನ್ನು ಸಂಪೂರ್ಣವಾಗಿ ತಡೆದರೆ ಮಾತ್ರ ನಮ್ಮ ಹಸಿರನ್ನು ಉಳಿಸಲು ಸಾಧ್ಯ. ಇಲ್ಲವಾದರೆ ಇನ್ನು ಐದು ಹತ್ತು ವರ್ಷಗಳಲ್ಲಿ ಗಿಡಗಳು ಸತ್ತು ಬರಡಾಗುತ್ತವೆ, ಎಂದರು'.

ಆ ದಿನ ಮಧ್ಯಾಹ್ನ ನಮಗೆಲ್ಲರಿಗೂ ಈ ಯುವ ಅರಣ್ಯ ಅಧಿಕಾರಿ ತನ್ನ ಮನಸ್ಸಿನ ಆಳದಲ್ಲಿದ್ದ ದುಃಖವನ್ನು ಪ್ರತ್ಯಕ್ಷವಾಗಿ ತೋರಿಸಿ ಅರಣ್ಯಕ್ಕಾದ ಹಾನಿಯನ್ನು ವಿವರಿಸಿದ.

ಶಿಲ್‌ಟ್ರಾನ್ ತಲಪಿದಾಗ ಸಂಜೆಯಾಗಿತ್ತು. ಸ್ನೇಹಿತರು ಆಗಲೆ ಹಲವಾರು ಜನರನ್ನು ಒಟ್ಟು ಹಾಕಿ ಚರ್ಚಿಸಲು ಆರಂಭಿಸಿದ್ದರು. ದೊಡ್ಡ ದೊಂದು ಪುಸ್ತಕದಲ್ಲಿ ಜನರು ತಮ್ಮ ಅಭಿಪ್ರಾಯ ಗಳನ್ನು, ಸಲಹೆಯನ್ನು ಬರೆಯುತ್ತಿದ್ದರು. ಪಾದಯಾತ್ರೆಯ ಕೊನೆಯ ಹಂತದಲ್ಲಿ ದೇಶದ ರಾಜಧಾನಿಯಾದ ಬರ್ನ್‌ದಲ್ಲಿ ಈ ಪುಸ್ತಕವನ್ನು ಸಂಸತ್ತಿಗೆ ಮನವಿ ರೂಪದಲ್ಲಿ ಕೊಡುವ ಯೋಜನೆ ಹಾಕಿಕೊಂಡಿದ್ದರು. ನಾನೂ ಈ ಪುಸ್ತಕದಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದೆ. ಜೀವನಕ್ಕೆ ಆಧಾರ ವಾಗಿರುವ ಶುದ್ಧ ಗಾಳಿ, ನೀರು ಮತ್ತು ಮಣ್ಣನ್ನು ಕೊಡುವ ಅರಣ್ಯವನ್ನು ಕಾಪಾಡು ವಂತೆ ಕನ್ನಡ, ಹಿಂದಿ ಮತ್ತು ಇಂಗ್ಲೀಷ್‌ನಲ್ಲಿ ಬರೆದೆ.

ಅಂದೇ ಸಂಜೆ ನಾವು ಹಿಂದಿರುಗಬೇಕಾಗಿತ್ತು. ಬಸ್ ನಿಲ್ದಾಣದವರೆಗೆ ಬಂದು ಸ್ನೇಹಿತರು

ವಿದಾಯ ಹೇಳಿದರು. ಆಗ ಬೀದಿ ನಾಟಕದ ತಂಡದವರು ತಮ್ಮ ವಾದ್ಯಗಳೊಂದಿಗೆ ಬಂದು ನೃತ್ಯ ಗಾಯನದ ಮಾಧುರ್ಯದ ಜೊತೆ ನಮ್ಮನ್ನು ಬೀಳ್ಕೊಟಾಗ ಕಣ್ಣಲ್ಲಿ ನೀರೂರಿತು. ಕೆಲವೇ ಗಂಟೆಗಳಲ್ಲಿ ನಾವು ಹತ್ತಿರದ ಗೆಳೆಯರಾಗಿದ್ದೆವು.

## ಕಾರಿಗೆ ಬದಲಾಗಿ ಕುದುರೆ ಬಂಡಿ!

ನಾನು ಭಾಗವಹಿಸಿದ ಮತ್ತೊಂದು ಪಾದಯಾತ್ರೆ ಗುಂಪಿನವರು ಆರಾಗೋ ರಾಜ್ಯದಿಂದ ಹೊರಟಿದ್ದರು. ಇವರದು ಎಂಟು ಜನರ ಸಣ್ಣ ಗುಂಪು. ಸೂಸಿ ಎಂಬ ಯುವತಿ ಗುಂಪಿನ ನಾಯಕಿ. ಕಾರು ಬಳಕೆಯಿಂದ ವಾಯುಮಾಲಿನ್ಯ ಹೆಚ್ಚಾಗುವದನ್ನು ಪ್ರತಿಭಟಿಸಲು ಇವರು ಒಂದು ಕುದುರೆಯ ಬಂಡಿಯನ್ನು ತೆಗೆದುಕೊಂಡು ಹೊರಟಿದ್ದರು. ಬಂಡಿಯೊಳಗೆ ತಮ್ಮ ಸಾಮಾನುಗಳನ್ನು ಹಾಕಿ ತಮ್ಮ ಬೆನ್ನಿನ ಭಾರವನ್ನು ಕಡಿಮೆ ಮಾಡಿಕೊಂಡಿದ್ದರು. ಕುದುರೆ ಬಂಡಿಯ ಎರಡೂ ಪಕ್ಕದಲ್ಲಿ ಬಟ್ಟೆಯ ಮೇಲೆ ಆಮ್ಲ ಮಳೆಯಿಂದ ನಾಶವಾಗುತ್ತಿರುವ ಅರಣ್ಯದ ದೊಡ್ಡ ಚಿತ್ರ. ಒಂಟಿ ಕುದುರೆಯ ಈ ಬಂಡಿ, ದೊಡ್ಡದಾಗಿ ಬಿಡಿಸಿದ ಚಿತ್ರ, ಜೊತೆಗೆ ಸಣ್ಣ ಪಾದಯಾತ್ರಿಗಳ ಗುಂಪು ಕಾರಿನಲ್ಲಿ ರಭಸವಾಗಿ ಸಾಗುತ್ತಿದ್ದ ಜನರನ್ನೂ ಆಕರ್ಷಿಸಿ, ಅವರ ವೇಗ ತಗ್ಗಿಸಿ ಇದೇನು ಎಂದು ನೋಡಿ ಹೋಗುತ್ತಿದ್ದರು. ಕೆಲವು ಹಳ್ಳಿಗಳಲ್ಲಿ ರೈತರು ಕುದುರೆಯ ಸಲುವಾಗಿ ಜೋಳದ ದಂಟನ್ನು ತೆಗೆದುಕೊಂಡು ಬರುತ್ತಿದ್ದರು. ಕುದುರೆಯ ಹೆಸರು ಫ್ಲಿಕಾ. ಇದೂ ಸಹ ಪಾದಯಾತ್ರೆಗಳ ಪ್ರೀತಿಯ ಜೊತೆಗಾತಿಯಾಗಿತ್ತು. ಅಪರೂಪವಾಗುತ್ತಿರುವ ಕುದುರೆ ಬಂಡಿಯು ಮತ್ತೆ ಕಾಣಿಸಿದಾಗ ಜನರು ಕುತೂಹಲದಿಂದ ಮನೆಯ ಹೊರಗೆ ಬಂದು ನೋಡುತ್ತಿದ್ದರು.

ಕುದುರೆಯಿಂದಾಗಿ ಗುಂಪಿನ ಸದಸ್ಯರಿಗೆ ಹಳ್ಳಿಗಳಲ್ಲಿ ವಸತಿ ಸಮಸ್ಯೆಯ ಪರಿಹಾರ ಸುಲಭವಾಗಿತ್ತು. ಕುದುರೆ ಇದೆ ಎಂದರೆ ಹಳ್ಳಿಯ ರೈತರು ಅದಕ್ಕೆ ಸಹಾಯ ಮಾಡಲು ಮುಂದೆ ಬರುತ್ತಿದ್ದರು. ಹುಲ್ಲು ದಾಣಿ ಒದಗಿಸುತ್ತಿದ್ದರು, ಅದರ ವಾಸಕ್ಕಾಗಿ ಕೊಟ್ಟಿಗೆಯನ್ನು ಬಿಟ್ಟುಕೊಡುತ್ತಿದ್ದರು. ಸದಸ್ಯರಿಗೂ ಹುಲ್ಲು ಶೇಖರಿಸುವ ಕೋಣೆಯಲ್ಲಿ ಮಲಗುವ ವ್ಯವಸ್ಥೆ ಮಾಡಲಾಗುತ್ತಿತ್ತು. ಫ್ಲಿಕಾ ಹಳ್ಳಿಯ ಜನರ






ಜೊತೆ ಸಂಪರ್ಕಮಾಧ್ಯಮವಾಗಿ ಕೆಲಸ ಮಾಡುತ್ತಿತ್ತು. ಈ ಗುಂಪಿನವರು ಎಂದೂ ನೆಲಮಾಳಿಗೆಯಲ್ಲಿ ಮಲಗುವ ಪ್ರಮೇಯ ಒದಗಿ ಬಂದಿರಲಿಲ್ಲ!

## ಒಣಗಿದ ಹಣ್ಣಿನ ಗಿಡಗಳು

ದಾರಿಯ ಪಕ್ಕದಲ್ಲಿರುವ ಹಣ್ಣಿನ ತೋಟದಲ್ಲಿ ಹಲವಾರು ಗಿಡಗಳು ಒಣಗಿ ನಿಂತಿರುವದನ್ನು ತೋರಿಸುತ್ತಾ ಸೂಸಿ "ನೋಡಿ ಆಮ್ಲ ಮಳೆಯ ಪರಿಣಾಮವನ್ನು. ಇಲ್ಲಿಯವರೆಗೆ ಅಡವಿಗೆ ಮಾತ್ರ ಸೀಮಿತವಾಗಿದ್ದ ಈ ಸಮಸ್ಯೆ ನಿಧಾನವಾಗಿ ಹಣ್ಣಿನ ತೋಟಗಳಿಗೆ, ಕೃಷಿ ಭೂಮಿಗೆ ಆವರಿಸುತ್ತಿದೆ" ಎಂದಳು. ಹಲವಾರು ಸೇಬಿನ ಗಿಡಗಳು, ಚೇರಿ ಹಣ್ಣಿನ ಗಿಡ ಒಣಗಿ ನಿಂತಿದ್ದರೆ, ಇನ್ನೂ ಕೆಲವು ಮರಗಳು ರೋಗಪೀಡಿತವಾಗಿದ್ದವು.

ಹಾರ್ನಸನ್ ಎಂಬ ಹಳ್ಳಿಗೆ ಬಂದಾಗ ದೊಡ್ಡ ಆಳವಾದ ಭಾವಿಯೊಂದನ್ನು ನಿರ್ಮಿಸುತ್ತಿರುವದನ್ನು ತೋರಿಸಿದರು. ಇದನ್ನು ಅರ್ಧ ಕಟ್ಟಿ ನಿಲ್ಲಿಸಲಾಗಿತ್ತು. ಸ್ವಿಟ್ಸರಲೆಂಡ್‌ನ ಅಣುಶಕ್ತಿ ಘಟಕದಿಂದ ಹೊರ ಬರುವ ಬೂದಿಯನ್ನು ಇಲ್ಲಿ ಹೂಳುವ ಯೋಜನೆ ಮಾಡಲಾಗಿತ್ತು. ಆದರೆ ಜನರ ಪ್ರತಿಭಟನೆಯಿಂದಾಗಿ ಇದನ್ನು ಸ್ಥಗಿತಗೊಳಿಸಲಾಗಿತ್ತು. ಈ ಅಣು ಬೂದಿಯನ್ನು ಚೀನಾಕ್ಕೆ ಕಳುಹಿಸಲಾಗುತ್ತಿದೆ ಎಂದು ತಿಳಿದು ಬಂತು.

ಅರಣ್ಯವನ್ನು ಕಬಳಿಸುತ್ತಿರುವ ಇನ್ನೊಂದು ರಾಕ್ಷಸ– ಇಲ್ಲಿಯ ಫ್ರೀ ವೇ (Free way). ನಮ್ಮಲ್ಲಿಯ ಹೆದ್ದಾರಿಯ ನಾಲ್ಕು ಪಟ್ಟು ದೊಡ್ಡದಾಗಿರುವ ಫ್ರೀ ವೇಗಳು ವಾಹನ ಸಂಚಾರ ಸುಗಮ ಗೊಳಿಸುತ್ತವೆ. ಈ ರಸ್ತೆಗಳಲ್ಲಿ ನೂರು ಕಿಲೋಮೀಟರ್‌ರಿಗಿಂತ ಕಡಿಮೆ ವೇಗದಲ್ಲಿ ನಡೆಸುವುದಿಲ್ಲ! ಸಾಗಿಮುಲತಾಲಿ ಎಂಬ ಸುಂದರ ಕಣಿವೆ ಪ್ರದೇಶದಲ್ಲಿ ಮುಂಬರುವ ದಿನಗಳಲ್ಲಿ ನಿರ್ಮಿಸಲಾಗುವ ಫ್ರೀ ವೇ ವಿರುದ್ಧ ಹಳ್ಳಿಗರು ಧ್ವನಿ ಎತ್ತಿದ್ದಾರೆ.

ಪಾದಯಾತ್ರೆಯ ಕೊನೆ ಅನ್ನರ ಲಿಂಡೆ ಎಂಬ ಹಳ್ಳಿಯಲ್ಲಿ. ಅನ್ನರ ಎಂಬ ಮೂರುನೂರು ವರ್ಷದ ಹಳೆಯ ಮರ ಅಲ್ಲಿ ಇದ್ದುದರಿಂದ ಆ ಹಳ್ಳಿಗೆ ಅನ್ನರಲಿಂಡೆ ಎಂಬ ಹೆಸರು ಬಂದಿತ್ತು. ನಾವು ಅಲ್ಲಿ ತಲುಪಿದಾಗ ಬಹಳ ಮಳೆ. ಮಳೆಯಿಂದ ರಕ್ಷಣೆ ಪಡೆಯಲು ವಿಶಾಲವಾಗಿದ್ದ ಅನ್ನರ ಮರದ ಕೆಳಗಡೆ ಹೋಗಿ ಕುಳಿತುಕೊಂಡೆವು. ಆಗ ಏನ್ನಾ ಎಂಬ ಯುವತಿ ನನ್ನ ಹತ್ತಿರ "ಭಾರತದಲ್ಲಿ ಜನರು ಸ್ವಿಟ್ಸರಲಂಡ ಬಗ್ಗೆ ಯಾವ ವಿಚಾರವನ್ನು ಇಟ್ಟುಕೊಂಡಿದ್ದಾರೆ?" ಎಂದು ಕೇಳಿದಳು. ನಾನು ಉತ್ತರಿಸುತ್ತಾ "ನಿಮ್ಮ ದೇಶವೆಂದರೆ ಸುಖ ಸಮೃದ್ಧಿಯ ನಾಡು. ವಿಕಾಸ ಹೊಂದಿ ಸ್ವರ್ಗಸುಖವನ್ನು ಅನುಭವಿಸುವ ಜನರು" ಎಂದು ಹೇಳಿದಾಗ ಅವಳು "ಹೌದು ಇದು ನಮ್ಮ ಸ್ವರ್ಗ. ಆದರೆ ಈ ಸ್ವರ್ಗದಲ್ಲಿ ಉಸಿರಾಡಲು ಶುದ್ಧವಾದ ಗಾಳಿಯಿಲ್ಲ, ಸ್ವಚ್ಛವಾದ ನೀರಿಲ್ಲ. ಈ ಸುಖದಲ್ಲಿ ಮುಳುಗಿದ ಜನರಿಗೆ ಆತ್ಮೀಯವಾಗಿ ಮಾತನಾಡಲೂ ಸಮಯವಿಲ್ಲ. ಈ ಸ್ವರ್ಗದ ಮತ್ತೊಂದು ಮುಖವನ್ನು ಭಾರತೀಯರಿಗೆ ತಿಳಿಸುವಿರಾ?" ಎಂದಳು.

ಪಾಶ್ಚಿಮಾತ್ಯ ವಿಕಾಸದ ಹಾದಿಯನ್ನು ಅಂಧಾನುಕರಣೆ ಮಾಡುವ ಭಾರತ ಇಂದು ಮುಂದುವರಿದ ದೇಶಗಳ ಸಮಸ್ಯೆಗಳನ್ನು ಅರಿತು ತನ್ನದೇ ಆದ ಹಾದಿಯನ್ನು ಕಂಡುಕೊಳ್ಳಬೇಕಾಗಿದೆ. ಭೂಪಾಲದಂತಹ ದುರಂತವನ್ನು ಕಂಡಿರುವ ನಾವು, ಏನ್ನಾಳ ಪ್ರಶ್ನೆಯನ್ನು ಅರಿತುಕೊಂಡು ವಿಕಲ್ಪದ ಹಾದಿಯನ್ನು ಹುಡುಕುವುದು ಉತ್ತಮವಲ್ಲವೆ? ✡



# ಡೇಸ್ ರಾಯ್ ಪ್ರಸ್ತುತ

‘ಡೇಸ್ ರಾಯ್ ಪ್ರಸ್ತುತ’ ಎಂಬುದು, ತಮ್ಮ ಓಣಿಯಲ್ಲಿಯೇ ಜಗತ್ಪ್ರಸಿದ್ಧರಾದ ಡೇಸ್ ರಾಯ್ ಎಂಬ ‘ಸರ್ವಜ್ಞ’ರು ಸ್ಥಾಪಿಸಿದ ಸಂಸ್ಥೆ. ಅಂತಾರಾಷ್ಟ್ರೀಯ ಮಟ್ಟವನ್ನು ಮಿಕ್ಕಿ ಅಂತರ್‘ತಾರಾ’ ವ್ಯಾಪ್ತಿಯನ್ನು ಹೊಂದಿದ ವ್ಯಕ್ತಿ ಡೇಸ್ ರಾಯ್. ‘ತಿಲಕಾಷ್ಠ ಮಹಿಷ ಬಂಧನ’ ಗಾಂಭೀರ್ಯದ, ‘ಪ್ರಸ್ತುತ’ದ ಕೆಲವು ಸಂಶೋಧನಾತ್ಮಕ/ರಹಸ್ಯಾತ್ಮಕ/ಸಮಸ್ಯಾತ್ಮಕ ಕೊಡುಗೆಗಳನ್ನು ಆಗೀಗ (ಆಯಕಟ್ಟಿನ) ಸ್ಥಳ ನೋಡಿ ಕೊಡಲಾಗುವುದು. ಡಾರ್ವಿನ್ನನ ಕಪಿಯಿಂದ ಕೇಶವಾಪುರದ ಕವಿಯವರೆಗೆ ಸಮಸ್ತ ವಿಷಯಗಳೂ ‘ಡೇಸ್ ರಾಯ್ ಪ್ರಸ್ತುತ’ದ ವ್ಯಾಪ್ತಿಯಲ್ಲಿ ಬರುತ್ತವೆ.

- ಸಂಪಾದಕ

---

೧

[ವಿಕಾಸ ವಿಶ್ವ]

### ಗಾಂಧೀಜಿಯ ಮಂಗಗಳು

ಸ್ವಾತಂತ್ರ್ಯ ಪೂರ್ವದ ಭಾರತ: ಗಾಂಧೀಜಿ ಇದ್ದರು. ಅವರ ಪ್ರೀತಿಯ ಮೂರೂ ಮಂಗಗಳಿದ್ದವು. "ಕೆಟ್ಟದ್ದನ್ನು ಕೇಳುವದಿಲ್ಲ, ಕಾಣುವದಿಲ್ಲ, ಆಡುವದಿಲ್ಲ" ಎಂಬ ತಮ್ಮ ಭಂಗಿಗಳಲ್ಲಿಯೇ ನಿರತವಾಗಿದ್ದವು. ಆದ್ದರಿಂದ ಮಂಗಗಳಾಗೇ ಉಳಿದಿದ್ದವು.

ಸ್ವಾತಂತ್ರ್ಯೋತ್ತರ ಭಾರತ: ಗಾಂಧೀಜಿ ಇರಲಿಲ್ಲ. ಆದರೆ ಅವರ ಮೂರೂ ಮಂಗಗಳಿದ್ದವು. ದೊಡ್ಡ ಮನುಷ್ಯರನ್ನು ರಕ್ಷಿಸುವಷ್ಟು ದೊಡ್ಡ ಮಂಗಗಳಾಗಿದ್ದವು. ಆದ್ದರಿಂದ ಭಂಗಿಗಳನ್ನು ಬದಲಿಸಿದವು. ಈಗ ಅವು, ಪ್ರತಿಯೊಂದೂ, ತನ್ನ ಎರಡೂ, ಕೈಕಾಲು ಮತ್ತು ಬಾಲಗಳಿಂದ ಉಳಿದ ಎರಡೂ ಮಂಗಗಳ ಕಿವಿ, ಕಣ್ಣು, ಬಾಯಿಯಾದಿ ಒಂಭತ್ತೂ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಹಿಡಿದು, "ನಾನು ಸತ್ತರೂ ಹರಕತ್ತಿಲ್ಲ, ನಿಮ್ಮಿಂದ ಏನನ್ನೂ ಕೇಳಗೊಡುವುದಿಲ್ಲ, ಕಾಣಗೊಡುವುದಿಲ್ಲ, ಆಡಗೊಡುವುದಿಲ್ಲ," ಎಂದು ಒಂದನ್ನೊಂದು ಹತ್ತಿಕ್ಕಿ ಹಿಡಿದ ಭಂಗಿಯಲ್ಲಿ ಭದ್ರವಾಗಿ ಕೂತುಬಿಟ್ಟಿದ್ದವು. ಅಲ್ಪಾವಧಿಯಲ್ಲೇ ಮೂರೂ ಮಂಗಗಳು ಪಕ್ವ ರಾಜಕಾರಣಿಗಳಾಗಿ ಅತ್ಯುನ್ನತ ಹುದ್ದೆಗಳನ್ನು ಅಲಂಕರಿಸಿದವು.

ಡಾರ್ವಿನ್ನನ ವಿಕಾಸವಾದ ಎಷ್ಟು ವಿಚಿತ್ರ ಸತ್ಯ!

೨

[ಲಾಂಗೂಲ ಚಾಲನ ರಂಗ]

ಕವಿ-ಕಾವ್ಯ-ದೃಷ್ಟಿ

ಲಾಂಗೂಲಾಚಾರ್ಯರು ಪ್ರೊಫೆಸರರಾಗಿದ ತರಗತಿಯಲ್ಲಿ ನಡೆದ ಸಂಗತಿ. ವಿಷಯ ಕಾವ್ಯ. ಆಗ ಒಂದು ಪ್ರಶ್ನೆ; "ಮಹಾಕವಿಗೂ ಸಾದಾ ಕವಿಗೂ ಅಂತರವೇನು?" ಆಚಾರ್ಯರು ಹೇಳಿದರು; "ಮಹಾತ್ಮನಿಗೂ ಹುತಾತ್ಮನಿಗೂ ಇರುವ ಅಂತರ." ವಿದ್ಯಾರ್ಥಿಗಳಿಗೆ ತಿಳಿಯಲಿಲ್ಲ. ಆಚಾರ್ಯರು ವಿವರಿಸಿದರು; "ಕಾವ್ಯದ ಮೂಲಕ ಕನಿಷ್ಠಪಕ್ಷ ದರ್ಶನವಾದರೂ ಸಿಕ್ಕವನು ಮಹಾತ್ಮನಾಗುತ್ತಾನೆ. ದರ್ಶನ ಹೋಗಲಿ, ಅಶನವೂ ಸಿಗಲಾರದವನು ಸ್ವಾಭಾವಿಕವಾಗಿಯೇ ಹುತಾತ್ಮನಾಗುತ್ತಾನೆ." ಕೊನೆಯ ಬೆಂಚಿನಲ್ಲಿ ಕೂತಿದ್ದ ಕುಲಕರ್ಣಿ ಎಂಕಣ್ಣ ಕೇಳಿದ; "ಹಾಗಾದರೆ ನವ್ಯ ಕವಿ ಎಂದರೆ ಯಾರು?" ಅದಕ್ಕೆ ಆಚಾರ್ಯರ ಉತ್ತರ: "ಮಹಾತ್ಮ ಹಾಗೂ ಹುತಾತ್ಮ ಇಬ್ಬರನ್ನೂ ಮಿಕ್ಕಿದ ಅನಾಹುತಾತ್ಮ ಈತ." ವಿವರಣೆ: "ದರ್ಶನವನ್ನು ಆಚೆಗೆ ದಬ್ಬಿ ಅಶನದ ನಂತರ (ಕಾಷ್ಠ)ವ್ಯಸನ ಹುಡುಕಿಕೊಂಡು ಅನಾಹುತ ತಂದುಕೊಳ್ಳುವ (ಮಣ್ಣಿನ) ವಾಸನಾ ಜೀವಿ."

೩

[ಸಂಶೋಧನ ರಂಗ]

ಮುಗಿಲು ಹರಿದು ಬೀಳುತ್ತದೆ

ಇನ್ನೂ ಒಂದೆರಡು ವರ್ಷಗಳಲ್ಲಿ 'ಕಸ್ತೂರಿ'ಯ ಅಚ್ಚು ಕೂಟದ ಕಾರ್ಮಿಕರೋ, ಕರಡು ಪ್ರತಿ ಓದುವವರೋ, ಮೊಹೆಂಜೊದಾರೋ ಲಿಪಿಯ ರಹಸ್ಯವನ್ನು ಒಡೆದುಬಿಡಲಿದ್ದಾರೆ. ಏಕೆಂದರೆ, ಒಂದು 'ವೌಲ್ಯ ವಿವೇಚನ ಮಾಲೆ'ಯ ಬರಹಗಾರರ ಹಸ್ತಪ್ರತಿಯಲ್ಲಿಯ ಕಾಗುಣಿತಗಳನ್ನು, ಶೇಕಡಾ ೫೦ ರಷ್ಟು ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲ ಯಾರಾದರೂ, ಜಗತ್ತಿನ ಯಾವುದೇ ಗೂಢಲಿಪಿಯ ರಹಸ್ಯ ಭೇದಿಸಲು ಸಮರ್ಥರಾಗಿಬಿಡುತ್ತಾರೆಂದು, 'ವಾಶಿಂಗ್ಟನ್ ಪೋಸ್ಟ್' ಮೂಲಗಳಿಗೆ ಗುಪ್ತ ಮಾಹಿತಿ ದೊರಕಿದೆಯಂತೆ. (ಕ್ಷಮಿಸಿ, ಇದು ತೀರ ಕಾನ್ಫಿಡೆನ್ಸಿಯಲ್ ವರದಿಯಾದ್ದರಿಂದ, ರಹಸ್ಯ ಕಾಪಾಡಲು ಪ್ರತಿಯೊಬ್ಬ ಓದುಗರಿಗಾಗಿಯೂ ಪ್ರತ್ಯೇಕ ಪ್ರತಿಗಳಲ್ಲಿಯೇ ಪ್ರಕಟಿಸಿದ್ದೇವೆ.)

೪

[ಕಾರ್ಮಿಕ ರಂಗ]

ಕೊನೆಯುಚು

ಅಡಿಗೆ ಮನೆ ಕೆಲಸವೂ ಕಾರ್ಮಿಕರಂಥ ದುಡಿತವೇ. ಆದ್ದರಿಂದ, ಆ ಕೆಲಸಗಾರರಿಗೂ 'ಲೇಬರ್ ಆ್ಯಕ್ಟ್' ಲಾಗೂ ಆಗಬೇಕೆಂದು ಸಕಲ ಹೆಂಡಂದಿರೆಲ್ಲ, ೧೯೮೬ ಮೇ ತಿಂಗಳಿನಲ್ಲಿ ವ್ಯಾಜ್ಯ ಹೂಡಿದ್ದರಷ್ಟೇ. ೧೯೮೭ ಫೆಬ್ರುವರಿ ವರೆಗೆ, ಈ ಬಗ್ಗೆ ವಾದ ಕೇಳಿದ ನಂತರ ನ್ಯಾಯಾಲಯವು, 'ವಿಷಯ'ಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಕೇಸನ್ನು 'ಲೇಬರ್ ಕೋರ್ಟಿ'ಗೆ ಎಂದು ವರ್ಗಾಯಿಸಿದೆ. ತೀರ್ಪು ಟೈಪಾಗಿ ಸಹಿಗೆ ಬಂದಾಗ, ಫಿರ್ಯಾದಿಗಳನ್ನು ಒಮ್ಮೆ ಸರಿಯಾಗಿ ನೋಡಿದ ನ್ಯಾಯಾಧೀಶರು 'ಕೋರ್ಟ್' ಎಂಬ ಶಬ್ದವನ್ನು 'ವಾರ್ಡ್' ಎಂದು ತಿದ್ದಿ ಕಳುಹಿಸಿದ್ದಾರಂತೆ.

೫

[ಸಿನಿಮಾ ಸುದ್ದಿ]

ಪ್ರಶಸ್ತಿ ಪ್ರದಾನ

೧೯೮೭: ರಾಷ್ಟ್ರೀಯ ಸ್ವರ್ಣಪದಕ ವಿಜೇತ ಚಲನಚಿತ್ರ ಕುರಿತು ಆಯ್ಕೆ ಸಮಿತಿ ಅಧ್ಯಕ್ಷರ

ಒಂದು ಟಿಪ್ಪಣಿ; "ಈ ಚಿತ್ರ ನಿಜಕ್ಕೂ ಒಂದು ಅಪೂರ್ವ ಕಲಾಕೃತಿಯಾಗಿದೆ ವರ್ಷದ ಶ್ರೇಷ್ಠ ಕೊಡುಗೆಯಾಗಿದೆ. ವಿತರಕರ ಅಸಹಕಾರದಿಂದ ಈ ಚಿತ್ರ ಬಿಡುಗಡೆಯಾಗಲಿಲ್ಲ ಎಂಬ ಗೌಣ ಅಂಶ ಬಿಟ್ಟರೆ, ನಮಗೆ ಅತ್ಯಂತ ಸಮಾಧಾನ ತಂದ ಚಿತ್ರ ಇದಾಗಿದೆ."

೧೯೯೭: ಅಂತಾರಾಷ್ಟ್ರೀಯ ವಜ್ರ ಪದಕ ವಿಜೇತ ಚಲನಚಿತ್ರ ಕುರಿತು ಆಯ್ಕೆ ಸಮಿತಿ ಅಧ್ಯಕ್ಷರ ಟಿಪ್ಪಣಿ: "ಈ ಚಿತ್ರ ನಿಜಕ್ಕೂ. ಮನು ಕುಲದ ಒಂದು ಅದ್ಭುತ ಕೃತಿರತ್ನವಾಗಿದೆ. ಸಾರ್ವಕಾಲಿಕ ಶ್ರೇಷ್ಠ ಚಿತ್ರವಿದು. ನಿರ್ಮಾಪಕರ ಅಸಹಕಾರದಿಂದ ಈ ಚಿತ್ರ ತಯಾರಾಗಲಿಲ್ಲ ಎಂಬ ಗೌಣ ಅಂಶ ಬಿಟ್ಟರೆ ನಮಗೆ ಮರು ಹುಟ್ಟು ಕೊಟ್ಟ ಚಿತ್ರ ಇದಾಗಿದೆ."

೬

[ಕ್ರೀಡಾ ರಂಗ]

**ಒಲಿಂಪಿಕ್ ವಿಶೇಷ ಪದಕ**

೨೧ನೇ ಶತಮಾನದಲ್ಲಿಯ ಒಂದು ಸಮಾರಂಭ ಕುರಿತು, ಆಗಿನ ಬಾನುಲಿ ಸುದ್ದಿಯಲ್ಲಿ ಪ್ರಸಾರಿತ ವಾಗಲಿದ್ದುದು:

"ಭಾರತೀಯ ಒಲಿಂಪಿಕ್ ಸಂಸ್ಥೆಯು ಸುವರ್ಣಾಕ್ಷರಗಳ ತನ್ನ 'ರಜತೋತ್ಸವ'ವನ್ನು ಪ್ಯಾರಿಸ್ಸಿನಲ್ಲಿ ವಿಜೃಂಭಣೆಯಿಂದ ಆಚರಿಸಿತು. ಪ್ರಪಂಚದ ಎಲ್ಲ ದೇಶಗಳ ಗಣ್ಯರು, ಪ್ರಮುಖರು, ಕ್ರೀಡಾಪಟುಗಳು ಕಿಕ್ಕಿರಿದು ತುಂಬಿದ ಈ ಅಭೂತಪೂರ್ವ ಸಮಾರಂಭದಲ್ಲಿ, ಭಾರತಕ್ಕೆ ಒಲಿಂಪಿಕ್ಸ್ ಪರವಾಗಿ, ಚಾರಿತ್ರ್ಯಕ ವಿಶೇಷದ ಒಂದು ಸ್ವರ್ಣಪದಕವನ್ನು ನೀಡಿ ಗೌರವಿಸಲಾಯಿತು. ಸದರೀ ರಜತೋತ್ಸವದ, ಎಂದರೆ ಕಳೆದ ೨೫ ವರುಷಗಳ ಅವಧಿಯು ಎಲ್ಲ ಒಲಿಂಪಿಕ್ಸ್‌ನ ಪ್ರತಿಯೊಂದು ಸ್ಪರ್ಧೆಯಲ್ಲಿ ಭಾಗವಹಿಸಿಯೂ, ಪ್ರತಿಯೊಂದು ಪದಕವನ್ನೂ ಇತರ ದೇಶಗಳಿಗೇ ಬಿಟ್ಟುಕೊಟ್ಟು, ಭಾರತೀಯ ತ್ಯಾಗ ಸಂಸ್ಕೃತಿಯನ್ನು ಮೆರೆದ ಹಿರಿಮೆಗಾಗಿ ಈ ಸ್ವರ್ಣ ಪದಕವನ್ನು ನೀಡಲಾಗಿದೆ.

೭

[ಕವಿತಾ ವಿಭಾಗ]

**ರುಕ್ಕಮ್ಮನ ರೊಚ್ಚು**

ಕ್ರಿಮಿಗಳ ಕೊಚ್ಚೆಯಾಗಬೇಡಿರೋ ಕತ್ತೆಗಳೇ
ಎಂದು ಎಷ್ಟೋ ಬಾರಿ ಎಚ್ಚರಿಸಿದರೂ
ಮತ್ತೆ ಮತ್ತೆ ಅಲ್ಲೇ ಮುಲುಗುವ
ಮಕ್ಕಳ ತಲೆ ಹರಟೆ ಕಂಡು
ಪಕ್ಕದ ಮನೆ ರುಕ್ಕಮ್ಮ ರೋಸಿ ಹೋಗಿ
ರೊಚ್ಚಿನಲ್ಲಿ ಹುಚ್ಚಿಯಂತಾದಳು.
ಕೈಲಿ ಕಡುಗೆಂಪು ರೋಮಾಸ್ತ್ರ ಝಳಪಿಸಿ
ಉಕ್ಕಿ ಬಂದವಳಂತೆ ಮಕ್ಕಳ ಮೇಲೆ
ಆಕ್ರಮಣಗೈದಳು. ಮೂಲೆ ಮೂಲೆಯಿಂದ
ಒಂದೊಂದನ್ನೇ ನಿರ್ದಯ ಎಳೆದಳು.
ಸಿಕ್ಕಿ ಸಿಕ್ಕಿದ ಹಾಗೆಯೇ ಜೀವ ಕಕ್ಕಿಸಿದಳು.
ಕುಕ್ಕಿ ಕುಕ್ಕಿ ಕೊನೆಯ ಕಂದನ ವರೆಗೂ
ಕೊಂದಳು. ಉಕ್ಕಿ ಬಂದ ಸಿಟ್ಟಿನಲ್ಲಿ
ಎತ್ತಿ ಎಲ್ಲವನ್ನೂ ತಿಪ್ಪೆಗೆ ಬಿಸಾಕಿ
ತಪ್ತ ನೆತ್ತಿಗಳಿಗೆ ತಪತಪ ನೀರು ಹೊಯ್ದಳು.
ಇನ್ನೇನು ಸತ್ತಾಳು!
ತಲೆಗಾಡಿನ ನಡುವೆ ಬೀಡು ಬಿಟ್ಟಿದ್ದ
ಹೇನಿಗಿನ್ನೇನು ಮಾಡಿಯಾಳು, ಪಾಪ!





# ರಾಗಂ-ತಾನಂ-ಪಲ್ಲವಿ

ಮೂಲ : ಶ್ರೀ ಇಚ್ಛಾಪುರಪು ರಾಮಚಂದ್ರನ್
ಕನ್ನಡಕ್ಕೆ : ಶಾರದಾತನಯ

ನಿವೃತ್ತಿಯಾದರೂ ಆಫೀಸಿನ ಸುತ್ತಲೂ ಪ್ರದಕ್ಷಿಣೆ ಮಾಡುವುದು ತಪ್ಪಲಿಲ್ಲ. ನನ್ನ ಪೆನ್‌ಷನ್ ಇತ್ಯರ್ಥವಾಗದೆ ಐದು ವರ್ಷಗಳಿಂದ ನನ್ನದಂ ನಾಯಿಪಾಡಾಗಿತ್ತು. ಅದೇ ಕೆಲಸದ ಮೇಲೆ ನಾನು ಅನಕಾಪಲ್ಲಿಗೆ ಬಂದದ್ದು. ಅಂದು ಶನಿವಾರ.

ನಾನು ಅನೇಕ ವರ್ಷ ಅನಕಾಪಲ್ಲಿ ಆಫೀಸಿನಲ್ಲಿ ಕೆಲಸ ಮಾಡಿದ್ದರಿಂದ ಎಲ್ಲರೂ ಚಿರಪರಿಚಿತರಾದ ಅಧಿಕಾರಿಗಳು—ಸಹೋದ್ಯೋಗಿಗಳು. ಅದರಿಂದಾಗಿ ನನ್ನ ಕೆಲಸವನ್ನು ಸೋಮವಾರ ತಪ್ಪದೆ ಮಾಡಿಕೊಡುವೆನೆಂದು ಹೇಳಿದ್ದರು. ಸರಿ, ಹೇಗೂ ಬಂದಿದೀನಿ, ಭಾನುವಾರ ಇದ್ದು ಸೋಮವಾರ ಬರಬೇಕಾದ ಬಾಕಿ ಹಣವನ್ನೆಲ್ಲ ಒಂದೇ ಸಲ ತೆಗೆದುಕೊಂಡೇ ಹೋಗುವುದು ಎಂದು ತೀರ್ಮಾನಿಸಿದೆ.

ರಿಟೈರ್ ಆದ ಮೇಲೆಯೇ ನಾನು ಅನಕಾಪಲ್ಲಿ ಬಿಟ್ಟದ್ದು. ಸರ್ವೀಸಿನ ಕೊನೆ ಹತ್ತು ವರ್ಷ ಅದೇ ಊರಿನಲ್ಲಿ ವಾಸ. ಒಂದೇ ಆಫೀಸಿನಲ್ಲಿ ಕೆಲಸ. ಸಾಮಾನ್ಯವಾಗಿ ನಾನು ಕೆಲಸ ಮಾಡಿದ ಆ ಆಫೀಸಿನಲ್ಲಿ ಪದೇ ಪದೇ ವರ್ಗಗಳನ್ನು ಮಾಡುತ್ತಿರಲಿಲ್ಲ ಅನ್ನಿ.

ನನಗೆ ಆತಿಥ್ಯ ನೀಡಿದ ಗೃಹಸ್ಥ ಮಿತ್ರರು, ಮಗಳಿಗೆ ಗಂಡು ನೋಡಿಕೊಂಡು ಬರಲು ಭಾನುವಾರ ಬೆಳಗ್ಗೆ ಇನ್ನೂ ಬೆಳಕು ಮೂಡುವ ಮೊದಲೇ ಸ್ನಾನ ಮಾಡಿಕೊಂಡು, ವಿಷಯ ತಿಳಿಸಿ ಹೊರಟುಹೋದರು. ನಾನು ಒಬ್ಬಂಟಿಗನಾದೆ. ಸಂಜೆಯವರೆಗೂ ಕಾಲ ತಳ್ಳುವುದು ತುಂಬ ಪ್ರಯಾಸವಾಯಿತು. ನಂತರ ಮನೇಲಿ ಕೂಡುವದು ಸಾಧ್ಯವಾಗದೆ, ಹೊರಗೆ ಅಡ್ಡಾಡಿಕೊಂಡು ಬರಲು ಹೊರಟೆ. ಚಿರಪರಿಚಿತವಾದ ರಸ್ತೆಗಳಲ್ಲಿ ತಿರುಗಾಡಿದೆ. ಅಂತೂ ಕಾಲ ಕಳೆಯಬೇಕಲ್ಲ. ಸಿನಿಮಾ ಹಾಲಲ್ಲಿ ಕೂತು ಪ್ರೇಮ ದೃಶ್ಯಗಳನ್ನು ತೆರೆಯ ಮೇಲೆ ನೋಡಿ ಖುಷಿ ಪಡುವ ಕಾಲ ಕಳೆದುಹೋಗಿದೆ. ರಾಮಾಯಣ ಅಥವಾ ಭಾರತ ಪ್ರವಚನವೋ, ಭಗವದ್ಗೀತಾ ಉಪನ್ಯಾಸವೋ, ಇಲ್ಲಾ ಯಾರೋ ಒಬ್ಬ ಭಾಗವತರ ಸಂಗೀತ ಕಚೇರಿಯನ್ನೋ ಕೇಳಿ ಆನಂದಿಸುವ ವಯಸ್ಸು. ಮುಂದೆ ಬರುವ ಕಾಲಕ್ಕಿಂತ ಕಳೆದುಹೋದ ಕಾಲವೇ ಚೆನ್ನ ಎಂದು ಗತಕಾಲದ ನೆನಪುಗಳನ್ನು ಸವಿಯುತ್ತಾ ಆ ಮಧುರ ಸ್ಮೃತಿಗಳಲ್ಲಿ ತಲ್ಲೀನನಾದೆ. ಬಾಹ್ಯ ಪ್ರಪಂಚಕ್ಕೆ ಬರುವ ವೇಳೆಗೆ ಬಸ್‌ಸ್ಟ್ಯಾಂಡಿನ

ಬಳಿಗೆ ಬಂದಿದ್ದೆ. ಸಂಜೆ ಕಳೆದು ಕತ್ತಲಾಗುತ್ತಿತ್ತು. ಮಿಂಚಿನಂತೆ ಬಂತು ಒಂದು ಆಲೋಚನೆ.

ನನ್ನ ಕಾಲುಗಳು ನನ್ನನ್ನು ಅಲ್ಲಿಗೆ ಕರೆತಂದಿದ್ದುದು ನನ್ನ ಐದು ವರ್ಷಗಳ ಹಿಂದಿನ ಅಭ್ಯಾಸ ಬಲ. ಆ ಊರು ಬಿಡುವವರೆಗೆ ಪ್ರತಿ ಭಾನುವಾರ ತಪ್ಪದೆ ಅಲ್ಲಿಗೆ ಹೋಗುತ್ತಿದ್ದೆ. ಅದಕ್ಕೆ ಒಂದು ಬಲವಾದ ಕಾರಣವೂ ಇತ್ತು. ಅದೇನೆಂದರೆ ಅನಕಾಪಲ್ಲಿ ಬಸ್‌ಸ್ಟಾಂಡಿಗೆ ಎದುರಾಗಿರುವುದೇ ಗ್ರಂಥ ಭಂಡಾರದ ಕಟ್ಟಡ. ಅದರ ಮೇಲ್ಭಾಗದ ವಿಶಾಲವಾದ ಹಾಲೇ ಸಂಗೀತ ಪರಿಷತ್ತಿನ ಸಭಾಂಗಣ. ಅಲ್ಲಿ ಪ್ರತಿ ಭಾನುವಾರ ಸಂಜೆ ಆರು ಗಂಟೆಯಿಂದ ಯಾರಾದರೂ ಒಬ್ಬ ಸಂಗೀತ ವಿದ್ವಾಂಸರ ಕಚೇರಿ ಇರುತ್ತಿತ್ತು.

ಪರಿಷತ್ತಿನ ಕಾರ್ಯನಿರ್ವಾಹಕರು ಒಳ್ಳೆಯ ಕಲಾಭಿಮಾನಿಗಳು. ಮಿಗಿಲಾಗಿ ಸಂಗೀತ ಪ್ರಿಯರು. ಪ್ರತಿವಾರ ತಪ್ಪದೆ ಸಂಗೀತ ಕಾರ್ಯಕ್ರಮ ಏರ್ಪಡಿಸುತ್ತಿದ್ದರು. ವೋಕಲ್, ವೀಣೆ, ವೈಯೊಲಿನ್, ಸಿತಾರ್, ಸೋಲೋ ವಾದ್ಯ ಕಚೇರಿ, ವಾದ್ಯಗೋಷ್ಠಿ—ಹೀಗೆ ಏನೋ ಒಂದು ಕಾರ್ಯಕ್ರಮ ನಡೆದೇ ನಡೆಯುತ್ತಿತ್ತು.

ಅಲ್ಲಿ ಖರ್ಚಿಲ್ಲದೆ ಹಾಯಾಗಿ ಕೂತುಕೊಳ್ಳಬಹುದಿತ್ತು. ಮೇಲೆ ತಿರುಗುವ ಫ್ಯಾನುಗಳ ತಣ್ಣನೆ ಗಾಳಿ, ಕೂಡಲು ಮೆತ್ತನೆಯ ಜಮಖಾನೆಗಳು, ಒಂದು ಪಕ್ಕದಿಂದ ಕಾಣುವ ವಿಶಾಲವಾದ ನೀಲಾಕಾಶ, ಆಗಾಗ ಬೆಳದಿಂಗಳ ದರ್ಶನ ಭಾಗ್ಯ, ಮೈಗೆ ತಂಗಾಳಿಯ ಸ್ಪರ್ಶ. ಇದರ ಜೊತೆ ಕಾರ್ಯಕ್ರಮಕ್ಕೆ ಬರುವ ರಸಿಕ ವೃಂದಕ್ಕೆ



ಸಂಜೆ ಉಚಿತ ಮನರಂಜನೆ ಸಿಗುತ್ತಿತ್ತು. ಹೀಗಾಗಿ ಹಾಲಿನ ತುಂಬ ಸಂಗೀತ ರಸಾಸ್ವಾದನೆಗೆ ಸ್ತ್ರೀ-ಪುರುಷರ ಭೇದವಿಲ್ಲದೆ ಜನ ಬಹಳ ಆಸಕ್ತಿ ವಹಿಸಿ ಹಾಜರಾಗುತ್ತಿದ್ದರು.

"ಶಿಶುರ್ವೇತ್ತಿ-ಪಶುರ್ವೇತ್ತಿ-ವೇತ್ತಿ ಗಾನ ರಸಂ ಫಣೀಃ" ಎನ್ನುವ ಜನಪ್ರಿಯವಾದ ಉಕ್ತಿಯನ್ನು ನೀವು ಕೇಳಿರಬಹುದು. ಮಹಡಿ ಮೆಟ್ಟಿಲು ಏರಲು ಸಾಧ್ಯವಿಲ್ಲದೆಯೋ ಏನೋ, ಗಾಯನ ಕಚೇರಿಗೆ ಫಣಿರಾಜರು ಬರುತ್ತಿರಲಿಲ್ಲ! ಬಂದರೂ ಯಾವುದೋ ಮೂಲೆಯಲ್ಲಿ ಯಾರಿಗೂ ಕಾಣದಂತೆ ಇರುತ್ತಿದ್ದರೇನೋ! ಪಶುಗಳು ಬರುತ್ತಿರಲಿಲ್ಲ. ಬಹುಶಃ ನಮ್ಮಂಥ ಮನುಷ್ಯರು ಇದ್ದುದಕ್ಕೋ ಏನೋ! ಶಿಶುಗಳು ಮಾತ್ರ ಒಂದೋ-ಎರಡೋ ಇರುತ್ತಿದ್ದವು, ತಾಯಂದಿರೊಡನೆ. ಇನ್ನು, ಕಾಲೇಜು ಹುಡುಗರು ಅಲ್ಲಿಗೆ ಬರುವ ಪ್ರಶ್ನೆಯೇ ಇಲ್ಲ. ಏಕೆಂದರೆ ಕಚೇರಿ ಎಂದರೆ ಶುದ್ಧ ಶಾಸ್ತ್ರೀಯ ಸಂಗೀತ ಕಚೇರಿ. ಅಲ್ಲಿ ನಡೆಯುತ್ತಿದ್ದುದು ಒಂದು ಸಲ ಕೇಳಿ ಲಲಲಾ-ಲಲಲಾ-ಎಂದು ಹೇಳಿಕೊಳ್ಳುವ ಫಿಲಂ-ಹಿಟ್‌ಗಳೇ? ವಿಸಲ್ ಹಾಕಲು ಬಾರದ ಶುದ್ಧ ಸಂಗೀತ ಅವರಿಗೇಕೆ ಬೇಕು? ಹೋಗಲಿ, ಅವರನ್ನೇಕೆ ನಿಂದಿಸಬೇಕು. ಅವರ ವಯಸ್ಸು ಸಿನಿಮಾ ನೋಡೋ ವಯಸ್ಸು. ಸಿನಿಮಾ ಹಾಡುಗಳನ್ನು ಕೇಳಿ ಖುಷಿಪಡೋ ವಯಸ್ಸು-ಮನಸ್ಸು.

ಸಂಗೀತ ಶ್ರವಣಕ್ಕಿಂತ ಅಲ್ಲಿನ ತಣ್ಣನೆಯ ಗಾಳಿ. ಮೈಗೆ, ಮನಸ್ಸಿಗೆ ಹಿತವಾಗಿದ್ದು, ಮನೆಯ ತಾಪತ್ರಯಗಳನ್ನು ಸ್ವಲ್ಪ ಹೊತ್ತು



ದರೂ ಮರೆಯಬಹುದೆಂದು ಬರುವವರು ಕೆಲವರು. ಅಂತಹ ಜನ, ಗಾಯಕ ಒಂದೆರಡು ಕೃತಿಗಳನ್ನು ಹಾಡುವ ವೇಳೆಗೆ ತಮ್ಮ ಪಾಡಿಗೆ ತಾವು ಸುಷುಪ್ತಿಯಲ್ಲಿ ತಲ್ಲೀನರಾಗಿರುತ್ತಿದ್ದರು.

ಪ್ರತಿ ಕಚೇರಿಗೂ ಜನ ಸಾಕಷ್ಟು ಸಂಖ್ಯೆಯಲ್ಲಿ ಹಾಜರಾಗುತ್ತಿದ್ದರು. ಸಭೆಗೆ ಬರುತ್ತಿದ್ದ ಮಹಿಳೆಯರು ಒಡವೆ -ವಸ್ತ್ರ -ಮಕ್ಕಳು - ಮದುವೆ ಇವುಗಳ ವಿಷಯವಾಗಿಯೂ, ಗಂಡಸರು ಏರುತ್ತಿರುವ ಪದಾರ್ಥಗಳ ಬೆಲೆಗಳು, ಎಲೆಕ್ಷನ್ನು-ರಾಜಕೀಯ-ಸೇಲ್ಸ್‌ಟ್ಯಾಕ್ಸ್-ಇನ್‌ಕಮ್ ಟ್ಯಾಕ್ಸುಗಳು ಮತ್ತು ಅದನ್ನು ತಪ್ಪಿಸಿಕೊಳ್ಳುವ ವಿಧಿವಿಧಾನಗಳು-ಇವುಗಳ ವಿಷಯವಾಗಿಯೂ ಚರ್ಚಿಸುತ್ತಿದ್ದರು. ಅವರ ವಿಧ ವಿಧವಾದ ಚರ್ಚೆಗಳು ಮುಗಿಯುತ್ತಿದ್ದಂತೆ ಸಭೆಯಲ್ಲಿ ಕೂತಿದ್ದವರ ಸಂಖ್ಯೆ ಕಡಿಮೆಯಾಗುತ್ತಿತ್ತು. ಹೀಗಾಗಿ ಗಾಯಕನ ಕಂಠ ಒಂದು ಸ್ಥಿಮಿತಕ್ಕೆ ಬಂದು ಗಾಯನ ಕಚೇರಿ ಕಳೆಕಟ್ಟುವ ವೇಳೆಗೆ ಶ್ರೋತೃಗಳು ಅಲ್ಲೊಬ್ಬರು ಇಲ್ಲೊಬ್ಬರು. ವಂದನಾರ್ಪಣೆಯಾಗುವ ವೇಳೆಗೆ ಇಡೀ ಸಭೆಯಲ್ಲಿ ಇಪ್ಪತ್ತು - ಇಪ್ಪತ್ತೈದು ಜನರಿರುತ್ತಿದ್ದರು. ಕೊನೆಯ ವರೆಗೂ ಉಳಿಯುತ್ತಿದ್ದ ಕಾರ್ಯನಿರ್ವಾಹಕರು, ಕಲಾವಿದರು ಮತ್ತು ಕೆಲವೇ ಶ್ರೋತೃಗಳಲ್ಲಿ ನಾನು ಮತ್ತು ತಹಶೀಲ್ದಾರರು ಮುಖ್ಯರೆನ್ನಬಹುದು. ಸ್ತ್ರೀಯರಲ್ಲಿ ತಹಶೀಲ್ದಾರರ ಹೆಂಡತಿ ಒಬ್ಬರೇ ಇರುತ್ತಿದ್ದುದು. ಆದರೆ ಅವರಿಗೆ ಸಂಗೀತಾಭಿರುಚಿ ಇತ್ತೋ ಅಥವಾ ತಮ್ಮ ಯಜಮಾನರಿಗಾಗಿ ಕಾಯುತ್ತಿದ್ದರೋ ಎಂಬ ಸಂಗತಿ ನನಗೆ ತಿಳಿಯದು.

ತಹಶೀಲ್ದಾರರೆಂದರೆ ಸಾಮಾನ್ಯವೇ? ಅವರು ಊರಿಗೇ ದಣಿ. ಅವರು ನಿಂತಿರಲಿ-ನಿದ್ದೆ ಹೋಗುತ್ತಿರಲಿ-ತಹಶೀಲ್ದಾರರು ತಹಶೀಲ್ದಾರರೇ! ಆ ನಿಜವನ್ನು ನಿರೂಪಿಸಲೆಂದೇ ಹಿತ್ತಾಳೆ ಬಿಲ್ಲೆಯ ಡವಾಲಿವಾಲ ತಾನಿಲ್ಲದಿದ್ದರೆ ಅವರ ಗೌರವಕ್ಕೆ ಚ್ಯುತಿ ಬರಬಹುದೆಂದು ಅವರ ಹಿಂದೆ ತಪ್ಪದೆ ಹಾಜರಾಗುತ್ತಿದ್ದ.

ತಹಶೀಲ್ದಾರರಿಗೆ ಸಂಗೀತದಲ್ಲಿ ತುಂಬ ಆಸಕ್ತಿ ಎಂದೂ, ಅವರಿಗೆ ಅಷ್ಟೋ-ಇಷ್ಟೋ ಹಾಡಲು ಬರುವುದೆಂದೂ ಅವರಿವರ ಬಾಯಿಂದ ಕೇಳಿದ್ದೆ. ತಾಲೂಕು ಕಚೇರಿಯ ವಿಶೇಷ ಚೇಂಬರಿನ ಕುರ್ಚಿಯಲ್ಲಿ ಕೂತು ಟೇಬಲ್ ಮೇಲೆ ನೂರಾರು ಪತ್ರ, ಫೈಲುಗಳನ್ನು ಹರಡಿಕೊಂಡು ಅವುಗಳಲ್ಲಿ ತಲ್ಲೀನರಾಗಿರುತ್ತಿದ್ದ ತಹಶೀಲ್ದಾರರಿಗೂ ಸಂಗೀತ ಕಚೇರಿಗೆ ಶ್ರೋತೃವಾಗುವ ಅಭ್ಯಾಸವಿದೆ ಎಂಬುದನ್ನು ನಾನು ಮೊದಲು ನಂಬಲಿಲ್ಲ. ಇದೆಲ್ಲ ದೊಡ್ಡವರು ಎನ್ನಿಸಿಕೊಳ್ಳುವ 'ಷೋ' ಎಂದುಕೊಂಡೆ. ಆ ಹಿತ್ತಾಳೆ ಬಿಲ್ಲೆಯ ಡವಾಲಿವಾಲ ಸಾಹೇಬರನ್ನು ಕಚೇರಿಗೆ ಅನುಸರಿಸುವಂತೆ ಸಂಗೀತ ಕಚೇರಿಗೂ ಅನುಸರಿಸುತ್ತಿದ್ದುದನ್ನು ನೋಡಿ ಬಹುಶಃ ತಹಶೀಲ್ದಾರರು ತಮ್ಮ ಹೆಂಡತಿಯೊಡನೆ ಏಕಾಂತದಲ್ಲಿರುವಾಗಲೂ ಆಕೆ ಅವರನ್ನು 'ತಹಶೀಲ್ದಾರರೇ' ಎಂದು ಸಂಬೋಧಿಸಬಹುದೇ ಎಂಬ ಅನುಮಾನ ಬಾರದೆ ಇರಲಿಲ್ಲ.

ಮೊದಲ ಸಾಲಿನಲ್ಲಿ ಗಾಯಕನಿಗೆ ಎದುರಾಗಿ ವೇದಿಕೆಗೆ ಆದಷ್ಟು ಸಮೀಪವಾಗಿ ಪದ್ಮಾಸನ ಹಾಕಿ ಕಣ್ಮುಚ್ಚಿಕೊಂಡು, ಮೈಮರೆತು, ಗಾಯಕ ಸಂಗತಿಗಳನ್ನು ಹಾಕುತ್ತಿದ್ದಂತೆ ತಾನು ತಹಶೀಲ್ದಾರನೆಂಬುದನ್ನೂ ಮರೆತು ತೊಡೆಯ ಮೇಲೆ ತಾಳ ಹಾಕುತ್ತಿದ್ದ ದೃಶ್ಯವನ್ನು ನೋಡಿದ ಮೇಲೆ, ಆತ ನಿಜಕ್ಕೂ ಸಂಗೀತಲೋಲನೆ, ನಾದಪ್ರಿಯನೆ ಎಂದು ನನ್ನ ಮನಸ್ಸು ತೀರ್ಮಾನಿಸಿತು. ಏಕೆಂದರೆ ಒಬ್ಬ ಮನುಷ್ಯ ತನ್ನ ನಟನೆಯಿಂದ ಎಲ್ಲರನ್ನೂ, ಎಲ್ಲ ಕಾಲಕ್ಕೂ ವಂಚಿಸಲು ಸಾಧ್ಯವಿಲ್ಲ ಎಂಬುದು ಎಲ್ಲರಿಗೂ ತಿಳಿದಿರುವ ಸತ್ಯ ಸಂಗತಿ.

ತಹಶೀಲ್ದಾರರ ಡವಾಲಿವಾಲ ತನಗೆ ಒಳ್ಳೇ ಗ್ರಹಚಾರ ಬಂತಲ್ಲ ಎಂದುಕೊಂಡು ಸಭಾಂಗಣದ ಹೊರಗೆ ಮೈಕಿಗೆ ಆದಷ್ಟು ದೂರವಾಗಿ ಕೂತು ತೂಕಡಿಸುತ್ತಿದ್ದ. ಆದರೆ ಕ್ರಮೇಣವಾಗಿ ಅವನಲ್ಲಿ ಸುಪ್ತವಾಗಿದ್ದ ಸಂಗೀತಾಭಿರುಚಿ

ಜಾಗೃತವಾಗಿ ಅವನು ಹಾಲಲ್ಲಿ ಒಂದು ಮೂಲೆಯನ್ನಾಶ್ರಯಿಸಿ ಅಲ್ಲಿ ಬರುತ್ತಿದ್ದ ನಾದಾಮೃತದಲ್ಲಿ ತಲ್ಲೀನನಾಗುವಂತೆ ಮಾಡಿತ್ತು.

ಸಂಗೀತ ಕಚೇರಿಯನ್ನು ಕೇಳುವುದಷ್ಟೆ ಅಲ್ಲ, ಅದನ್ನು ನೋಡುವುದೂ ಒಂದು ಚಂದವೆ. ಗಾಯಕ ತನ್ನ ಗಂಟಲನ್ನು ಸರಿಪಡಿಸಿಕೊಳ್ಳುವಾಗ, ಹಾಡುವಾಗ ಅವನು ಅಭಿವ್ಯಕ್ತಿಸುವ ವಿವಿಧ ಮುಖ ಭಂಗಿಗಳನ್ನು, ಆಯಾ ರಾಗಗಳ ಧ್ವನಿಯ ಏರಿಳಿತಗಳಿಗನುಗುಣವಾಗಿ ತಕ್ಕಂತೆ ತಲೆಯಾಡಿಸುವುದರಲ್ಲಿ ತನ್ನ ಭಾವನೆಗಳನ್ನು ಕಣ್ಣುಗಳಲ್ಲಿ ಮೂಡಿಸುವ ನೋಟ ಅತಿ ರಮ್ಯ!

'ಕೃಷಿತೋ ನಾಸ್ತಿ ದುರ್ಭಿಕ್ಷಮ್'—'ಅಭ್ಯಾಸ ಸಾರಿಣೀ ವಿದ್ಯಾ'– ಈ ಸುಭಾಷಿತಗಳನ್ನು ಒಪ್ಪಿಕೊಳ್ಳಬೇಕಾದದ್ದೇ. ಆದರೆ ನಮ್ಮ ಮನೆ ಸಮೀಪದಲ್ಲಿರೋ ಬಜಂತ್ರಿ ವಿಷಯ ಹೇಳೋದಾದರೆ ನಾನು ಆತನ ನಾಗಸ್ವರವನ್ನು ನನಗೆ ಬುದ್ಧಿ ಬಂದಾಗಿನಿಂದ ಕೇಳುತ್ತಿದ್ದೇನೆ. ಆತ ಮೇಲಕ್ಕೇರಲೇ ಇಲ್ಲ. ಸದ್ಯ ಆತ ಊದೋದನ್ನ ನಿಲ್ಲಿಸಿದರೆ ಸಾಕು ಅನ್ನಿಸುತ್ತೆ.

ಎಲ್ಲ ಪೂರ್ವಜನ್ಮ ಸಂಸ್ಕಾರ ಅನ್ನೋದಾದರೆ, ಕೆಲವು ಘನ ವಿದ್ವಾಂಸರ ವಂಶವೃಕ್ಷವನ್ನು ಪರಿಶೀಲಿಸಿದರೆ ಅವರ ಏಳು ತಲೆಗಳಲ್ಲಿ ಗಾನ ಕೋಗಿಲೆಗಳಾಗಲಿ, ಗಾನ ಗಂಧರ್ವರಾಗಲಿ ಉದ್ಭವಿಸದ ವಂಶಗಳಲ್ಲಿ ಒಬ್ಬೊಬ್ಬ ಸಂಗೀತ ಸಾಮ್ರಾಟರು ಜನಿಸಿರುತ್ತಾರೆ. ಮಾತೆತ್ತಿದರೆ ಅಪಶಬ್ದ ನುಡಿಯುವ, ಹೊಲಸು ಮಾತುಗಳನ್ನಾಡುವ ಮನೆತನಗಳಲ್ಲೂ ಗಾನ ಕಲಾಕೋವಿದರು ಉದ್ಭವಿಸಿರುತ್ತಾರೆ. ಹೀಗಾಗಲು ಕಾರಣ? ಅದಕ್ಕೆ ಏನೂ ಹೇಳಲು ಸಾಧ್ಯವಿಲ್ಲ. ಅದೆಲ್ಲ ಪೂರ್ವಜನ್ಮ ಸಂಸ್ಕಾರ ಎನ್ನಬಹುದೇನೋ! ಆ ಸಂಗೀತ ಕಲಾ - ಪರಿಷತ್ತು ಖ್ಯಾತ ವಿದ್ವಾಂಸರಷ್ಟೇ ಅಲ್ಲ, ವರ್ಧಮಾನ ಕಲಾವಿದರನ್ನೂ ಪ್ರೋತ್ಸಾಹಿಸುತ್ತಿತ್ತು. ಹೌದು, ಪ್ರತಿ ವಾರವೂ ಪ್ರತಿಷ್ಠಿತ ವಿದ್ವಾಂಸರೇ ಸಿಕ್ಕಬೇಕೆಂದರೆ ಹೇಗೆ ಸಾಧ್ಯ? ಸಿಕ್ಕಿದರೂ ಅವರ ಖರ್ಚು ವೆಚ್ಚಗಳನ್ನು ನಿಭಾಯಿಸುವ ಸಾಮರ್ಥ್ಯವೂ ಇರಬೇಕಲ್ಲ! ಇದನ್ನೆಲ್ಲ ನೆನಸಿಕೊಳ್ಳುತ್ತಾ ಮಹಡಿ ಮೆಟ್ಟಲೇರಿ ಅಂದಿನ ಕಾರ್ಯಕ್ರಮದ ವಿವರಗಳನ್ನು ಬೋರ್ಡಿನಲ್ಲಿ ಓದಿ ನೋಡಿದೆ. ಆ ದಿನದ ಗಾಯಕರ ಪಕ್ಕ ವಾದ್ಯಗಾರರ ಹೆಸರು—ಇತ್ಯಾದಿಗಳನ್ನೆಲ್ಲ ನಮೂದಿಸಿದಾದರೂ ಆ ಪ್ರಕಟಣಾ ಫಲಕದ ಮೇಲೆ ಬೆಳಕು ಸರಿಯಾಗಿ ಬೀಳದೇ ಇದ್ದುದರಿಂದಲೂ, ನನ್ನ ಕಣ್ಣುಗಳಿಗೆ ಚಾಳೀಸು ಬಂದ್ದಿದುದರಿಂದಲೂ ಎಲ್ಲಾ ಮಂಜು ಮಂಜಾಗಿ ಕಾಣುತ್ತಿತ್ತು. ಕನ್ನಡಕವನ್ನು ಮೂಗಿನ ತುದಿಗೆ ಏರಿಸಿದೆ. ಆದರೂ ಯಾವುದನ್ನೂ ಸರಿಯಾಗಿ ನೋಡಲಾಗಲಿಲ್ಲ. ಅಲ್ಲದೆ ಆ 'ಉಪನೇತ್ರ'ಗಳೇನಿದ್ದರೂ ಕೇವಲ ಸಮೀಪದ ವಸ್ತುಗಳನ್ನು ನೋಡುವುದಕ್ಕೆ ಮಾತ್ರ. ದೂರದ ವಸ್ತುಗಳನ್ನು ನೋಡಲು ಅದರಿಂದ ಸಾಧ್ಯವಾಗುತ್ತಿರಲಿಲ್ಲ. ಒಂದು ರೀತಿಯಲ್ಲಿ ಅದೂ ವರವಾಗಿ ಪರಿಣಮಿಸಿತ್ತು ಅನ್ನಿ. ಏಕೆಂದರೆ ದೂರದಲ್ಲಿ ನಡೆಯುವ ಘೋರ ದೃಶ್ಯಗಳನ್ನು ನೋಡದಿರುವುದೇ ಪರಮ ಶ್ರೇಯಸ್ಕರ. ಕಥೆ ಓದುತ್ತಾ ಕಥೆ ಬರೆದವರು ಯಾರು ಎಂದು ಕಥೆಗಾರನ ಬಗ್ಗೆ ಕುತೂಹಲ ತಾಳುವಂತೆ, ಗಾಯಕನ ಹೆಸರು ನೋಡಲು ಪ್ರಯತ್ನಿಸಿ ವಿಫಲನಾಗಿ ಮೆಟ್ಟಲೇರತೊಡಗಿದೆ.

ಆಗಲೇ ಕಚೇರಿ ಪ್ರಾರಂಭವಾದಂತಿತ್ತು. ನಾನು ಇನ್ನೂ ಮೊದಲೇ ಬರಬೇಕಾಗಿತ್ತು ಎಂದುಕೊಂಡೆ.

ಮೆಟ್ಟಿಲು ಹತ್ತಿ ಜಮಖಾನೆಯ ಕೊನೆಯಲ್ಲಿ ಕುಳಿತುಕೊಂಡೆ. ಗಾಯಕನ ಧ್ವನಿ ಸುಶ್ರಾವ್ಯವಾಗಿತ್ತು. ತಂಬೂರಿ ಶ್ರುತಿ ಗಾಯಕನ ಕಂಠದೊಡನೆ ಮೇಳವಿಸಿ ಮಿಡಿಯುತ್ತಿತ್ತು. ಅಂದು ಅದೇಕೋ ಸಭೆ ನಿರಾಡಂಬರವಾಗಿತ್ತು. ವೈಯೊಲಿನ್ ಹಾಗೂ ಮೃದಂಗಗಳಿರಲಿಲ್ಲ. ನನಗಂತೂ ಸೂಕ್ತವಾದ ಪಕ್ಕವಾದ್ಯಗಳಿಲ್ಲದೆ ಕಚೇರಿ ಅಷ್ಟಾಗಿ ರುಚಿಸುತ್ತಿರಲಿಲ್ಲ. ಅದರಲ್ಲೂ ಪರುಷವಾದ ಮಾನವಕಂಠಕ್ಕಿಂತ ನನಗೇನೊ ವಾದ್ಯಸಂಗೀತ

ವನ್ನು ಆಲಿಸುವದರಲ್ಲೇ ಹಿತ ಕಾಣುತ್ತಿತ್ತು. ಅಂದಿನ ಗಾಯಕ ತನ್ನದೇ ಆದ ಲಹರಿಯಲ್ಲಿ ವಿಹರಿಸುತ್ತಾ ಹಾಡುತ್ತಿದ್ದ. ಆದರೆ ಹಾಡುತ್ತಿದ್ದ ಶೈಲಿ ದ್ವಾರಂ ವೆಂಕಟಸ್ವಾಮಿನಾಯ್ಡುರವರು ವೈಯೊಲಿನ್‌ನಲ್ಲಿ ನುಡಿಸಿದ— "ವಾತಾಪಿಗಣ-ಪತಿಂ—" ಎಮನಿ ಶಂಕರಶಾಸ್ತ್ರಿಗಳು ವೀಣೆಯಲ್ಲಿ ಮಿಡಿಸಿರುವ "ರಘುವಂಶ ಸುಧಾಂಬುಧಿ" ಕೃತಿಯನ್ನು ವೈದ್ಯನಾಥಭಾಗವತರ ಕಂಠದಿಂದ ಹೊಮ್ಮುತ್ತಿದ್ದ ತ್ಯಾಗರಾಜರ ಕೃತಿ "ಬಂಟುರೀತಿಕೊಲುವು" ಕೃತಿಗಳನ್ನೂ ನೆನಪಿಗೆ ತರುತ್ತಿತ್ತು.

ಅದೇನು ಕಚೇರಿ! ಒಬ್ಬನೇ ಗಾಯಕ ಅದು ಹೇಗೆ ಇಷ್ಟೊಂದು ವೈವಿಧ್ಯಮಯ ಸಂಗೀತ ಸುಧೆಯನ್ನು ನೀಡಬಲ್ಲ ಎಂದು ನನಗೆ ಆಶ್ಚರ್ಯವಾಯಿತು. ಸಾಮಾನ್ಯವಾಗಿ ಕವಿಗಳು, ಗಾಯಕರು, ಕಲಾವಿದರು ತಾವು ಬರದದ್ದೇ ಕವಿತೆ— ತಾವು ಹಾಡಿದ್ದೇ ಹಾಡು- ತಾವು ಎಳೆದ ಗೆರೆಯೇ ಚಿತ್ರ-ಎನ್ನುವ ವಿಶಿಷ್ಟ ಧೋರಣೆ ತಾಳುವಾಗ, ಇದೇನು ಆಶ್ಚರ್ಯ! ಅನೇಕ ಶೈಲಿಗಳು ಒಂದೇ ಕಂಠದಿಂದ ಮೂಡಿ ಬರುತ್ತಿವೆ ಎಂದುಕೊಂಡೆ.

ಹಾಗಾದರೆ ಈ ಗಾಯಕ ತನ್ನದೇ ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡು, ವಿವಿಧ ಶೈಲಿಗಳನ್ನೂ ಮೈಗೂಡಿಸಿಕೊಂಡಿರುವನಲ್ಲ ಎಂದು ಆಶ್ಚರ್ಯವಾಯಿತು.

ಒಟ್ಟಿನಲ್ಲಿ ವಿವಿಧ ಗಾಯಕರ ಸಂಪ್ರದಾಯಗಳನ್ನು ಪಾಲಿಸಿ ಆತ ಎರಡು ಗಂಟೆಗಳ ಕಾಲ ನೀಡಿದ ಸಂಗೀತ ರಸದೌತಣ ನಿಜಕ್ಕೂ ತುಂಬ ಅಮೋಘವಾಗಿತ್ತು. ಮನಸ್ಸನ್ನು ಆಹ್ಲಾದಗೊಳಿಸಿತು. ಇಷ್ಟು ಸೊಗಸಾಗಿ ಹಾಡಿದ ಗಾಯಕ ಮಹಾಶಯನ ಮುಖಾರವಿಂದವನ್ನು ನೋಡಬೇಕೆಂಬ ಕುತೂಹಲದಿಂದ ಮೆಲ್ಲಮೆಲ್ಲನೆ ವೇದಿಕೆಯತ್ತ ಸರಿದೆ. ಯಥಾ ವಿಧಿಯಂತೆ ಆತನ ಕಚೇರಿಯ ಬಗ್ಗೆ ನಾಲ್ಕು ಹೊಗಳಿಕೆಯ ಮಾತಾಡಿ ವಂದನಾರ್ಪಣೆ ಸಲ್ಲಿಸುವ ಕಾರ್ಯಕ್ರಮ ನಡೆದಿತ್ತು. ನಾನು ಆತನ ಮುಖದರ್ಶನಕ್ಕಾಗಿ ಮುಂದೆ ಮುಂದೆ ಸರಿಯುತ್ತಲಿದ್ದೆ. ಮಾನವ ಸಹಜವಾದ ಕುತೂಹಲ ಮನುಷ್ಯನಲ್ಲಿರುವ ಒಂದು ದೌರ್ಬಲ್ಯ. ಅವನು, ಕೊಂಬೆಯ ಮೇಲೆ ಕುಳಿತು ಹಾಡುವ ಕೋಗಿಲೆ ಹೇಗಿದೆಯೋ ನೋಡಬೇಕೆಂದು ಅದರ ಹಾಡನ್ನು ಕೇಳಿ ತೃಪ್ತಿಪಡದೆ ಅದನ್ನು ನೋಡಲು ಮರದಕೊಂಬೆ ಕೊಂಬೆಗಳನ್ನು ಶೋಧಿಸುತ್ತಾನೆ. ಓದುಗ ಕಥೆ ಓದಿ ಅಷ್ಟರಲ್ಲೇ ತೃಪ್ತಿ ಪಡದೆ, ಆ ಕಥೆಗಾರನ ಚಿತ್ರವೇನಾದರೂ ಪ್ರಕಟವಾಗಿದೆಯೋ ನೋಡೋಣ ಎಂಬ ಕುತೂಹಲದಿಂದ, ಕಥೆ ಅಚ್ಚಾಗಿರುವ ಪತ್ರಿಕೆಯ ಪುಟಗಳ ಮೇಲೆ ಕಣ್ಣಾಡಿಸುತ್ತಾನೆ.

ಕೊನೆಯಲ್ಲಿ ಗಾಯಕ ಕೃತಜ್ಞತಾಪೂರ್ವಕವಾಗಿ ಆಡುತ್ತಿದ್ದ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಆದರೆ ಆತನ ಮುಖ ಮಾತ್ರ ಸರಿಯಾಗಿ ಕಾಣುತ್ತಿರಲಿಲ್ಲ. ಅವನು ಹೇಳುತ್ತಿದ್ದ— "ನೀವು ನನ್ನ ಬಗ್ಗೆ ಆಡಿದ ಅಭಿಮಾನಪೂರ್ವಕ-ವಾದ ಮಾತುಗಳಿಗೆ ಪ್ರತಿಯಾಗಿ ಏನು ಹೇಳಬೇಕೋ ನನಗೆ ತೋಚುತ್ತಿಲ್ಲ.

"ನೀವೆಲ್ಲ ಹಿರಿಯರು. ನಿಮ್ಮ ಮುಂದೆ ನಿಂತು ನಾಲ್ಕು ಮಾತಾಡುವ ಧೈರ್ಯವೂ ನನಗಿಲ್ಲ, ಅರ್ಹತೆಯೂ ಇಲ್ಲ. ನಾನು ಇದೇ ಸಭಾಂಗಣದ ಹೊರಗೆ ಕೂತು ಹತ್ತು ವರ್ಷಗಳಕಾಲ ಇಲ್ಲಿ ನಡೆಯುತ್ತಿದ್ದ ಅನೇಕ ಕಚೇರಿಗಳನ್ನು ಆಲಿಸಿದ್ದೇನೆ. ಮೊದಲು ಸಂಗೀತವನ್ನು ಕೇಳುವುದೇ ನನಗೆ ಕಷ್ಟವಾಗಿತ್ತು. ಆದರೆ ಕ್ರಮೇಣ ನನಗೆ ಸಂಗೀತದ ಬಗ್ಗೆ ಅತೀವ ಶ್ರದ್ಧೆಯುಂಟಾಯಿತು. ಶ್ರದ್ಧೆಯಿಂದ ಇಲ್ಲಿ ಕೇಳಿದುದನ್ನು ಮನೆಯಲ್ಲಿ ಮೆಲುದನಿಯಲ್ಲಿ ಹಾಡಿಕೊಳ್ಳುತ್ತಿದ್ದೆ— ನನಗೆ ಬಂದಂತೆ. ಆ ಮೇಲೆ ಗಟ್ಟಿಯಾಗಿ ಹಾಡತೊಡಗಿದೆ. ನನ್ನ ಹಾಡುಗಾರಿಕೆ ಮನೆಯವರಿಗೆ ಅಲ್ಲದೆ ಅಕ್ಕಪಕ್ಕದವರಿಗೂ, ನನ್ನ ಇಷ್ಟ ಮಿತ್ರರಿಗೂ ಮೆಚ್ಚುಗೆಯಾಯಿತು ಆ ನಂತರ ಸಣ್ಣ-ಸಣ್ಣ ಗೋಷ್ಠಿಗಳಲ್ಲಿ ಹಾಡಲು ಆರಂಭಿಸಿದೆ. ಈಗ ನಾನೂ ಪರಿಚಿತನಾಗಿದ್ದೇನೆ. ಹೀಗೆ ಹತ್ತು ಜನರ

ಮಧ್ಯೆ ಹಾಡುವುದು ನನಗೆ ಒಳ್ಳೆಯ ಕಾಲಕ್ಷೇಪ ವಾಗಿದೆ. ಮನಸ್ಸಿಗೂ ಎಷ್ಟೋ ಸಂತೋಷ, ಸಮಾಧಾನವಾಗಿದೆ ಕೂಡ.

"ಗಾನ ಕಲಾ ಪರಿಷತ್ತಿನ ಕಾರ್ಯದರ್ಶಿಗಳು ಇಂದು ನನ್ನನ್ನು ಇಲ್ಲಿಗೆ ಕರೆಸಿ ನಿಮ್ಮೆಲ್ಲರ ಮುಂದೆ ನನ್ನಂಥ ಸಾಮಾನ್ಯ ಗಾಯಕನಿಂದ ಹಾಡಿಸಿದ್ದಾರೆ. ದಯಮಾಡಿ ನನ್ನ ಗಾಯನದಲ್ಲಿ ತಪ್ಪುಗಳಿದ್ದರೆ ಕ್ಷಮಿಸಿ. ನಾನಾರೆಂಬುದು ನಿಮಗೆ ತಿಳಿದಿರ-ಬಹುದು. ನಮ್ಮ ತಹಸೀಲ್ದಾರರಿಗೆ ಸಂಗೀತ ವೆಂದರೆ ಪ್ರಾಣ. ಕಚೇರಿಗಳಿಗೆ ಅವರು ಬರುವಾಗ ನಾನೂ (ಅವರ ಡವಾಲಿ ಸೇವಕನಾದುದರಿಂದ) ದಿನಾ ಅವರ ಬೆಂಗಾವಲಿಗೆ ಬರುತ್ತಿದ್ದೆ..." ಎಂದು ತನಗೆ ತಿಳಿದಂತೆ ಪುಟ್ಟ ಭಾಷಣ ಮಾಡಿದ.

ಆ ಗಾಯಕನ ಭಾಷಣವನ್ನು ಆಲಿಸಿದ ನನಗೆ ದಿಗ್ಭ್ರಮೆಯಾಯಿತು.

ಏನು?! ಇಂದಿನ ಗಾಯಕ-ಗಾನಕಲಾವಿದ ಅಂದಿನ ಡವಾಲಿ ಸೇವಕನೇ? ಇದು ನಿಜವೇ? ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ.

ಯಾವ ಕ್ರಮ ಶಿಕ್ಷಣವೂ ಇಲ್ಲದ ಈ ಡವಾಲಿ ವಾಲ ಹತ್ತುವರ್ಷಗಳ ಕಾಲ ಸತತವಾಗಿ ಸಂಗೀತ ಶ್ರಮಣ ಮಾಡುತ್ತ, ಅದನ್ನು ಮನೆ ಯಲ್ಲಿ ಶ್ರದ್ಧಾಸಕ್ತಿಗಳಿಂದ ಅಭ್ಯಾಸಮಾಡಿ ಕ್ರಮೇಣ ಕಚೇರಿ ಮಾಡುವಷ್ಟು ಮಟ್ಟಿಗೆ ಒಬ್ಬ ಘನ ವಿದ್ವಾಂಸನಾಗಿದ್ದಾನೆಂದರೆ ಯಾರಿಗಾದರೂ ಆಶ್ಚರ್ಯವಾಗುವ ಸಂಗತಿಯೇ. ಆದರೆ ಡವಾಲಿ ವಾಲನ ಜೊತೆಯಲ್ಲಿ ಬರುತ್ತಿದ್ದ ಅಂದಿನ ತಹಸೀಲ್ದಾರರು ಏನಾಗಿರಬಹುದು? ಅವರೂ ಉತ್ತಮ ಗಾಯಕರಾಗಿರಬೇಕು ಎಂದುಕೊಂಡೆ. ಆದರೆ ನನಗೆ ಇನ್ನೊಂದು ಆಶ್ಚರ್ಯ ಕಾದಿತ್ತು ಏಕೆಂದರೆ ಈಗ ಆ ತಹಸೀಲ್ದಾರರೇ ಎದ್ದು ನಿಂತು ಭಾಷಣ ಮಾಡತೊಡಗಿದ್ದರು: "ಮಾನ್ಯ ಸಭಾ-ಸದರೆ, ಅನಿರೀಕ್ಷಿತವಾಗಿ ಇಂದಿನ ಕಾರ್ಯಕ್ರಮ ದಲ್ಲಿ ಪಾಲ್ಗೊಳ್ಳುವ ಸದವಕಾಶ ನನಗೆ ಲಭಿಸಿದೆ. ಹಿಂದೆ ನಾನು ಈ ಊರಲ್ಲಿ ತಹಸೀಲ್ದಾರನಾಗಿ ದ್ದಾಗ, ತಪ್ಪದೆ ಈ ಸಂಗೀತ ಪರಿಷತ್ತಿನ ಕಚೇರಿ ಗಳಿಗೆ ಪ್ರತಿಭಾನುವಾರ ತಪ್ಪದೆ ಹಾಜರಾಗುತ್ತಿದ್ದೆ. ಅದಕ್ಕಾಗಿ ನನ್ನ ಪ್ರಮೋಷನ್ನನ್ನು ಕೂಡ ಕಳೆದು ಕೊಂಡು ಈ ಊರಿನಲ್ಲೇ ಉಳಿದುಬಿಟ್ಟಿದ್ದೆ. ಈಗ ರಿಟೈರ್ ಆಗಿ ಗುಂಟೂರಿನಲ್ಲಿ ನೆಲಸಿದ್ದೇನೆ. ಬೆಳಗ್ಗೆ ಯಾವುದೋ ಕೆಲಸದ ಮೇಲೆ ಇಲ್ಲಿಗೆ ಬಂದೆ. ಸಂಜೆಯ ಕಚೇರಿ ಕೇಳಿಕೊಂಡು ಹೋಗ ಬಹುದೆಂದು ನನ್ನ ಪ್ರಯಾಣ ನಿಲ್ಲಿಸಿಬಿಟ್ಟೆ. ಇಂದಿನ ಗಾಯನ ಕಚೇರಿಗೆ ಗಾಯಕರಿದ್ದಾರೆ. ಆದರೆ ಶ್ರುತಿ ಹಾಕುವವರು ಯಾರೂ ಸಿಕ್ಕಲಿಲ್ಲ ಎಂದು ಕಾರ್ಯ ನಿರ್ವಾಹಕರು ಪರದಾಡುತ್ತಿ ದ್ದಾಗ ಆ ಕೆಲಸ ನಾನು ಮಾಡುತ್ತೇನೆಂದು ಹೇಳಿ ಇಂದಿನ ಗಾಯಕನಿಗೆ ತಂಬೂರಿ ಶ್ರುತಿ ಮಿಡಿಸಿದೆ.

ನನಗೆ ಸಂಗೀತದ ಬಗ್ಗೆ ಅಪಾರ ಶ್ರದ್ಧಾಸಕ್ತಿ ಗಳಿದ್ದರೂ ಸರಸ್ವತಿದೇವಿ ನನ್ನನ್ನು ಶ್ರುತಿಯಿಂದ ಮುಂದೆ ಬರಬೇಡವೆಂದಳು. ನಾನು ನಿಮಗೆಲ್ಲ ಚಿರಪರಿಚಿತನೇ. ಪ್ರತಿ ಸಂಗೀತ ಕಚೇರಿಗೂ ತಪ್ಪದೆ ಹಾಜರಾಗುತ್ತಿದ್ದ ತಹಸೀಲ್ದಾರ ನಾನೇ. ನನ್ನ ಅದೃಷ್ಟ-ಶ್ರೋತೃವಾಗಿ ಬಂದ ನನಗೆ ಇಂದು ಶ್ರುತಿಮೀಟುವ ಸೌಭಾಗ್ಯ ಒದಗಿ ಬಂತು. ಇನ್ನೊಂದು ವಿಚಿತ್ರವೆಂದರೆ ಅಂದಿನ ನನ್ನ ಡವಾಲಿ ಸೇವಕನೇ ಇಂದು ನಿಮಗೆಲ್ಲಾ ಕರ್ಣಾನಂದವಾಗು ವಂತೆ ನಾದಸುಧೆಯನ್ನು ಉಣಬಡಿಸಿ ತನ್ನ ಉತ್ತಮ ಗಾಯನದಿಂದ ನಿಮ್ಮನ್ನು ರಂಜಿಸಿ ದ್ದಾನೆ. ಇದು ಆತನ ಅದ್ಭುತ ಸಾಧನೆ ಅಲ್ಲವೇ?"

ಅವರ ಮಾತುಗಳನ್ನು ಕೇಳಿ ಅತ್ಯಾಶ್ಚರ್ಯ ವಾಯಿತು. ಏನು! ಮಾಜಿ ತಹಸೀಲ್ದಾರರು ಶ್ರುತಿ ಮೀಟಿದರೆ? ಮಾಜಿ ಡವಾಲಿವಾಲಾ ಇಷ್ಟೊಂದು ಅದ್ಭುತವಾಗಿ, ಅಮೋಘವಾಗಿ ಇಂದಿನ ಸಂಗೀತ ಕಚೇರಿ ನಡೆಸಿದನೆ?

ಎಷ್ಟು ವಿಚಿತ್ರವಾದ ಕಥೆ ಇದು! ಇಂದು ಎಂಥ ಅದ್ಭುತ ಗಾಯನ ಕಚೇರಿ ಏರ್ಪಡಿಸಿದ್ದರು, ಸಂಗೀತ ಪರಿಷತ್ತಿನವರು ಎಂದುಕೊಂಡು ವೇದಿಕೆ ಯನ್ನಲಂಕರಿಸಿದ್ದ ನನ್ನ ಹಳೆಯ ಮಿತ್ರರನ್ನು ಮಾತಾಡಿಸಿಕೊಂಡು ಬರಬೇಕೆಂದು ಮೇಲೆದ್ದೆ. ❀

ಮಧು ವೆಂಕಾರೆಡ್ಡಿ

# ಕುರುಡಿದ್ದರೂ ಬೆಳಕು ಕಂಡವರು

ಮನಸಿದ್ದಲ್ಲಿ ಮಾರ್ಗವಿದೆ'— ಅಂಗಾಂಗದ ಯಾವ ನ್ಯೂನತೆಯೂ ಅದನ್ನು ತಡೆಯಲಾರದು. ನಾಟ್ಯಮಯೂರಿಯ ಸಾಧನೆ, ಸಾಧನ ಗುಪ್ತ ಅವರ ಸಾಹಸಗಳು ತರುಣ ಜನಾಂಗಕ್ಕೆ ಕೈಗನ್ನಡಿಯಾಗಬಲ್ಲವು. ಸಾಧನ ಗುಪ್ತರ ಕುರುಡತನ ಅವರು ಕಾಯಿದೆ ಪರಿಣತರಾಗಲು ಅಡ್ಡಿಯಾಗಲಿಲ್ಲ, ಕಳೆದ ವರ್ಷ ಪಶ್ಚಿಮ ಬಂಗಾಲ ಸರಕಾರದಲ್ಲಿ ಅವರು ಅಡ್ವೊಕೇಟ್ ಜನರಲ್‌ರಾಗಿ ನೇಮಕವಾದದ್ದೇ ಈ ಮಾತಿಗೆ ಸಾಕ್ಷಿ. ಇದೊಂದು ಅಪೂರ್ವ ಸಾಧನೆ. ಒರಿಗಣ್ಣಿಗಿಂತ ಒಳಗಣ್ಣು ಅದ್ಭುತವನ್ನು ಬಲ್ಲದೆಂಬುದಕ್ಕೆ ಜೀವಂತ ಉದಾಹರಣೆ.

ಈಗಿನ ಬಾಂಗ್ಲಾದೇಶದ ರಾಜಧಾನಿ ಢಾಕಾ ಅವಿಭಾಜಿತ ಬಂಗಾಲದಲ್ಲಿ ಒಂದು ಜಿಲ್ಲೆಯ ಮುಖ್ಯಸ್ಥಳವಾಗಿತ್ತು. ಜೆ. ಸಿ. ಗುಪ್ತ ಅಲ್ಲಿಯ ಪ್ರತಿಭಾವಂತ ವಕೀಲರು, ನಿಷ್ಠಾವಂತ ಕಾಂಗ್ರೆಸ್ಸಿಗರು. ೧೯೧೭ ನವೆಂಬರ್ ಹನ್ನೆರಡು ಸಾಧನ ಗುಪ್ತರ ಜನನವಾಯಿತು. ಕೇವಲ ಹದಿನಾರು ತಿಂಗಳ ಕೂಸಿದ್ದಾಗ ಮೈಲಿಬೇನೆಗೆ ತುತ್ತಾಗಿ ಕಣ್ಣು ಕಳೆದುಕೊಂಡರು. ಮುಂದಿನ ಅವರ ಇಡೀ ಜೀವನ ಕುರುಡುತನದಲ್ಲಿಯೇ. ಸಾಮಾನ್ಯರಾಗಿದ್ದರೆ ಅಮೂಲ್ಯ ಜೀವನವನ್ನು ಅಂಧಃಕಾರದಲ್ಲಿ ಕಳೆಯುತ್ತಿದ್ದರೇನೊ!

ಅವರು ಐದು ವರ್ಷದ ಮಗುವಿದ್ದಾಗ ತಮ್ಮ ತಂದೆಯನ್ನು ಕೇಳಿದರು "ಅಪ್ಪಾ ನಾನೂ ನಿಮ್ಮಂತೆ ಕಾಯಿದೆ ಅಭ್ಯಾಸ ಮಾಡಬೇಕೆಂದಿದ್ದೇನೆ, ನನಗೆ ನಿಮ್ಮ ಪುಸ್ತಕಗಳನ್ನು ಓದಿ ಹೇಳುವಿರಾ?" ತಂದೆ ಕಣ್ಣೀರು ಒರೆಸಿಕೊಂಡರು. "ಆಗಲಿ ಮಗು, ಹಾಗೇ ಆಗಲಿ" ಎಂದರು. ಮುಂದೆ ೧೯೨೩ ರಲ್ಲಿ ಡಾಕಾದಿಂದ ಕಲಕತ್ತೆಗೆ ಬಂದು ಅಲ್ಲಿಯ ಉಚ್ಚನ್ಯಾಯಾಲಯದಲ್ಲಿ ತಮ್ಮ ವಕೀಲಿ ವೃತ್ತಿ ಆರಂಭಿಸಿದರು. ಅದೇ ವರ್ಷ ತಮ್ಮ ಈ ಕುರುಡು ಮಗನನ್ನು ಬೆಹಲಾ ಕುರುಡರ ಶಾಲೆಗೆ ಸೇರಿದರು.

ಮುಂದಿನ ಪ್ರಗತಿ ಅಚ್ಚರಿಯುಂಟುಮಾಡು ವಂತಹದು. ಈ ಕುರುಡು ಮಗು ೧೯೩೪ ರಲ್ಲಿ ಮಾಧ್ಯಮಿಕ ಶಾಲಾ ಪರೀಕ್ಷೆಯಲ್ಲಿ ಶ್ರೇಷ್ಠ ದರ್ಜೆಯಲ್ಲಿ ಪಾಸಾಯಿತು. ನಾಲ್ಕು ವರ್ಷಗಳ ನಂತರ ಪ್ರೆಸಿಡೆನ್ಸಿ ಕಾಲೇಜಿನಿಂದ ಅರ್ಥಶಾಸ್ತ್ರ ವನ್ನು ಆಯ್ಕೆ ಮಾಡಿಕೊಂಡು ಎರಡನೇ ವರ್ಗ ದಲ್ಲಿ ಸ್ನಾತಕ ಪದವಿ ಪಡೆದರು. ನಂತರ ಅರ್ಥ ಶಾಸ್ತ್ರದಲ್ಲಿ ಪ್ರಥಮ ದರ್ಜೆಯಲ್ಲಿ ಎಂ. ಎ. ಪದವಿ ಪಡೆದು, ತಮ್ಮ ಬಾಲ್ಯದ ಪ್ರಬಲ ಇಚ್ಛೆ ಯಾಗಿದ್ದ ಕಾಯಿದೆ ಅಭ್ಯಾಸವನ್ನು ಮುಂದು ವರಿಸಿದರು. ಕಾಯದೆ ಪದವಿಯನ್ನು ಮೊದಲ ನೆಯ ದರ್ಜೆಯಲ್ಲಿ ಪಡೆದು ೧೯೪೨ರಲ್ಲಿ ಕಲಕತ್ತಾ ಹೈಕೋರ್ಟಿನಲ್ಲಿ ವಕೀಲಿ ವೃತ್ತಿಯನ್ನಾ ರಂಭಿಸಿದರು. ಐದು ವರ್ಷಗಳ ನಂತರ ಮಿಡ್ಲ್ ಟೆಂಪಲ್ ಬಾರಿನಿಂದ ಬ್ಯಾರಿಸ್ಟರರಾಗಿ ಭಾರತಕ್ಕೆ ಮರಳಿ ತಮ್ಮ ನ್ಯಾಯವಾದಿ ವೃತ್ತಿಯನ್ನು ಮುಂದುವರಿಸಿದರು. ೧೯೫೨ರ ಪಾರ್ಲಿಮೆಂಟ್ ಚುನಾವಣೆಗೆ ಕಮ್ಯುನಿಸ್ಟ್ ಪಕ್ಷದ ಪರವಾಗಿ ಸ್ಪರ್ಧಿಸಿ ಸೋಲನ್ನನುಭವಿಸಿದರು. ಆದರೆ ಮರುವರ್ಷ ನಡೆದ ಉಪಚುನಾವಣೆಯಲ್ಲಿ ಜಯಗಳಿಸಿ ಪಾರ್ಲಿಮೆಂಟಿಗೆ ಆಯ್ಕೆಯಾದರು. ೧೯೫೭ರ ಚುನಾವಣೆಯಲ್ಲಿ ಸಹ ಪಾರ್ಲಿಮೆಂಟ್ ಮೆಂಬರರಾದರು. ಮುಂದೆ ರಾಜ್ಯ ರಾಜಕೀಯಕ್ಕೆ ಮರಳಿ ಕಾಲಘಾಟ ಮತ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆಯಾದರು.

ಸಾಧನ ಗುಪ್ತ ಅವರದು ಮೌಲ್ಯಾಧರಿತ ರಾಜಕೀಯ. ಅವರೆಂದೂ ಅಧಿಕಾರದ ಬೆನ್ನು ಹತ್ತ ಲಿಲ್ಲ. ಅಧಿಕಾರ ಲಾಲಸೆಗಾಗಿ ಸಿದ್ಧಾಂತಗಳನ್ನು ತ್ಯಜಿಸಲಿಲ್ಲ. ತಂದೆ ಕಟ್ಟಾ ಕಾಂಗ್ರೆಸ್ಸಿಗರಾಗಿದ್ದರೂ ರಾಜಕೀಯದಲ್ಲಿ ತಂದೆಯ ಮಾರ್ಗ ತುಳಿಯಲಿಲ್ಲ. ಇನ್ನೂ ವಿದ್ಯಾರ್ಥಿದೆಸೆಯಲ್ಲಿರುವಾಗಲೇ ಅಂದರೆ ೧೯೩೯ ರಿಂದಲೇ ಅವರು ಕಮ್ಯುನಿಸ್ಟ್ ತತ್ವ ಗಳಲ್ಲಿ ನಂಬಿಗೆಯಿರಿಸಿ ಪಕ್ಷದ ಏಳ್ಗೆಗಾಗಿ ಶ್ರಮಿಸಿ ದರು. ಆ ಕಾಲದಲ್ಲಿ ಕಮ್ಯುನಿಸ್ಟ್ ಪಕ್ಷ ಅಧಿ ಕಾರಕ್ಕೆ ಬರುವುದು ಅಸಂಭವದ ಮಾತಾಗಿತ್ತು, ಅಷ್ಟೇ ಅಲ್ಲ ಊಹೆಗೆ ನಿಲುಕದ ಮಾತೇ ಆಗಿತ್ತು. ತಂದೆ ಸತತ ಮೂವತ್ತು ವರ್ಷ ಕಾಂಗ್ರೆಸ್ ಟಿಕೆಟ್ಟಿನಿಂದ ವಿಧಾನ ಸಭೆಯ ಮೆಂಬರರಾಗಿದ್ದ ರಲ್ಲದೆ ರಾಜಕೀಯದಲ್ಲಿ ಪ್ರಬಲ ವ್ಯಕ್ತಿಯಾಗಿ ದ್ದರು. ಸಾಧನ ಗುಪ್ತ ತಂದೆಯ ಪ್ರಭಾವದಿಂದ ಮುಂದುವರಿಯಲಿಲ್ಲ. ತಮ್ಮ ಪ್ರಾಮಾಣಿಕ ತತ್ವಗಳಲ್ಲಿ ನಂಬಿಗೆಯಿರಿಸಿ ಕಮ್ಯುನಿಸ್ಟ್ ಪಕ್ಷ ದಲ್ಲಿಯೇ ಮುಂದುವರಿದರು. ೧೯೬೭ರಲ್ಲಿ ಕಾಲಘಾಟ ಅಸೆಂಬ್ಲಿ ಮತಕ್ಷೇತ್ರದಿಂದ ಆಗಿನ ಪ್ರಭಾವಿ ಕಾಂಗ್ರೆಸ್ ಉಮೇದುವಾರ ಬಿವಾ ಮಿತ್ರಾರನ್ನು ೬೦೦೦ ಮತದ ಅಂತರದಿಂದ ಸೋಲಿಸಿದರು. ಅವರ ರಾಜಕೀಯ ಮಾರ್ಗ ತಂದೆ ಮಕ್ಕಳ ಮಧುರ ಬಾಂಧವ್ಯಕ್ಕೆ ಚ್ಯುತಿ ತರಲಿಲ್ಲ.



"ಸದ್ಯ ಮನೆಗೆ ಬರುವ ನೆಂಟರಿಗೆ ಮಾತ್ರ 'ಬರ' ಇಲ್ಲ ಓಬಣ್ಣಾ...!"

ಸಾಧನ ಗುಪ್ತರ ಈ ರಾಜಕೀಯ ಜಯಗಳಿಗಿಂತ ವಕೀಲೀ ವೃತ್ತಿಯಲ್ಲಿ ಅವರು ಸಾಧಿಸಿರುವ ಮೇಲ್ಮೆ ಆಶ್ಚರ್ಯಕರವಾದುದು. ಓರ್ವ ಕಣ್ಣಿಲ್ಲದ ವ್ಯಕ್ತಿ ಮಹತ್ವದ ಮೊಕದ್ದಮೆಗಳಲ್ಲಿ ಪ್ರತಿಭೆ ತೋರಿದ್ದಾರೆಂಬುದು ಅಭಿಮಾನದ ಮಾತು. ಸರಕಾರದ ವಿರುದ್ಧ ಶಿವನಾಥ ಬ್ಯಾನರ್ಜಿ — ಈ ಮೊಕದ್ದಮೆಯಲ್ಲಿ ಅಂದರೆ ಹೇಬಿಯಸ್ ಕಾರ್ಪಸ್ ಕೇಸಿನಲ್ಲಿ ಅವರು ಕಲಕತ್ತಾ ಉಚ್ಚ ನ್ಯಾಯಾಲಯದಲ್ಲಿ ನಂತರ ಫೆಡರಲ್ ಕೋರ್ಟಿನಲ್ಲಿ ಹೋರಾಡಿ ಜಯಗಳಿಸಿದರು. ೧೯೪೯ರಲ್ಲಿ ಪೋಲೀಸರಿಂದ ಕೊಲ್ಲಲ್ಪಟ್ಟ; ಬೋಟರಘಾರ್ ಗೋಳಿಬಾರದಲ್ಲಿ ಮಡಿದ ನಾಲ್ವರು ಮಹಿಳಾ ಕಾರ್ಯಕರ್ತೆಯರ ಮೊಕದ್ದಮೆಯಲ್ಲಿ ಪೋಲೀಸರ ಈ ಕೃತಿ ಕೊಲೆಯೆಂದು ಸಾಬೀತು ಪಡಿಸುವಲ್ಲಿ ಯಶಸ್ವಿಯಾದರು. ರೇಲ್ವೆ ಸಂಘಿನ ಅನೇಕ ಖಟ್ಲೆಗಳಲ್ಲಿ ಭಾಗವಹಿಸಿದರು. ಅವರ ಕ್ಷೇತ್ರ ಬಂಗಾಲಕ್ಕಷ್ಟೇ ಮೀಸಲಾಗಿರದೆ ಓಡಿಸಾ, ಮಧ್ಯಪ್ರದೇಶ ಮಹಾರಾಷ್ಟ್ರಕ್ಕೂ ವಿಸ್ತರಿಸಿತ್ತು. ೧೯೭೭ರಲ್ಲಿ ಕಮ್ಯುನಿಸ್ಟ್ ಸರಕಾರ ಬಂಗಾಲದಲ್ಲಿ ಅಧಿಕಾರಕ್ಕೆ ಬಂದಾಗ ಸಾಧನ ಗುಪ್ತ ಅವರನ್ನು ಹೆಚ್ಚುವರಿ ಅಡ್ವೋಕೇಟ್ ಜನರಲ್ ಆಗಿ ನೇಮಿಸಿತು. ಕಳೆದ ವರ್ಷ ಅಡ್ವೋಕೇಟ್ ಜನರಲ್ ಹುದ್ದೆ ತೆರವಾದಾಗ ಬಂಗಾಲ ಸರಕಾರ ಅವರಿಗೆ ಆ ಹುದ್ದೆಯನ್ನು ಕೊಟ್ಟಿತು. ಕುರುಡ ವಕೀಲರೊಬ್ಬರು ಇಂಥ ಜವಾಬ್ದಾರಿ ದೊಡ್ಡ ಹುದ್ದೆಗೇರಿರುವ ಉದಾಹರಣೆ ಬಹು ವಿರಳ. ಅವರ ಪತ್ನಿ ಮಂಜರಿ ಕೂಡ ನ್ಯಾಯವಾದಿ. ಅವರೂ ತಮ್ಮ ಪತಿಯ ನೆರಳಾಗಿ ನ್ಯಾಯಾಲಯದಲ್ಲಿ, ಚುನಾವಣೆ ಪ್ರಚಾರದಲ್ಲಿ ಸಹಾಯ ಸಲ್ಲಿಸು-

ಪ್ತ ಅವರ ಸಾಧನೆಯ
ರೇ ಹೇಳುವಂತೆ– "ನಾನು

ಯಾವಾಗಲೂ ನನ್ನ ಕೆಲಸದಲ್ಲಿ ಪ್ರತಿಭೆ ತೋರಿಸಲು ಇಷ್ಟಪಡುತ್ತೇನೆ. ಯಾವುದೇ ರೀತಿಯ ಅಂಗವೈಕಲ್ಯವಾಗಲಿ, ಮನೋವಿಕಾರವಾಗಲಿ ಸಮಾಜದಲ್ಲಿ ಹೊಂದಿಕೊಳ್ಳುವಲ್ಲಿ ಮಾತ್ರ ತೊಂದರೆ ಅನುಭವಿಸಬೇಕಾಗುತ್ತದೆ. ಒಮ್ಮೆ ಇಂಥವರು ಸಮಾಜದೊಡನೆ ಹೊಂದಿಕೊಂಡರೆ ಅವರಿಗೆ ಅವಕಾಶ ದೊರೆತಲ್ಲಿ ಅವರೂ ಅಸಾಧಾರಣ ಪ್ರತಿಭೆ ತೋರಬಲ್ಲರು."

ಗುಪ್ತರಿಗೀಗ ಎಪ್ಪತ್ತು ವರ್ಷ. ಅವರೆಂದೂ ಯಾವ ಅಧಿಕಾರವನ್ನು ಹಿಂದೆಯೂ ಬಯಸಿರಲಿಲ್ಲ ಮುಂದೂ ಆ ಬಯಕೆ ಇಲ್ಲ. ಅಂಥ ಮೋಹ ಅವರಲ್ಲಿಲ್ಲ. ಅವರೊಬ್ಬ ನಿಷ್ಠಾವಂತ ಕಾರ್ಯಕರ್ತ. ನಿಷ್ಠೆಗೆ ಇಂದಿಲ್ಲ ನಾಳೆ ಫಲ ದೊರೆಯುವುದೆಂಬುದಕ್ಕೆ ಸಾಧನ ಗುಪ್ತರೇ ಸಾಕ್ಷಿ. ಅವರ ಪತ್ನಿ ಹಾಗೂ ಮಕ್ಕಳಿಗೆ ಅವರಲ್ಲಿ ಅಪಾರ ಗೌರವ. ಅವರ ಶ್ರದ್ಧೆಯನ್ನು ಅವರು ಮೆಚ್ಚಿಕೊಂಡಿದ್ದಾರೆ. ಕುರುಡರಾದರೂ ಕಣ್ಣಿದ್ದವರಿಗಿಂತ ಹೆಚ್ಚಾಗಿ ಶ್ರಮವಹಿಸಿ ಇಂದಿಗೂ ಅಭ್ಯಾಸ ಮಾಡುತ್ತಿದ್ದಾರೆ.

ಅವರು ಇಂಡಿಯನ್ ಟ್ರೇಡ್ ಯುನಿಯನ್ ಕಾಂಗ್ರೆಸ್ ಅಧ್ಯಕ್ಷರು. ಶ್ರಮಜೀವಿಗಳ ಏಳ್ಗೆಗಾಗಿ ಹೋರಾಡುತ್ತಿದ್ದಾರೆ. ಪ್ರಜಾಪ್ರಭುತ್ವದಲ್ಲಿ ಅವರಿಗೆ ನಂಬಿಕೆ. ಅಂತೆಯೇ ಅವರು ಮೀಸಾದಂಥ ಕಾಯಿದೆಗಳ ವಿರೋಧಿ. ಈ ಕೇಂದ್ರ ಕಾಯಿದೆಗಳ ಅಮಲು ಬಜಾವಣೆಗೆ ಬಂಗಾಲದಲ್ಲಿ ವಿರೋಧವಿದೆ. ಇತ್ತೀಚಿನ ಇಸ್ಲಾಮ್ ವಿವಾಹ ವಿಚ್ಛೇದಿತ—ಮಹಿಳಾ ರಕ್ಷಣಾ ಕಾನೂನು ಪ್ರಗತಿಗಾಮಿಯಾಗಿದ್ದು ಸಂವಿಧಾನ ವಿರೋಧಿಯಾಗಿದೆ ಎನ್ನುತ್ತಾರೆ.

ನಿರಾಶೆಯಿಂದ ಮಂಕಾಗಿರುವ ನಮ್ಮ ತರುಣ ಪೀಳಿಗೆಗೆ ಸಾಧನ ಗುಪ್ತರ ಜೀವನ ದಾರಿದೀಪವಾಗಿದೆ. ✡

(ಕೃಪೆ: ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ)



## ಗ್ರಾಮಸಭೆ ಮತ್ತು ಜಿಲ್ಲಾ ಪರಿಷತ್ತುಗಳನ್ನು ರಚಿಸಿರುವ ಕರ್ನಾಟಕ ರಾಜ್ಯ ಸರಕಾರ ಜನತೆಗೆ ಅಧಿಕಾರ ನೀಡುವ ಹೊಸ ಹೆಜ್ಜೆಯ ಮೂಲಕ ಸಂವಿಧಾನದ ಕನಸುಗಳಲ್ಲೊಂದನ್ನು ನನಸಾಗಿಸಿದೆ

೧೯೮೩ ರಲ್ಲಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಹೊಸ ಸರಕಾರ ಜನತೆಯ ಆಶೋತ್ತರಗಳನ್ನು ಈಡೇರಿಸಲು ಕಂಕಣಬದ್ಧವಾಯಿತು. ಜನಸಮುದಾಯದ ಜೀವನ ಮಟ್ಟ ಸುಧಾರಿಸಿ ಸಮೃದ್ಧಿ ಮತ್ತು ಸಂತಸವನ್ನು ತಂದುಕೊಡುವ ದಿಸೆಯಲ್ಲಿ ಹೊಸ ಹೊಸ ಮಾರ್ಗಗಳನ್ನು ಕಂಡುಕೊಂಡಿತು.

**ಜನತೆಗೆ ಅಧಿಕಾರ:–** ಪ್ರಜಾಪ್ರಭುತ್ವದಲ್ಲಿ "ಪ್ರಜೆಯೇ ಪ್ರಭು" ಎಂಬ ತತ್ವದಲ್ಲಿ ಅಚಲವಾದ ನಂಬಿಕೆ ಇಟ್ಟಿರುವ ಕರ್ನಾಟಕ ಸರಕಾರ, ಪ್ರಜಾಪ್ರಭುತ್ವ ಅರ್ಥಪೂರ್ಣವಾಗಬೇಕಾದರೆ ಆಡಳಿತದಲ್ಲಿ ಜನತೆಯ ಸಕ್ರಿಯ ಪಾತ್ರ ಅತ್ಯಂತ ಅಗತ್ಯ ಎಂಬುದನ್ನು ಮನಗಂಡಿದೆ.

ಇದಕ್ಕೆ 'ಮುಖ್ಯವಾಗಿ ಬೇಕಾದದ್ದು ಅಧಿಕಾರ ವಿಕೇಂದ್ರೀಕರಣ. ಆದ್ದರಿಂದಲೇ ಪಂಚಾಯತಿ ರಾಜ್ಯ ಸಂಸ್ಥೆಗಳನ್ನು ರಚಿಸಿ, ಗ್ರಾಮೀಣ ಪ್ರದೇಶಗಳ ಸಮಗ್ರ ಅಭಿವೃದ್ಧಿ ಕಾರ್ಯಗಳಲ್ಲಿ ಜನತೆ ನೇರ ವಾಗಿ ಪಾಲುಗೊಳ್ಳುವ ವ್ಯಾಪಕ ಅವಕಾಶಗಳನ್ನು ಕಲ್ಪಿಸಿದೆ.

ಈ ಗುರಿ ಸಾಧನೆಗಾಗಿ ಎರಡು ಪ್ರಮುಖ ಚುನಾವಣಾ ಸುಧಾರಣೆಗಳನ್ನು ಕಾರ್ಯಗತಗೊಳಿಸ ಲಾಗಿದೆ. ಮೊದಲನೆಯದು ಯುವ ಸಮೂಹ ಸಾರ್ವಜನಿಕ ವಿಚಾರಗಳಲ್ಲಿ ತಮ್ಮ ಅಭಿ ಮತ ವ್ಯಕ್ತ ಪಡಿಸಲು ಅನುಕೂಲವಾಗುವಂತೆ ಮತದಾನದ ವಯೋಮಿತಿಯನ್ನು ೧೮ ವರ್ಷಗಳಿಗೆ ಇಳಿಸಿರುವುದು, ಎರಡನೆಯದು; ಈ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ ೨೦ ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸ ಲಾಗಿಟ್ಟಿರುವುದು. ಇದರಿಂದ ಮಹಿಳೆಯರು ರಾಷ್ಟ್ರಾಭಿವೃದ್ಧಿ ಕಾರ್ಯಗಳಲ್ಲಿ ಹೆಚ್ಚಿನ ಪಾತ್ರ ವಹಿಸಲು ನೆರವಾಗಿದೆ.

ಈಗ ಪಂಚಾಯತಿ ರಾಜ್ಯ ವ್ಯವಸ್ಥೆಯ ಮೊದಲ ವರ್ಷವೇ ಜಿಲ್ಲಾ ಪರಿಷತ್ತುಗಳು ಮತ್ತು ಮಂಡಲ ಪಂಚಾಯತಿಗಳಿಗೆ ೯೦೦ ಕೋಟಿ ರೂಪಾಯಿಗಳನ್ನು ಸರಕಾರ ನೀಡುತ್ತದೆ.

ಪಂಚಾಯತಿ ರಾಜ್ಯ ವ್ಯವಸ್ಥೆಯ ಅನುಷ್ಠಾನದಿಂದ ರಾಜ್ಯದಲ್ಲಿ ೨೪೬೯ ಮಂಡಲ ಪಂಚಾಯತಿ ಗಳು ಮತ್ತು ಜಿಲ್ಲಾ ಪರಿಷತ್ತುಗಳು ಅಸ್ತಿತ್ವಕ್ಕೆ ಬಂದಿವೆ.

ಈ ಸಂಸ್ಥೆಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಪ್ರದೇಶದ ಪ್ರಗತಿಪರ ಕಾರ್ಯಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಹಿರಿಯ ಹೊಣೆ ಹೊತ್ತಿವೆ. ಈ ಮಂಡಲ ಪಂಚಾಯತಿಗಳು ಮತ್ತು ಜಿಲ್ಲಾ ಪರಿಷತ್ತುಗಳೇ ನಿಜವಾದ ಅರ್ಥದಲ್ಲಿ ಅಭಿವೃದ್ಧಿ ಕಾರ್ಯ ನಿರ್ವಹಿಸುವ ಮೂಲ ಘಟಕಗಳು.

ಪ್ರಥಮ ಬಾರಿಗೆ ಸಮನಾದ ಪ್ರಾಥಮಿಕ ಹಂತದಿಂದ ಸುಮಾರು ೫೬,೦೦೦; ಪ್ರಜಾ ಪ್ರತಿನಿಧಿ ಗಳು ಆಯ್ಕೆಯಾಗಿದ್ದಾರೆ. ಇವರಲ್ಲಿ ೨೯,೦೫೧ ಜನಸಾಮಾನ್ಯ ವರ್ಗದ ಪ್ರತಿನಿಧಿಗಳು ೧೧೮೮೭ ಜನ ಪರಿಶಿಷ್ಟ ಜನಾಂಗದ ಪ್ರತಿನಿಧಿಗಳು ಹಾಗೂ ೧೪೩೫೭ ಮಹಿಳಾ ಪ್ರತಿನಿಧಿಗಳಿದ್ದಾರೆ. ಮಹಿಳೆಯರಲ್ಲಿ ೨೪೬೯ ಜನ ಪರಿಶಿಷ್ಟ ಜನಾಂಗದ ಪ್ರತಿನಿಧಿಗಳು. ಇವರ ಜೊತೆಗೆ ಜಿಲ್ಲಾ ಪರಿಷತ್ತುಗಳಿಗೆ ೮೮೭ ಸದಸ್ಯರು ಆಯ್ಕೆಯಾಗಿದ್ದಾರೆ.

೧೯೮೭ರ ಜನವರಿ ೨ ಮತ್ತು ೨೦ರಂದು ನಡೆದ ಚರಿತ್ರಾರ್ಹ ಚುನಾವಣೆಗಳಲ್ಲಿ ೧,೬೨,೧೮,೧೭೭ ಜನ ಮತದಾರರು ಮತ ಚಲಾಯಿಸಿ ತಮ್ಮ ಪಕ್ವ ಅಭಿಮತ ವ್ಯಕ್ತಪಡಿಸಿದ್ದಾರೆ.

ಪ್ರಜಾಪ್ರಭುತ್ವದ ಮೂಲ ಈ ಹೆಮ್ಮೆಯ ನಾಡಿನ ಮಣ್ಣಿನ ಮಕ್ಕಳಲ್ಲಿ ಅಡಗಿದೆ ಎಂಬುದನ್ನು ಋಜುಪಡಿಸುವ ಕರ್ನಾಟಕದ ಜನಸಮುದಾಯ ನಿಜಕ್ಕೂ ಅಭಿನಂದನಾರ್ಹರು.

ನಿ.ವಾ.ಪ್ರ. 663/86 **ಕರ್ನಾಟಕ ವಾರ್ತೆ**

# ಪರಿಧಿ

ಗೋವಿಂದಮೂರ್ತಿ ದೇಸಾಯಿ

ಸೂರ್ಯ ಆದೇ ತಾನೇ ಅಸ್ತಂಗತನಾಗಿದ್ದ. ಕತ್ತಲು ಅಂಬೇಗಾಲಿಕ್ಕುತ್ತ ಬರಹತ್ತಿತ್ತು. ಯುದ್ಧ ಅಂದಿನ ದಿವಸದ ಮಟ್ಟಿಗೆ ನಿಂತಂತಾಗಿತ್ತು.

ಆಗೊಬ್ಬ ಅರಬ ಸೈನಿಕನು ಕೈಯಲ್ಲಿ ಜಲಪಾತ್ರೆಯೊಂದನ್ನು ಹಿಡಿದುಕೊಂಡು ತನ್ನ ಡೇರೆಯಿಂದ ಧಾವಿಸಿ ಬರಹತ್ತಿದ್ದನು.

ಕಾವಲಿದ್ದ ಇನ್ನೊಬ್ಬ ಅರಬ ಸೈನಿಕ ಅವನನ್ನು ತಡೆದನು.

"ಇಷ್ಟು ಆತುರರಿಂದ ಅದೆಲ್ಲಿಗೆ ಹೊರಟಿರುವಿ?"

"ರಣ ಭೂಮಿಯ ಒಳಗೆ"

"ಇದೇನು, ಇಂತಹ ಅಪರಾತ್ರಿಯಲ್ಲಿ...?"

"ಹೌದು. ನನ್ನ ಸೋದರನೊಬ್ಬ ಯುದ್ಧದಲ್ಲಿ ಗಾಯಗೊಂಡು ಬಾಯಾರಿ ನರಳುತ್ತ ಬಿದ್ದಿರಬೇಕು. ಅವನಿಗೆ ನೀರನ್ನು ಕೊಡಲು ನಡೆದಿದ್ದೇನೆ."

"ಬೇಗ ಹೋಗು. ಅವನು ಬದುಕಿರಲೆಂದು ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ."

ಅರಬ ಮತ್ತು ರೋಮನ್ನರ ಮಧ್ಯ ಘನ ಘೋರ ಯುದ್ಧವು ನಡೆದಿತ್ತು. ಹಗಲಿಡಿ ಯುದ್ಧ ಮಾಡಿ ಸಂಜೆಗೆ ಯುದ್ಧವನ್ನು ನಿಲ್ಲಿಸಲಾಗುತ್ತಿತ್ತು. ಮತ್ತೆ ಮರುದಿವಸ ಸೂರ್ಯೋದಯವಾದೊಡನೆ ರಣರಂಗದಲ್ಲಿಯ ಶವಗಳನ್ನು ಹಾಗೂ ಸಾಯಲಾಗಿರುವ ಗಾಯಾಳುಗಳನ್ನು ಅತ್ತ ಸರಿಸಿ ಯುದ್ಧವನ್ನು ಪ್ರಾರಂಭಿಸಲಾಗುತ್ತಿತ್ತು.

ಇಂತಹುದೇ ಒಂದು ರಾತ್ರಿಯಲ್ಲಿ ಅರಬ ಸೈನಿಕನು ತನ್ನ ಸಹೋದರನಿಗೆ ನೀರನ್ನು ಕೊಡಲು ಬಂದಿದ್ದನು. ನೀರಿನ ಪಾತ್ರೆಯನ್ನು ಹಿಡಿದುಕೊಂಡು ತನ್ನಣ್ಣನನ್ನು ಅವನು ಶೋಧಿಸಹತ್ತಿದನು. ಕೊನೆಗೊಮ್ಮೆ ನರಳುತ್ತ ಬಿದ್ದ ಅವರಣ್ಣನು ಸಿಕ್ಕನು.

"ನೀರು...... ನೀರು......" ಎಂದು ನರಳಹತ್ತಿದ್ದನು.

ತಮ್ಮನಿಗೆ ಸಮಾಧಾನವಾಯಿತು. ಅಣ್ಣನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ನೀರಿನ ಪಾತ್ರೆಯನ್ನು ಕೈಗೆತ್ತಿಕೊಂಡನು. ಆದರೆ ಅಷ್ಟರಲ್ಲಿ ಅವನ ಅಧಿಕಾರಿಯೊಬ್ಬನು ಆರ್ತ ಧ್ವನಿಯಿಂದ 'ನೀರು ನೀರು' ಎಂದು ಒಂದೇ

ಸಮನೇ ಕಾತರಿಸಹತ್ತಿದ್ದನು. ಅದನ್ನು ಕೇಳಿದ ಅಣ್ಣನು "ನನಗಿಂತಲೂ ಗಾಯಗೊಂಡ ಆ ಅಧಿಕಾರಿಗೆ ನೀರಿನ ಅವಶ್ಯಕತೆ ಹೆಚ್ಚಿದ್ದಂತೆ ಕಾಣುತ್ತದೆ, ಮೊದಲು ಅವರಿಗೆ ಕುಡಿಸು" ಎಂದನು.

ಆ ಅರಬ ಸೈನಿಕನು ಜಲಪಾತ್ರೆಯನ್ನೆತ್ತಿ-ಕೊಂಡು ನರಳುವ ಆ ಆರ್ತಧ್ವನಿಯತ್ತ ಧಾವಿ-ಸಿದನು. ಹೆಣಗಳ ಮಧ್ಯದಿಂದ ಆ ಗಾಯ-ಗೊಂಡ ಅಧಿಕಾರಿಯನ್ನು ಹೊರಕ್ಕೆಳೆದು ಅವನ ಮುಖವನ್ನು ಒರೆಸಿ. ಕೈಗೆ ನೀರಿನ ಪಾತ್ರೆ-ಯನ್ನು ತೆಗೆದುಕೊಂಡನು. ಇನ್ನೇನು ಆ ಅಧಿಕಾರಿಯ ತುಟಿಗೆ ನೀರು ಬೀಳುವದೆನ್ನು-ವಾಗ, ಇನ್ನೊಂದು ಆರ್ತಧ್ವನಿ ನೀರಿಗಾಗಿ ಚಡಪಡಿಸಹತ್ತಿತ್ತು. ಅದನ್ನು ಕೇಳಿದ ಆ ಸೈನ್ಯಾಧಿಕಾರಿ "...ನನಗಿಂತಲೂ ಈಗ ನರಳುತ್ತ ಬಿದ್ದಿರುವ ಆ ಸೈನಿಕನಿಗೆ ನೀರಿನ ಅವಶ್ಯಕತೆ ಹೆಚ್ಚಿದ್ದಂತೆ ಕಾಣುತ್ತದೆ. ಮೊದಲು ಅವನಿಗೆ ನೀರನ್ನು ಕೊಟ್ಟು ಬಾ" ಎಂದನು. ಆ ಅರಬ ಸೈನಿಕನು ಆ ಆರ್ತಧ್ವನಿಯ ಹತ್ತಿರ ಹೋಗಿ ಆ ಗಾಯಗೊಂಡ ಸೈನಿಕನನ್ನು ಹೊರಕ್ಕೆಳೆದನು. ಅವನ ತುಟಿಗಳನ್ನು ಒರೆಸಿದನು. ಆದರೆ ಅಷ್ಟರಲ್ಲಿ ಅವನು ತನ್ನ ಇಹಲೋಕ ಯಾತ್ರೆಗೆ ಹೊರಟೇ ಹೋದನು. ಅವನ ತುಟಿಗಳನ್ನು ನೋಡಿದರೆ, ನಗುವಂತಿದ್ದವು. ಮುಖದಲ್ಲಿ ಸಮಾಧಾನದ ಕಳೆಯಿತ್ತು. ಅರಬ ಸೈನಿಕನು ಧಾವಿಸುತ್ತ ಸೈನ್ಯಾಧಿಕಾರಿಯ ಹತ್ತಿರ ಬಂದನು. ಅಷ್ಟರಲ್ಲಿ ಅವನೂ ಕೊನೆಯುಸಿರನ್ನೆಳೆದಿದ್ದನು. ಅವನ ಮುಖದಲ್ಲಿ ಪ್ರಶಾಂತ ಕಳೆಯಿತ್ತು. ಅದನ್ನು ನೋಡಿ ಅರಬ ಸೈನಿಕನು ನೊಂದು, ಸೈನ್ಯಾಧಿಕಾರಿಯ ಶವಕ್ಕೆ ನಮಸ್ಕರಿಸಿ, ಮುಖದ ಮೇಲೊಂದು ವಸ್ತ್ರವನ್ನು ಎಳೆದು, ಗಾಯಗೊಂಡ ಅಣ್ಣನ ಹತ್ತಿರ ಬಂದನು. ದುರ್ದೈವದಿಂದ ಅವನ ಅಣ್ಣನೂ ಅದಾಗಲೇ ಸ್ವರ್ಗದ ಬಾಗಿಲನ್ನು ತಟ್ಟಲು ಹೋಗಿದ್ದನು. ಆದರೆ ಅವನ ಮುಖದ ತುಂಬಾ ತೃಪ್ತಿ ನಗುತ್ತಿತ್ತು. ನೀರಿಗಾಗಿ ಕಾತರಿಸಿ, ನೀರಿದ್ದರೂ ಕುಡಿಯದ ಆ ಮುಖಗಳನ್ನು ನೋಡಿ ಅರಬ ಸೈನಿಕನಿಗೆ ತುಂಬಾ ನೋವಾಯಿತು. ಕೈಯಲ್ಲಿಯ ಜಲಪಾತ್ರೆಯನ್ನೆತ್ತಿ ಆ ಅರಬ ಸೈನಿಕನು "ನೀನು ಜಲವಲ್ಲ. ಪರಮ ಪವಿತ್ರವಾದ ಜೀವ! ನಿನ್ನಿಂದ ನಾನು ಇಂದು ತ್ಯಾಗದ ಪರಿಧಿಯನ್ನು ಕಾಣುವಂತಾಯಿತು ಧನ್ಯ...ಧನ್ಯ...!" ಎಂದನು. ❁




"ನಿಮ್ಮಂತ ಚಿಲ್ಲರೆ ಮನುಷ್ಯರನ್ನು ಎಷ್ಟೋ ನೋಡಿದ್ದೇನೆ ಕಂಡಕ್ಟ್ರೀ...!"



*Statement about ownership and other particulars about Monthly* **Kasturi**, *to be published in the first issue every year after the last day of February*

**FORM IV**

*( See Rule 8 )*

| | | |
|---|---|---|
| 1. | Place of publication .. | HUBLI |
| 2. | Periodicity of its publication : | Monthly |
| 3. | Printer's name .. | M. N. Mahishi |
| | Whether citizen of India? . | Yes |
| | Address .. | Samyukta Karnataka<br>P.B. No. 30<br>Koppikar Road, Hubli-20 |
| 4. | Publisher's name .. | M. N. Mahishi |
| | Whether citizen of India? .. | Yes |
| | Address .. | Samyukta Karnataka<br>P.B. No. 30<br>Koppikar Road, Hubli-20 |
| 5. | Editor's name .. | K. Shama Rao,<br>Managing Editor &<br>Secretary. |
| | Whether citizen of India? .. | Yes |
| | Address .. | Samyukta Karnataka<br>P.B. No. 30<br>Koppikar Road, Hubli-20 |
| 6. | Names and addresses of individuals who own the newspaper and partners or share-holders holding more than one percent of the total capital. .. | Loka Shikshana Trust<br>Koppikar Road, Hubli<br>Board of Trustees<br>Sri. B. D. Jatti, Chairman<br>,, K. S. N. Adiga<br>,, R. A. Mundkur<br>,, S. P. Bhat<br>,, G. M. Patil<br>(Trustees) |

I, M. N. Mahishi, hereby declare that the particulars given above are true to the best of my knowledge and belief.

Hubli

Dated 1-3-1987

M. N. MAHISHI

Signature of Publisher

# ಮೇರಿ ಲ್ಯು

ಆದರ್ಶ ಹಾಗೂ ಸ್ಫೂರ್ತಿದಾಯಕವಾದ ಬಾಳುವೆ ನಡೆಸಲು ದೈಹಿಕ ದೌರ್ಬಲ್ಯ ಅಥವಾ ರಾಜಕೀಯ ಅಡೆತಡೆ, ಒತ್ತಡಗಳು ನಮ್ಮ ಜೀವನದ ಮೇಲೇನೂ ಪರಿಣಾಮ ಮಾಡಲಾರದೆಂಬುದಕ್ಕೆ ಈಕೆಯ ಜೀವನವೆ ಉತ್ತಮ ಉದಾಹರಣೆ. ಬಾಲ್ಯದಲ್ಲೇ ಒಂದು ಕೈ, ಮತ್ತೊಂದರ ಬೆರಳುಗಳು, ಮತ್ತು ಎರಡೂ ಕಾಲುಗಳನ್ನು ಕಳೆದುಕೊಂಡ ಅನಾಥೆ ಮೇರಿ, ಅಂದಿನ ಅಮೆರಿಕನ್ ಕ್ರೈಸ್ತ ಮಿಷನರಿಗಳ ಸಹಾಯದಿಂದ ನೆಟ್ಟಗೆ ನಡೆದಾಡುವಂತಾದಳು. ಓದಿನಲ್ಲೂ 'ಮುಂದಡಿ'ಯಿಟ್ಟು, ಶಾಂಘಾಯ್‌ನಲ್ಲಿ ಸ್ಥಾಪಿತವಾಗಿದ್ದ ಹೆಸರಾಂತ ವೃತ್ತ ಪತ್ರಿಕೆಯೊಂದರ ಸಂಪಾದಕಿಯೂ ಆದಳು!

ಮಾವೋನ 'ಬ್ರೇನ್ ವಾಷಿಂಗ್' ತಂತ್ರದ ಭಯಾನಕ ಪ್ರತಿಕ್ರಿಯೆಗಳನ್ನು ಕಣ್ಣಾರೆ ಕಂಡುದಲ್ಲದೆ ಸ್ವತಃ ಅನುಭವಿಸಿ, ಮಾವೋನ 'ಕ್ರಾಂತಿ'ಯ ಕಪಿಮುಷ್ಟಿಯಿಂದ ಪಾರಾಗಿ ಬಂದ ಧೀಮಂತೆ ಮೇರಿ ಲ್ಯು.

ನನ್ನ ಕಿವಿಗಳನ್ನು ನನಗೇ ನಂಬಲಾಗಲಿಲ್ಲ...!

"ನನ್ನನ್ನು ಸಾಕಿ ಸಲಹಿದವರನ್ನೇ ಬಹಿರಂಗವಾಗಿ ದೂಷಿಸಿದೆ. ಅವರು ನನ್ನನ್ನು ತೇಜೋವಧೆಗೊಳಿಸಲು ಬಲಪ್ರಯೋಗ ಮಾಡಿದರೆಂದು ಆಪಾದಿಸಿದೆ. ಅಷ್ಟೇ ಅಲ್ಲ, 'ಪ್ರಜೆಗಳ ಆಸ್ತಿ'ಯನ್ನು ಕಬಳಿಸಿದವರೆಂದೂ ಅವರನ್ನು ಜರೆದೆ. ಅಂದು ನಾನು ಅಂದದ್ದೆಲ್ಲಾ ಸುಳ್ಳು. ಆದರೂ, ಅಂಥ ಒಂದು ಸುಳ್ಳು ಹೇಳಬೇಕಾಗಿ ಬಂದ ನನ್ನ ಜೀವನದ ಮೇಲೆ ನನಗೆ ಜಿಗುಪ್ಸೆಯಾಯಿತು. ಆದರೂ ನಾನು ನನ್ನ 'ಸ್ವ-ವಿಮರ್ಶಾ' ವರದಿಯನ್ನು ಬರೆದು ಮುಗಿಸಲೇಬೇಕಿತ್ತು."

ಕೆಂಪು ಚೀನದಲ್ಲಿ ತನ್ನ ಮಾನಸಿಕ ಸಮತೋಲನವನ್ನು ಜ್ವಲಂತವಾಗಿರಿಸಲು ಹತಾಶಳಾದ ಮೇರಿ ಕೈಗೊಂಡ ಪ್ರಯತ್ನಗಳಲ್ಲಿದು ಕಟ್ಟಕಡೆಯದು. ಮನುಷ್ಯರನ್ನು ಸೆರೆ ಹಿಡಿಯಬಹುದು. ಆದರೆ ಅವರ ಮನಸ್ಸನ್ನು ಸೆರೆ ಹಿಡಿಯುವುದು ಅಸಾಧ್ಯ ಎಂದು ನಿರೂಪಿಸಲು ಮೇರಿ ಲ್ಯುಳ ಕಥೆ ಒಂದು ಉತ್ತಮ ನಿದರ್ಶನ.

ಮೇರಿಯ ಕತೆ ಪ್ರಾರಂಭವಾಗುವುದು ಹಾಂಕಾಂಗಿನ ಮಿಷನರಿ ಅತಿಥಿ ಗೃಹದ ಎರಡನೆ ಮಹಡಿಯ ಎಂಟನೆಯ ಕೋಣೆಯಿಂದ. ತನ್ನ ಹರೆಯವನ್ನೆಲ್ಲಾ ಚೀನದಲ್ಲಿ ಕ್ರೈಸ್ತ ಧರ್ಮ ಸ್ಥಾಪನೆಗಾಗಿ ಮುಡಿಪಾಗಿಟ್ಟ ಮಾರ್ಗರೆಟ್ ಬ್ರೌನ್ ಎಂಬ ಮಹಿಳೆಗೆ ನಿಗದಿಯಾಗಿದ್ದ ಕೊಠಡಿಯದು.

ಅರವತ್ತರ ಹರೆಯದ ಮಾರ್ಗರೆಟ್ ಬ್ರೌನ್ ಅವಿವಾಹಿತೆ. ಕೆನಡಾ ಸಂಜಾತೆಯಾದ ಅವರು ಕೆನಡಾ ಹಾಗೂ ಅಮೆರಿಕದ ಹಲವು ವಿಶ್ವವಿದ್ಯಾಲಯಗಳ ಪದವೀಧರೆ. ನಿಜಜೀವನದ ಏರಿಳಿತಗಳಲ್ಲಿಯೂ ವಿಚಲಿತವಾಗದ ವ್ಯಕ್ತಿತ್ವ ಅವರದು.

ನಾನು ಮಾರ್ಗರೆಟ್ ಬ್ರೌನ್‌ರೊಡನೆ ಸಮಕಾಲೀನ ಚೀನದಲ್ಲಿ ಆಗುತ್ತಿರುವ 'ಕ್ರಾಂತಿ'ಯ

ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಿರು-ವಾಗ ಅಚಾನಕವಾಗಿ ಮೇರಿ ಲ್ಯುಳ ಪ್ರಸ್ತಾಪ ಬಂತು. ವಿಷಯವಿಷ್ಟೇ; ಮೇರಿ ಲ್ಯುಳ 'ಸ್ವ-ವಿಮರ್ಶಾ' ವರದಿಯಲ್ಲಿ ಮಾರ್ಗರೆಟ್ ಬ್ರೌನ್ ಹಾಗೂ ಆಕೆಯ ಸಹಚರರನ್ನು ಕಟು ವಾಗಿ ಟೀಕಿಸಲಾಗಿತ್ತು. ಆಪಾದಿಸಿದ ವ್ಯಕ್ತಿ ಕೈ ಕಾಲುಗಳೆರಡೂ ಇಲ್ಲದ ನತದೃಷ್ಟೆ. ಅವಳನ್ನು ಬೆಳೆಸಿ ಮಿಷನರಿ ಶಾಲೆ ಹಾಗೂ ಕಾಲೇಜುಗಳಲ್ಲಿ ವಿದ್ಯಾವಂತಳನ್ನಾಗಿ ಮಾಡಿದುದಲ್ಲದೆ ಅವಳಿಗೆ ಮುಂದಿನ ಜೀವನದ ಮಾರ್ಗವನ್ನು ಸುಗಮವೂ ಕ್ರಮಬದ್ಧವೂ ಆಗುವಂತೆ ಮಾಡಿದವರು ಮಾರ್ಗ ರೆಟ್ ಬ್ರೌನ್ ಹಾಗೂ ಆಕೆಯ ಸಂಗಡಿಗರು. ಅಷ್ಟೇ ಅಲ್ಲದೆ, ಚೀನದ ಅಂದಿನ ಹೆಸರಾಂತ ವೃತ್ತ ಪತ್ರಿಕೆಯಾದ 'ವುಮೆನ್ಸ್ ಮೆಸ್ಸೆಂಜರ್'ಗೆ ಆಕೆ-ಯನ್ನು ಸಂಪಾದಕಿಯನ್ನಾಗಿ ನೇಮಿಸಲು ಕೂಡ ಬ್ರೌನಳೆ ಕಾರಣ.

ಮೇರಿ ಲ್ಯು ತನ್ನ ಉನ್ನತಿಗೆ ಎಲೆ ಮರೆಯ ಕಾಯಿಯಂತೆ ಶ್ರಮಿಸಿದ ಮಾರ್ಗರೆಟ್ ಬ್ರೌನ-ಳನ್ನೇ 'ಪ್ರಜಾ ದ್ರೋಹಿ'ಯೆಂದೂ 'ಸಾಮ್ರಾಜ್ಯ ಶಾಹಿಗಳ ಕೈಗೊಂಬೆ'ಯೆಂದೂ 'ಸ್ವ-ವಿಮರ್ಶಾ' ವರದಿಯಲ್ಲಿ ಆಪಾದಿಸಿದ್ದಳು!

ಇದು ಮಾರ್ಗರೆಟ್ ಬ್ರೌನಳಿಗಷ್ಟೇ ಅಲ್ಲ, ಜಗತ್ತಿನ ಎಲ್ಲಾ ವಿಚಾರವಾದಿಗಳ ಕೀರ್ತಿ ಪ್ರತಿಷ್ಠೆಗಳಿಗೊಡ್ಡಿದ ಒಂದು ಸವಾಲಾಗಿತ್ತು.

"ಈ ಆಪಾದನೆಯನ್ನು ನೀವು ಅದು ಹೇಗೆ ಇಷ್ಟೊಂದು ಹಗುರವಾಗಿ ತೆಗೆದುಕೊಳ್ಳಬಲ್ಲಿರಿ? ಆಪಾದಿಸಿರುವುದು ಬೇರಾರೂ ಅಲ್ಲ, ನಿಮ್ಮ ನಿಕಟವರ್ತಿಗಳಲ್ಲೊಬ್ಬರು" ಎಂದು ಆವೇಶದಿಂದ ನಾನಾಕೆಯನ್ನು ಎಚ್ಚರಿಸಿದೆ.

"ನನ್ನ ಮೇಲಿನ ದೋಷಾರೋಪಣೆಗೆ ಏನು ಕಾರಣವೋ ನಾನರಿಯೆ. ಆಕೆ ಆಪಾದಿಸುತ್ತಿದ್ದಾಗ ನಾನಲ್ಲಿರಲೂ ಇಲ್ಲ. ಈ ವಿಷಯವಾಗಿ ಆ ದೇಶದ ಯಾವೊಬ್ಬ ಅಧಿಕಾರಿಯೊಡನೆಯೂ ವಿಚಾರ ವಿನಿಮಯ ಮಾಡುವುದು ಅಸಾಧ್ಯ. ಆದರೆ, ಒಂದು ವಿಚಾರದಲ್ಲಿ ನನಗೆ ಖಚಿತ ಭರವಸೆಯಿದೆ: ಮೇರಿಯ ದೋಷಾರೋಪ-ಣೆಯು ಅವಳ ಅಂತಃಕರಣದಿಂದ ನೈಜವಾಗಿ ಬಂದ್ದದಲ್ಲ. ಒಂದು ವೇಳೆ ಆಕೆ ಅಂತಹ ಅಕಾರ್ಯವನ್ನು ಮಾಡಿದ್ದರೂ, ಅದನ್ನು ತನ್ನ ಸ್ವಂತ ಸುಖ ಸಾಧನೆಗಾಗಿ ಮಾಡಿರಲಾರಳು ಎಂದೂ ನನಗೆ ಗೊತ್ತು" ಎಂದುತ್ತರಿಸಿದರು.

ಇದೀಗ ತಲೆ ಕೆಡಿಸಿಕೊಳ್ಳುವ ಸರದಿ ನನ್ನ ದಾಯಿತು. ವಿದೇಶ ವಿದ್ಯಮಾನ ವಿದ್ಯಾರ್ಥಿ ಯಾಗಿದ್ದ ನನಗೆ ಚೀನದ ಬಗ್ಗೆ ಹೆಚ್ಚಿನದೇನೂ ತಿಳಿದಿರಲಿಲ್ಲ. ಕ್ರಾಂತಿಕಾಲದಲ್ಲಿ 'ಬಿದಿರು ತೆರೆ' (ಚೀನ) ಯ ಹಿಂದೆ ನಡೆದ ನಾಟಕದ ಬಗ್ಗೆ ತಿಳಿದುಕೊಳ್ಳಲು ಮೇರಿ ಲ್ಯುಳ ಬಗೆಗಿನ ಹೆಚ್ಚಿನ ಮಾಹಿತಿಗಳು ಒಂದು 'ಇಣುಕು ನೋಟ'ವಾಗ ಬಹುದೆಂದೆನಿಸಿತು.

"ಮೇರಿ ಲ್ಯುಳ ಬಗ್ಗೆ ಹೆಚ್ಚಿನದೇನಾದರೂ ತಮಗೆ ತಿಳಿದು ಬಂದಲ್ಲಿ ನನಗೆ ಮರೆಯದೆ ಸುದ್ದಿ ಮುಟ್ಟಿಸುತ್ತೀರಲ್ಲವೆ?" ಎಂದು ಮಾರ್ಗ ರೆಟ್ ಬ್ರೌನರನ್ನು ಬಿನ್ನವಿಸಿಕೊಂಡೆ. ಅದಕ್ಕೆ ಅವರು ಆಗಲೆಂದು ಭರವಸೆಯಿತ್ತರು.

*

ಕೆಲ ತಿಂಗಳ ನಂತರ ಒಂದು ಮುಂಜಾನೆ ಹಾಂಕಾಂಗಿನ ನಾನಿದ್ದ ವಿದೇಶಿ ಬಾತ್ಮೀದಾರರ ಮಂಡಳಿಯ ಕೋಣೆಯಲ್ಲಿದ್ದ ದೂರವಾಣಿ ಗುಣುಗುಣಿಸಿತು. ರಿಸೀವರನ್ನು ಕಿವಿಗಿರಿಸಿದೆ. "ಕೂಡಲೇ ನೀವು ಹೊರಟು ಬರಬಲ್ಲಿರಾ?" ಎಂದು ನನ್ನನ್ನು ಮಾರ್ಗರೆಟ್ ಕೇಳಿಕೊಂಡರು. ಕೂಡಲೇ ಹೊರಟೆ.

ಮಾರ್ಗರೆಟ್ ಬ್ರೌನ್ ತಮ್ಮ ಮನೆಯ ಮೊಗ ಸಾಲೆಯಲ್ಲಿ ನನಗಾಗಿ ಕಾಯುತ್ತಿದ್ದರು. ಎಂದಿ ನಂತೆ ತನಗೆ ನಿಗದಿಯಾಗಿದ್ದ ಕೋಣೆಗೆ ಕರೆ-ದೊಯ್ಯದೆ ಮತ್ತೊಂದೆಡೆಗೆ ಕರೆದುಕೊಂಡು ಹೋದರು. ಮೊದಲಿಗೆ ಕುಶಲ ಸಂಭಾಷಣೆ ಯಲ್ಲೇ ಕಾಲ ಕಳೆದ ಅವರು, ನನ್ನ ಮನದ ಲ್ಲಾಗುತ್ತಿದ್ದ ಅಸಮಾಧಾನದ ವಾಸನೆಯನ್ನು ಕಂಡುಕೊಂಡವರಂತೆ "ನಿಮಗೆ ಮೇರಿ ಲ್ಯುಳ ನೆನಪಿದೆಯೇ?" ಎಂದು ಸಹಜವಾಗಿ ಕೇಳಿದರು.

"ಖಂಡಿತವಾಗಿಯೂ ನೆನಪಿದೆ! ಆಕೆಯಿಂದೇ ನಾದರೂ ಸುದ್ದಿ ಬಂತೆ? ಯಾರಾದರೂ ಆಕೆಯ ಬಗ್ಗೆ ಸುದ್ದಿ ತಂದಿದ್ದಾರೆಯೇ...?"

ಅಂಗವಿಕಲ ಮಹಿಳೆಯೊಬ್ಬಳು ಕೆಂಪು ಚೀನದ ಸರಹದ್ದನ್ನು ದಾಟಿ ಹೊರ ಬರುವುದು ಅಸಾಧ್ಯ

ಎಂದು ನನಗೆ ಖಚಿತವಾಗಿ ಗೊತ್ತು. ಆದರೆ, ಆಶ್ಚರ್ಯವೊಂದು ನನಗಾಗಿ ಕಾದಿತ್ತು.

ಮಾರ್ಗರೆಟ್ ಬ್ರೌನರ ಕಾಂತಿಯುತ ಕಣ್ಣುಗಳು ಏನನ್ನೋ ಹೇಳುವ ತವಕದಲ್ಲಿದ್ದವು. ಅವರು ಕಿರು ನಗೆ ಸೂಸುತ್ತಾ ಹೇಳಿದರು;

"ಆಕೆ ಈ ಊರಿನಲ್ಲೇ ಇದ್ದಾಳೆ. ಸಧ್ಯ ನನ್ನ ಕೋಣೆಯಲ್ಲೇ ವಿಶ್ರಮಿಸುತ್ತಿದ್ದಾಳೆ. ನೀವಾಕೆಯನ್ನು ನೋಡಬಯಸುವಿರಾ? ನಾನೀಗಾಗಲೇ ತಮ್ಮ ಬಗ್ಗೆ ಅವಳಿಗೆ ಹೇಳಿದ್ದೇನೆ. ಅವಳೂ ತಮ್ಮನ್ನು ಕಾಣಲು ಉತ್ಸುಕಳಾಗಿದ್ದಾಳೆ"

ಊಹೆಗೂ ಮೀರಿದಂತಹ ವಿಷಯವೊಂದು ನನ್ನ ಕರ್ಣಪಟಲಕ್ಕೆ ಅಪ್ಪಳಿಸುತ್ತಿದ್ದಂತೆಯೆ ವಿದ್ಯುತ್ ಸ್ಪರ್ಶವಾದವನಂತೆ, ಕುಳಿತ ಕುರ್ಚಿಯಿಂದ ಗಕ್ಕನೆದ್ದೆ. ಆದರೆ ಮಾರ್ಗರೆಟ್ ಬ್ರೌನ್ ನನಗೆ ಕುಳಿತುಕೊಳ್ಳಲು ಸನ್ನೆಮಾಡಿ, "ಮೇರಿಗೆ ಬಹಳ ಆಯಾಸವಾಗಿದೆ. ಎರಡು ದಿನಗಳ ಹಿಂದಷ್ಟೇ ಅವಳಿಲ್ಲಿಗೆ ಬಂದದ್ದು. ಹೀಗಾಗಿ ವಿಶ್ರಾಂತಿ ಅತ್ಯವಶ್ಯ. ಅವಳನ್ನು ಪರಿಚಯ ಮಾಡಿಕೊಳ್ಳಲು ಬೇಕಾದ ಅಲ್ಪ ಸಮಯವನ್ನು ಮಾತ್ರ ನಿಮಗೆ ನೀಡಲು ಸಾಧ್ಯ. ಇನ್ನಾವಾಗದರೊಮ್ಮೆ ನಿಮಗೆ ಹೆಚ್ಚಿನ ಬಿಡುವಾದಾಗ ತಿಳಿಸಿ, ಮೇರಿಯೊಡನೆ ತಾವು ಎಲ್ಲ ವಿಷಯಗಳನ್ನು ಕೂಲಂಕೂಷವಾಗಿ ಚರ್ಚಿಸಲು ಅನುವು ಮಾಡಿಕೊಡುತ್ತೇನೆ" ಎಂದರು.

"ಹಾಗೇ ಆಗಲಿ. ಮೊದಲು ಪರಿಚಯವಾದರೆ ಸಾಕು" ಎಂದೆನ್ನುತ್ತಾ ನಾನು ಮೇಲೆದ್ದೆ.

"ಮತ್ತೊಂದು ವಿಚಾರ, ಸದ್ಯ ಆಕೆಯ ಬಗ್ಗೆ ಯಾವುದೇ ವೃತ್ತ ಪತ್ರಿಕೆಯಲ್ಲ ಏನನ್ನೂ ಬರೆಯಬಾರದು. ಅವಳಿಗೆ ಹಾಂಕಾಂಗಿನಲ್ಲಿಳಿದುಕೊಳ್ಳಲು ಅನುಮತಿಯಿಲ್ಲ. ಅಲ್ಲದೆ, ಬೇರೆಲ್ಲಿಗೂ ಹೋಗಲು ಆಕೆಗೆ ಪ್ರಯಾಣಾನುಮತಿ ಪತ್ರ (ವೀಸಾ) ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ಆಕೆಯ ವಿಚಾರವೇನಾದರೂ ಪತ್ರಿಕೆಗಳ ಮೂಲಕ ಚೀನೀ ಸರಕಾರಕ್ಕೆ ತಿಳಿದುಬಂದರೆ, ನಾವು ಆಕೆಯನ್ನು ತೆಪ್ಪಗೆ ಹಿಂದಕ್ಕೆ ಕಳುಹಿಸಬೇಕಾಗುತ್ತದೆ. ಇನ್ನು ಮುಂದಿನದನ್ನು ಊಹಿಸಲೂ ಭಯವಾಗುತ್ತದೆ." ಎಂದ ಮಾರ್ಗರೆಟ್ಟರ ಮುಖದಲ್ಲಿ ದೃಢತೆ ಎದ್ದುಕಾಣುತ್ತಿತ್ತು.

"ಹಾಗೇ ಆಗಲಿ" ಎಂದೆ.

ಇದು ನನ್ನ ೨೫ ವರ್ಷಗಳ ವಾರ್ತಾ ಮಾಧ್ಯಮ ವೃತ್ತಿಯಲ್ಲೇ ಒಂದು ವಿಚಿತ್ರ ಸತ್ಯದ ಗೋಚರಕ್ಕೆ ಅನುಗೊಂಡ ಸಮಯವೆಂದೂ, ಇನ್ನು ಮುಂದಿನ ನನ್ನ ಜೀವನಕ್ಕೆ ಈ ಭೇಟಿಯೊಂದು ಸ್ಫೂರ್ತಿದಾಯಕ ಅನುಭವವಾಗಬಹುದೆಂದೂ ನನಗಾಗ ಅನಿಸಿರಲಿಲ್ಲ.

ಇಬ್ಬರೂ ಮಾರ್ಗರೆಟ್‌ರ ಕೋಣೆಯಿದ್ದ ಎರಡನೆಯ ಮಹಡಿಯ ಮೆಟ್ಟಿಲುಗಳನ್ನು ಏರತೊಡಗಿದೆವು.

*

ಆ ಕೋಣೆಯ ಮಧ್ಯದಲ್ಲಿದ್ದ ಮೆತ್ತನೆಯ ತೂಗು ಕುರ್ಚಿಯಲ್ಲಿ ಮೇರಿ ಕುಳಿತಿದ್ದಳು. ನಮ್ಮನ್ನು ಕಂಡೊಡನೆ ಎದ್ದು ಬಂದು ಎದುರುಗೊಂಡಳು.

ಮೊದಲಿಗೆ ನಾನಾಕೆಯ ಮುಖವನ್ನು ಮಾತ್ರ ಕಂಡೆ. ಪೀಕಿಂಗ್ ಅರಮನೆಯ ಪುರಾತನ ತೈಲ ಚಿತ್ರವೊಂದರಲ್ಲಿ ಚಿತ್ರಿಸಿದ್ದ ಸ್ತ್ರೀಯೊಬ್ಬಳನ್ನು ಕಂಡಂತೆನಿಸಿತು. ಪುಟ್ಟ ತೆಳುವಾದ ತುಟಿಗಳು ಆಕೆಯ ದೃಢಚಿತ್ತ ಹಾಗೂ ಚಾಣಾಕ್ಷತೆಯನ್ನು ಸಾರುತ್ತಿದ್ದವು. ಆಕೆಯ ಕಣ್ಣುಗಳಿಂದ ಒಂದು ತೆರನಾದ ತೇಜಸ್ಸು ಹೊರಹೊಮ್ಮುತ್ತಿತ್ತು. ಆಕೆಯ ದುಂಡಗಿನ ಮುಖಾರವಿಂದವು, ಪ್ರಶಾಂತ ಸರೋವರವನ್ನು ನೆನಪಿಗೆ ತರುವಂತಿತ್ತು. ಆಕೆ ಧರಿಸಿದ್ದ ಕನ್ನಡಕವಾಗಲಿ, ಬಲ ಕಪೋಲದ ಮೇಲಿದ್ದ ಮಾಸಲು ಬಣ್ಣದ ಕಲೆಯಾಗಲೀ, ಆಕೆಯ ಸಮಾಧಾನ ಚಿತ್ತವನ್ನು ಹೊರಹೊಮ್ಮುವ ಒಟ್ಟಾರೆ ಭಾವನೆಗೆ ಭಂಗ ತರಲಿಲ್ಲ. ಆಕೆಯನ್ನು ಕಂಡ ಯಾರಿಗೇ ಆಗಲಿ ಆಕೆಯ ಸ್ನಿಗ್ಧ ಮುಖ ನೆನಪಿನಲ್ಲಿ ಅಚ್ಚಳಿಯದೆ ಉಳಿಯುತ್ತದೆ.

ಮಧ್ಯಮ ನಿಲುವಿನ ಆಕೆ ಅಂದಿನ ಸಮಕಾಲೀನ ಚೀನೀ ಜನಸಾಮಾನ್ಯರಂತೆ ಸಾದಾ ಹತ್ತಿ ಬಟ್ಟೆಯ ಉಡುಪನ್ನು ತೊಟ್ಟಿದ್ದಳು.

ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಆಕೆ ಅಂತಹ ಒಂದು ಸಾದಾ ಉಡುಪಿನಲ್ಲಿ ಬಂದಿರಬಹುದೆಂದು ನನಗನಿಸಿತು. ಅಷ್ಟೇ ಅಲ್ಲ, ತನ್ನ ಪ್ರಯಾಣ

ಕಾಲದಲ್ಲಿ ಯಾರಾದರೂ ತನ್ನ ಪೂರ್ವಾಪರಗಳನ್ನು ತಿಳಿದುಬಿಟ್ಟರೆ, ತನ್ನ ಸರ್ವನಾಶ ಖಚಿತವೆಂದರಿತ ಮೇರಿ ಅಂತಹ ಪ್ರತಿಕೂಲ ಪರಿಸ್ಥಿತಿಗಳನ್ನೆದುರಿಸುವ ಬದಲು ಹೀಗೆ ವೇಷವನ್ನು ಮರೆಮಾಚಿಕೊಂಡಿದ್ದಾಳೆಂದೂ ಆಗ ನನಗೆ ಸ್ಪಷ್ಟವಾಯಿತು.

ನಮ್ಮಿಬ್ಬರನ್ನು ಪರಸ್ಪರ ಪರಿಚಯಿಸಲಾಯಿತು. ಮೇರಿ ಮತ್ತೆ ತನ್ನ ಕುರ್ಚಿಯಲ್ಲಿ ಕುಳಿತಳು. ನಾನು ಆ ಕೋಣೆಯ ಕಿಟಕಿಯ ಬಳಿಯಿದ್ದ ಕುರ್ಚಿಯ ಮೇಲೆ ಕುಳಿತೆ. ನಾವು ಶಾಂಘಾಯ್‌ದಲ್ಲಿಯ ರಾಜಕೀಯ ವಿದ್ಯಮಾನಗಳ ಕುರಿತು, ಜನ ಸಾಮಾನ್ಯರ ಜೀವನದ ಮೇಲೆ ಅದರ ಪರಿಣಾಮವನ್ನು ಕುರಿತು ಕಾಲು ಗಂಟೆಯವರೆಗೂ ಮಾತನಾಡಿರಬಹುದು. ಆಗ ಇದ್ದಕ್ಕಿದ್ದಂತೆಯೇ ನನ್ನ ಮನದಲ್ಲಿ ನಾನು ಕಾಣಬೇಕಿದ್ದ ವ್ಯಕ್ತಿಯನ್ನು ಕಾಣುತ್ತಿಲ್ಲ ಎಂದೆನಿಸಿತು. ಯಾಕೆಂದರೆ ಮೇರಿಯನ್ನು ನೋಡಿದಾಗಿನಿಂದ ಆಕೆ ವಿಕಲಾಂಗಳೆಂದು ನನಗೆ ಅನಿಸಲೇ ಇಲ್ಲ! ಬದಲಾಗಿ "ಈಕೆಯೊಬ್ಬ ಅಸಮಾನ್ಯ ಸ್ತ್ರೀ!" ಎಂದು ಅನಿಸಿತು.

ಆಕೆ ಮಾತನಾಡುತ್ತಿರುವಾಗ ನಾನಾಕೆಯ ಮುಖವನ್ನಷ್ಟೇ ಗಮನಿಸುತ್ತಿದ್ದವನು, ಆಕೆಯ ಕಾಲುಗಳತ್ತ ಒರೆ ನೋಟ ಹರಿಸಿದೆ. ನೋಡಲು ಅವು ಸಹಜವಾದ ಕಾಲುಗಳಂತೆಯೇ ಇದ್ದವು. ಆಕೆಯ ನಡಿಗೆಯಲ್ಲೂ ಯಾವುದೇ ನ್ಯೂನತೆಯಿರಲಿಲ್ಲ! ಹಾಗೇ ಮೇಲಕ್ಕೆ ಹರಿದ ನನ್ನ ದೃಷ್ಟಿ ಆಕೆಯ ಬಾಹುಗಳವರೆಗೂ ಬಂದು ನಿಂತಿತು. ಅರೆ! ಇದೇನಿದು? ಆಕೆಗೆ ಎರಡೂ ಕೈಗಳಿಲ್ಲವೆಂದಲ್ಲವೇ ಮಾರ್ಗರೆಟ್ ಬ್ರೌನ್ ನನಗೆ ಹೇಳಿದ್ದು? ಆದರೆ ಎರಡು ಕೈಗಳಿವೆಯಲ್ಲ! ಅಷ್ಟು ನೈಜ ಹಾಗೂ ಕರಾರುವಾಕ್ಕಾಗಿ ತಯಾರಾದ ಕೃತಕ ಕೈಗಳೆ? ಹೌದು. ಯಾರೊಬ್ಬರ ದೈವದತ್ತವಾದ ಕೈಗಳಿಗೂ, ಮೇರಿ ಲ್ಯುಳ ಕೃತಕ ಕೈಗಳಿಗೂ ಸಾಮ್ಯದಲ್ಲಿರಲಿ, ಚಲನೆಯಲ್ಲೂ ಕಿಂಚಿತ್ ವ್ಯತ್ಯಾಸವೂ ನನ್ನ ಗಮನಕ್ಕೆ ಬರಲಿಲ್ಲ!

ನಾನಾಕೆಯ ಎಡತೋಳಿನ ಕಡೆ ಗಮನಿಸಿದೆ. ಹೌದು! ಎಡತೋಳು ಮೊಣಕೈಯ ಮೇಲಕ್ಕೆ ತುಂಡಾಗಿದ್ದುದರ ಸುಳಿವು, ಸೂಕ್ಷ್ಮವಾದರೂ, ಸ್ಪಷ್ಟವಾಗಿ ನನಗೀಗ ಗೋಚರಿಸಿತು. ಆದರೆ, ಬಲಗೈಯ ಸಂಗತಿಯೇನೋ ಕರಾರುವಾಕ್ಕಾಗಿ ತಿಳಿಯಲೇ ಇಲ್ಲ! ಆಕೆ ನಮಗಿಂತಲೂ ವೇಗವಾಗಿ ತನ್ನ ಬಲ ಅಂಗೈಯನ್ನು ಮುಚ್ಚಿ ತೆರೆಯುತ್ತಿದ್ದಳು!

ಆಕೆಯನ್ನು ಕಂಡ ಕೆಲ ಕಾಲದಲ್ಲೇ ಅಂಗವೈಕಲ್ಯವನ್ನು ಕಂಡು ಅಸಹ್ಯಪಟ್ಟುಕೊಳ್ಳುವುದರಲ್ಲೇನೂ ಅರ್ಥವಿಲ್ಲ ಎಂಬ ತೀರ್ಮಾನಕ್ಕೆ ಬಂದೆ.

ನನ್ನ ಅರ್ಧ ಗಮನವು ಆಕೆಯ ಮಾತಿನ ಮೇಲಿತ್ತಾದರೂ ಉಳಿದರ್ಧ ಆಕೆಯ ಚಹರೆಗಳನ್ನೇ ಲಕ್ಷಿಸುತ್ತಿತ್ತು. ಆಕೆ ಬಹಳ ಜಾಗರೂಕತಾ ಸ್ವಭಾವದವಳು. ಪ್ರಾಣಾಪಾಯವಿದ್ದವರು ಅತ್ಯಂತ ಜಾಗರೂಕರಾಗಿರುವುದು ಸಾಮಾನ್ಯ. ಬಹಳಷ್ಟು ಅವಘಡಗಳನ್ನು ದಾಟಿ ಆಕೆ ಮುಕ್ತ ಪ್ರಪಂಚಕ್ಕೆ ಬರಬೇಕಾದರೆ, ಸಾಕಷ್ಟು ದೈಹಿಕ ಹಾಗೂ ಮಾನಸಿಕ ಸಂಕಷ್ಟಗಳನ್ನು ಅನುಭವಿಸಿರುವುದು ಸಹಜ. ಆಕೆಯಲ್ಲಂತಹ ದಣಿವಿನ ಅಥವಾ ಖಿನ್ನತೆಯ ಲಕ್ಷಣಗಳೇ ಕಂಡು ಬರಲಿಲ್ಲ. ಆದರೆ ಆಕೆಯ ಕುಳಿತಿರುವ ಭಂಗಿಯನ್ನು ಕಂಡಾಗ ಕೊಂಚ ನಿತ್ರಾಣದ ಲಕ್ಷಣ ಕಂಡು ಬರುತ್ತಿತ್ತು. ಆದರೂ ಆಕೆಯ ಪ್ರಶಾಂತ ಮನಃಸ್ಥಿತಿಗೆ ಯಾವುದೇ ಚ್ಯುತಿ ಬಂದಿರಲಿಲ್ಲ. ಇದು ಆತ್ಮಸಂಯಮದ ಒಂದು ಲಕ್ಷಣವಿರಬಹುದೆಂದು ನನಗಾಗ ಅನಿಸಿದ್ದು ಸುಳ್ಳಲ್ಲ.

ನಾನು ಮಾರ್ಗರೆಟ್ ಬ್ರೌನ್‌ರಿಗೆ ಮಾತು ಕೊಟ್ಟಂತೆ ಮೇರಿಗೆ ಹೆಚ್ಚು ತೊಂದರೆಯನ್ನು ಕೊಡದೆ, ಇಂಥ ದಿನ ಭೇಟಿಯಾಗಲು ಅನುಮತಿ ಪಡೆದೆ. ನಾನಾಕೆಯ ಬಗ್ಗೆ ಸಂಪೂರ್ಣವಾಗಿ ತಿಳಿದುಕೊಳ್ಳಲು ಹಲವಾರು ವಾರಗಳ ಕಾಲ ಮಾತುಕತೆಯಾಡಬೇಕೆಂದು ಮನದಲ್ಲೆಣಿಸಿದ್ದೆ. ಬದಲಾಗಿ, ನಮ್ಮಿಬ್ಬರ ಮಾತುಕತೆಯು ಒಂದು ವರ್ಷದಷ್ಟು ಸಿಡಿದಾಯಿತು. ಇಷ್ಟು ದೀರ್ಘಾವಧಿಯಲ್ಲಿ ಆಕೆ ನನಗೆ ತನ್ನ ಸಂಪೂರ್ಣ ಚರಿತ್ರೆಯನ್ನು ಹೇಳಿದಳು. ಆಕೆಯ ಜೀವನ ಪವಾಡಸದೃಶ ಘಟನೆಗಳ ಸರಮಾಲೆ.

*

"ನಾನು ಕಣ್ಣು ಬಿಟ್ಟಾಗ ಕಂಡದ್ದೆಲ್ಲವೂ

ಶ್ವೇತಮಯ. ಸೂರು ಹಾಗೂ ಗೋಡೆಗಳೆಲ್ಲವೂ ಅಚ್ಚ ಬಿಳಿ. ನನ್ನ ಆರೈಕೆಯನ್ನು ಗಮನಿಸಲು ಬರುತ್ತಿದ್ದವರೆಲ್ಲಾ ಶ್ವೇತವಸ್ತ್ರಧಾರಿಗಳೇ. ನಾನೂ ಬೆಳ್ಳಗಿದ್ದೆ. ನನ್ನ ಮೈ ಬಿಳುಪಾದ ವಸ್ತ್ರವೊಂದರಿಂದ ನಖಶಿಖಾಂತವೂ ಸುತ್ತಲ್ಪಟ್ಟಿತ್ತು," ಎಂದು ಮೇರಿ ಲ್ಯು ಹೇಳಲಾರಂಭಿಸಿದಳು.

ಆಕೆಯ ಮೈ ಪೂರಾ ಬ್ಯಾಂಡೇಜು ಬಟ್ಟೆಯನ್ನು ಬಿಗಿಯಲಾಗಿತ್ತು. ಆಕೆಯ ಮುಖಭಾಗವೂ ಅದಕ್ಕೆ ಹೊರತಾಗಿರಲಿಲ್ಲ. ತನ್ನ ಕಣ್ಣುಗಳಿಗಾಗಿ ಮಾಡಿದ್ದ ಕಿಂಡಿಯೊಳಗಿಂದ ತಾನಿರುವ ಪರಿಸರವನ್ನವಲೋಕಿಸಿದ ಆ ಪುಟ್ಟ ಬಾಲಕಿಗೆ ಇಡೀ ಜಗವೆಲ್ಲಾ ಶ್ವೇತಮಯವಾದದ್ದೇಕೆಂದು ತಿಳಿಯಲಿಲ್ಲ. ಆಗ ಆ ಎಳೆಯ ಮನದಲ್ಲಿದ್ದ ತುಮುಲಗಳಿಗೆ ಎಣೆಯೇ ಇಲ್ಲ. 'ಅದದ್ದಾದರೂ ಏನು?' ಆಕೆ ತನ್ನ ಪೂರ್ವಾಪರಗಳನ್ನೇ ಮರೆತಿದ್ದಳು. 'ಈಗ ತಾನಿರುವುದೆಲ್ಲಿ?' ಎಂಬುದನ್ನು ಕೂಡ ಆಕೆ ಅರಿಯಳು. ಆಗ ಆ ಪುಟ್ಟ ಬಾಲಕಿಯ ವಯಸ್ಸು ಕೇವಲ ನಾಲ್ಕು ವರ್ಷ! ಒಮ್ಮೆಲೇ ತನ್ನ ಪರಿಸರದ ಬದಲಾವಣೆಯನ್ನರ್ಥ ಮಾಡಿಕೊಳ್ಳಬಲ್ಲ ವಯಸ್ಸು ಅದಲ್ಲವಲ್ಲ. ಹೀಗೆ ಅದೆಷ್ಟು ದಿವಸ ಮೇರಿ ಮಲಗಿದ್ದಳೋ ಅವಳಿಗೇ ತಿಳಿಯದು. ದೇಹದೊಂದಿಗೆ ತನ್ನ ಕೈ ಕಾಲುಗಳನ್ನು ಸೇರಿಸಿ ಗಟ್ಟಿಯಾಗಿ ಬಿಗಿದದ್ದರಿಂದ ಅವಳು ಅವುಗಳನ್ನಾಡಿಸಲಾಗದೆ ಚಡಪಡಿಸಿದಳು. "ಅಷ್ಟೇ ಅಲ್ಲ. ನನ್ನ ಕೈ ಕಾಲುಗಳಲ್ಲಿ ಸೂಜಿಗಳನ್ನು ಚುಚ್ಚುತ್ತಿದ್ದ ಅಸಾಧ್ಯ ವೇದನೆಯುಂಟಾಗುತ್ತಿತ್ತು," ಎಂದು ಹೇಳುತ್ತಾ ಮುಂದುವರೆಸಿ, "ನನಗೇಕೆ ಎಲ್ಲರಂತೆ ಎದ್ದು ನಡೆದಾಡಲಾಗುತ್ತಿಲ್ಲ?' ಇದು ಆಗ ನನ್ನ ಮನದಲ್ಲಿದ್ದ ಯಕ್ಷ ಪ್ರಶ್ನೆ. ಆದರೆ, ಆಯಾಸದಿಂದಾಗಿ ನನ್ನ ಪ್ರಜ್ಞೆಯು ಸುಷುಪ್ತಿಗೆ ಜಾರಿತು," ಎಂದಳು.

"ದಿನ ಕಳೆದಂತೆ ಆ ಕೊಠಡಿಯಲ್ಲೇ ನನ್ನ ಜೊತೆ ಮತ್ತಾರೋ ವಾಸಿಸುತ್ತಿದ್ದುದು ನನ್ನ ಗಮನಕ್ಕೆ ಬಂತು. ನನ್ನ ಸಮವಯಸ್ಕರಾರೋ ನನ್ನ ಸನಿಹದಲ್ಲೇ ಇದ್ದರೂ ನನ್ನನ್ನೇಕೆ ಭೇಟಿ ಮಾಡಲಿಲ್ಲವೆಂದು ನನಗಾಶ್ಚರ್ಯವಾಯಿತು. ಇಂದಿಗೂ ಅದು ಹೆಣ್ಣೋ ಗಂಡೋ ನನಗೆ ತಿಳಿದಿಲ್ಲ!"

ಈಗೀಗ ಮೇರಿಯ ಪುಟ್ಟ ಮಸ್ತಿಷ್ಕದಲ್ಲಿ ಮತ್ತೊಂದು ವಿಚಾರ ಸ್ಪಷ್ಟವಾಗತೊಡಗಿತು. ಅದೇನೆಂದರೆ, ತನ್ನ ಮತ್ತು ತನ್ನ ಪಕ್ಕದ ಹಾಸಿಗೆಯ ಮೇಲಿದ್ದ ರೋಗಿಗಳನ್ನು ನೋಡಲು ಬರುತ್ತಿದ್ದವರೆಲ್ಲಾ ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸಿದ್ದರು. ಆದರೆ, ಅವಳ ಆರೈಕೆ ಮಾಡಲು ಬರುವವರೆಲ್ಲಾ ತೊಟ್ಟಿದ್ದುದು ಕಟ್ಟುನಿಟ್ಟಾಗಿ ಶ್ವೇತ ವರ್ಣದ ವಸ್ತ್ರಗಳನ್ನೇ. 'ಇದೇಕೆ ಹೀಗೆ'?

ಇದರೊಡನೆ ಆ ಪುಟ್ಟ ಬಾಲೆಯ ಮನದಲ್ಲಿ ಮತ್ತೊಂದು ವಿಚಾರವೂ ಬೈರಿಗೆಯಂತೆ ಕೊರೆಯಲಾರಂಭಿಸಿತು. 'ತನ್ನ ತಾಯಿಯೆಲ್ಲಿ? ಆಕೆ ತನ್ನ ಬಳಿ ಏಕಿಲ್ಲ?' ಎಂದು ಮತ್ತೆ ಮತ್ತೆ ತನ್ನಲ್ಲಿ ತಾನೇ ಪ್ರಶ್ನಿಸಿಕೊಂಡಳು.

•

ನ್ಯಾನ್ಕಿಂಗಿನ ಗಿನ್ಲಿಂಗ್ ಆಸ್ಪತ್ರೆಯಲ್ಲಿದ್ದ ಮೇರಿಯ ದಿನಚರಿ ಬಹಳ ಕರುಣಾಜನಕವಾದುದು. ಅವಳು ಅಲ್ಲಿ ತಂಗಿದ್ದ ಹಲವು ತಿಂಗಳುಗಳಲ್ಲಿ ಬಹಳ ಹೊತ್ತು ಕೋಮಾದಲ್ಲೇ ಕಳೆದಳು. ಆಕೆಯನ್ನು ಎಲ್ಲಾ ಕಡೆಯಿಂದಲೂ ಭರ್ಜಿಯಂತೆ ಇರಿಯುತ್ತಿದ್ದ ನೋವಿನ ಅರಿವನ್ನು ತಪ್ಪಿಸಲು ವೈದ್ಯರು ಆಕೆಗೆ ಯಾವಾಗಲೂ ಸಂವೇದನನಾಶಕ ಔಷಧಿಯನ್ನು ಪ್ರಯೋಗಿಸುತ್ತಿದ್ದರು. ಇಲ್ಲವಾದಲ್ಲಿ ಆ ಎಳೆಯ ದೇಹವು ಆ ನೋವನ್ನು ತಡೆದುಕೊಳ್ಳುವುದು ಅಸಾಧ್ಯವೆಂದು ಅವರಿಗನ್ನಿಸಿರಬೇಕು.

ಆಕೆಯ ಮನದಲ್ಲಿ ಅಚ್ಚಳಿಯದೆ ಉಳಿದ ಮತ್ತೊಂದು ನೆನಪೆಂದರೆ, ತನ್ನ ಸುತ್ತಲಿನವರ ವರ್ತನೆ. "ನನ್ನ ಬದಿಯ ಹಾಸಿಗೆಯಲ್ಲಿದ್ದ ರೋಗಿಯ ಬಂಧುಗಳೆಲ್ಲರೂ ನನ್ನ ಬಗ್ಗೆ ಮಾತನಾಡುತ್ತಿದ್ದರು. ಅವರು ನನ್ನೆಡೆಗೇ ನೋಡುತ್ತಾ ಮಾತನಾಡುತ್ತಿರಬಹುದೆಂದು ನನ್ನರಿವಿಗೆ ಬಂದು ಬಹಳ ವೇದನೆಯಾಯಿತು." ಎಂದಳು ಮೇರಿ. ಇಂತಹ ವರ್ತನೆ ಯಾರಿಗೇ ಆಗಲಿ ಹುಣ್ಣಿನ ಮೇಲೆ ಉಪ್ಪನ್ನು ಸವರಿದಂತೆ ಅಲ್ಲವೇ? ನಿರ್ಜೀವವಾದ ಬಟ್ಟೆಯ ಮೂಟೆಯಂತೆ ಮಲಗಿರುವ ಮೇರಿ ಲ್ಯುಳ ಬಗ್ಗೆ

ತಮ್ಮಿಚ್ಛೆಯಂತೆ ಮಾತನಾಡಿಕೊಂಡವರು, ಆ ಚಲನರಹಿತ ಆಕಾರದಲ್ಲೊಂದು ತುಡಿವ ಜೀವವಿದೆಂಬುದನ್ನು ಮರೆತದ್ದು ಒಂದು ವಿಷಾದದ ವಿಪರ್ಯಾಸವಲ್ಲವೇ?

"ನಾನು ಅಂದು ಅರಗಿಸಿಕೊಳ್ಳಲಾಗದ ಮತ್ತೊಂದು ಅಂಶವೆಂದರೆ, ಪರಕೀಯತೆ. ಹುಟ್ಟಿನಿಂದಲೂ ನಮ್ಮವರನ್ನೇ ಕಂಡಿದ್ದ ನನಗೆ ಕೆಂದೊಗಲಿನ, ಹಳದಿ ಬಣ್ಣದ ಕೂದಲಿರುವ, ನೀಲಿ ಗಾಜಿನ ಮಣಿಗಳಂತಹ ಕಣ್ಣುಗಳಿರುವ ನನ್ನ ಬೇಕು-ಬೇಡಗಳನ್ನು ಪೂರೈಸುತ್ತಿರುವವರನ್ನು ಕಂಡಾಗ ನನಗೆ ಏನೊಂದೂ ತೋಚದಾಯಿತು. ಆ ಎಲ್ಲರೂ ಕೇಳತೊಡಗಿದ ಒಂದು ಪ್ರಶ್ನೆಯಿಂದ ನನಗೆ ನಮ್ಮ ಮನೆಗೆ ಹೋಗುವ ಹಾಗೂ ನನ್ನ ತಾಯಿಯನ್ನು ಕಾಣುವ ಹಂಬಲ ತೀವ್ರವಾಯಿತು. 'ನಿನ್ನ ಹೆಸರೇನು?' ಎಂದು ಕೇಳಿದ ಪ್ರತಿಯೊಬ್ಬರಿಗೂ ನಾನಿತ್ತ ಉತ್ತರ, 'ನನ್ನ ನನ್ನ ಹೆಸರು ಲ್ಯು ಯಂಗ್-ಯಂಗ್' ಎಂದು. ಅದೇ ನನ್ನ ಹೆಸರೆಂದು ನನಗೆ ಚೆನ್ನಾಗಿ ಗೊತ್ತು, ಹಾಗೆ ಬಾರಿ ಬಾರಿಗೂ ನನ್ನ ಹೆಸರನ್ನು ಉಚ್ಚರಿಸಿದರೂ ಅವರು ನನ್ನ ಮಾತನ್ನು ನಂಬದೆ ಮತ್ತೆ ಮತ್ತೆ 'ನಿನ್ನ ಹೆಸರೇನು?' ಎಂದು ಕೇಳುತ್ತಿದ್ದುದೇಕೋ ಇಂದಿಗೂ ನನಗೆ ತಿಳಿಯುತ್ತಿಲ್ಲ. ನನ್ನ ಹಸರಿನ ಜೊತೆ ನನ್ನ ಮನೆಯ ವಿಳಾಸವನ್ನು ಸಹ ಕೇಳಹತ್ತಿದರು" ಎಂದಳು ಮೇರಿ. ತನ್ನ ತಂದೆಯೊಂದಿಗೆ ಹೊರಗೆ ತಿರುಗಾಡಿ ಬಂದದ್ದೊಂದೇ ಆಕೆಗೆ ಜ್ಞಾಪಕ. ಮತ್ತೇನೂ ಆಕೆಗೆ ತಿಳಿಯದು. ಆದರೆ, ತಾವು ವಾಸಿಸುತ್ತಿದ್ದ ಪ್ರದೇಶಕ್ಕೆ 'ವಾನ್-ಫು-ಸಿಯಾಂಗ್' ಎಂದು ಕರೆಯುತ್ತಿದ್ದುದು ಆಕೆಗೆ ಚೆನ್ನಾಗಿ ನೆನಪಿದೆ. ಇದು ನ್ಯಾನ್ಕಿಂಗ್ ನಗರದ ಜನನಿಬಿಡ ಪ್ರದೇಶಗಳಲ್ಲೊಂದು. ಚೀನದಲ್ಲಿ ಹೆಣ್ಣುಮಕ್ಕಳೆಂದರೇನೇ ಒಂದು ಬಗೆಯ ತಾತ್ಸಾರ. ಅದರಲ್ಲೂ ತೀವ್ರತರ ಅಪಘಾತಕ್ಕೆ ಗುರಿಯಾಗಿ ಬದುಕಿಗಿಂತ ಸಾವೇ ಸಮೀಪವಾಗಿದ್ದು, ಸತ್ತನಂತರ ತನ್ನ ಉತ್ತರಕ್ರಿಯೆಗಾಗುವ ಖರ್ಚನ್ನು ಮಾತ್ರ ತಮ್ಮ ಹೆಗಲಿಗೇರಿಸುವ ಮೇರಿಯಂಥ ನತದೃಷ್ಟೆಯ ವಿಳಾಸವನ್ನಲ್ಲಿ ಹುಡುಕುವದಾದರೂ ಹೇಗೆ?

ತಮ್ಮಿಚ್ಛೆಗೆದುರಾಗಿ ಹುಟ್ಟಿದ ಮಕ್ಕಳನ್ನು ಊರ ಅಗಸೆಯಿಂದಾಚೆಗೆಸೆದು ಬರುವ ಅಮಾನುಷ ಕ್ರೂರ ಪರಿಪಾಠವಿನ್ನೂ ರೂಢಿಯಲ್ಲಿದ್ದ ಕಾಲವದು. ಮೇರಿಯೂ ಆ ಕ್ರೂರ ಪದ್ಧತಿಯ ಕಪಿಮುಷ್ಟಿಗೆ ಸಿಲುಕಿದ ಒಂದು ಬಲಿಪಶುವಾಗಿದ್ದಿರಬಹುದೆಂದು ಆವಳ ಪೋಷಕರ ಒಂದು ಅಭಿಪ್ರಾಯವಾಗಿತ್ತು.

ಚೀನದಲ್ಲಿ ಅಸಂಖ್ಯಾತ 'ಲ್ಯು' ಗಳಿದ್ದಾರೆ; ನಮ್ಮಲ್ಲಿರುವ 'ರಾಮು, ಕೃಷ್ಣ'ರಂತೆ. ಜನಗಣತಿ ಪುಸ್ತಕದಲ್ಲಿ ಹುಡುಕಿದರೂ ಮೇರಿಯ ಮನೆಯ ವಿಳಾಸ ಸಿಗುವ ಸಂಭವವಿದ್ದಿಲ್ಲ.

ಮೇರಿಯ ಬಗ್ಗೆ ಇನ್ನಷ್ಟು ವಿಚಾರಿಸಿದಾಗ, ಆಕೆಯನ್ನು ಆಸ್ಪತ್ರೆಗೆ ತಲುಪಿಸಲು ಏರ್ಪಾಡು ಮಾಡಿದ್ದು ಅಂದಿನ ಹೆಸರಾಂತ 'ಲೀ ಹಂಗ್ ಚಾಂಗ್' ಎಂಬ ರಾಜನೀತಿಜ್ಞನ ಮನೆತನದವರೆಂದು ತಿಳಿದು ಬಂತು.

*

ಮೇರಿಗೆ ಬಿಗಿಯಲಾಗಿದ್ದ ಬ್ಯಾಂಡೇಜು ಕಟ್ಟುಗಳನ್ನು ಬಿಚ್ಚುವ ಸಮಯವು ಸಮೀಪಿಸಿತು. ಬಿಚ್ಚುವಾಗ ಮೆಲ್ಲನೆ ಒಂದೊಂದೇ ಅಂಗವನ್ನು ಅಂದರೆ, ಮುಖ, ಕೈಗಳು ನಂತರ ಕಾಲುಗಳನ್ನಾವರಿಸಿದ್ದ ಕಟ್ಟುಗಳನ್ನು ನವಿರಾಗಿ ಬಿಡಿಸಲಾಯಿತು. ತನ್ನ ಕೈ ಕಾಲುಗಳನ್ನು ದಿಟ್ಟಿಸಿದ ಆ ಪುಟ್ಟ ಬಾಲಕಿಗೆ, ತನ್ನದೇಕೆ ಇತರರಂತಿಲ್ಲವೆಂದು ಗೊತ್ತೇ ಆಗಲಿಲ್ಲ. ಏಕೆಂದರೆ, ಮೇರಿಗೆ ಎಡಗೈಯೇ ಇರಲಿಲ್ಲ. ಆಕೆಯ ಎಡಕೈ, ಮೊಳಕೈಯ ಬಳಿಯೇ ತುಂಡಾಗಿತ್ತು. ಬಲಗೈಯಲ್ಲಿ ಒಂದು ಮೋಟು ಹೆಬ್ಬೆರಳಿನ ವಿನಾ ಬೇರಾವುದೇ ಬೆರಳುಗಳಿದ್ದಿಲ್ಲ. ಆಕೆಯ ಎರಡೂ ಕಾಲುಗಳನ್ನು ಮೊಣಕಾಲಿನವರೆಗೂ ಕತ್ತರಿಸಲಾಗಿತ್ತು.

ಗಿನ್ಲಿಂಗ್ ಆಸ್ಪತ್ರೆಯ ಅಂದಿನ ಹೆಸರಾಂತ ವೈದ್ಯಾಧಿಕಾರಿಯಾಗಿದ್ದ ಡಾ. ಬೀಬ್‌ರವರು ಮೇರಿಯನ್ನು ಪರೀಕ್ಷಿಸಿದರು. ಆಕೆಯ ಸ್ಥಿತಿ ಬಹಳ ಚಿಂತಾಜನಕವಾಗಿದ್ದುದು ಅವರಿಗೆ ಕಂಡು ಬಂತು. ತೀವ್ರತರ ಹಿಮಪಾತಕ್ಕೆ ತುತ್ತಾಗಿದ್ದ ಆಕೆಯ ಒಂದು ಕೆನ್ನೆ ಹಾಗೂ ಕಿವಿ ಮರಗಟ್ಟಿ ನೀಲಿ ಬಣ್ಣಕ್ಕೆ ತಿರುಗಿದ್ದವು. ಆಕೆಯ ಪುಟ್ಟ

ಕಾಲ್ಗಳು ಥಂಡಿಯ ಅಸಾಧ್ಯ ಕೊರೆತದಿಂದ ಕರಕಲಾಗಿದ್ದವು. ಹೆಚ್ಚು ಕಡಿಮೆ ಕೈಗಳದೂ ಅದೇ ಸ್ಥಿತಿಯೆಂದು ಹೇಳಲು ಅಡ್ಡಿಯಿಲ್ಲ. ಕಪೋಲದ ಮೇಲಿದ್ದ ಕರಕಲಾದ ಕಲೆ ಹೇಗಾದರೂ ಮಾಯ ಬಹುದು. ಆದರೆ ಕೈ ಕಾಲುಗಳ ಬಗ್ಗೆ ಅವರಿಗೆ ಯಾವುದೇ ಭರವಸೆಯಿರಲಿಲ್ಲ.

ದಕ್ಷಿಣ ಒಳನಾಡಿಗಿಂತ ಎತ್ತರವಾಗಿದ್ದ ನ್ಯಾನ್ಕಿಂಗಿನಲ್ಲಿ ಫೆಬ್ರುವರಿ ತಿಂಗಳಲ್ಲೂ ಮೈ ಹೆಪ್ಪುಗಟ್ಟಿಸುವ ಛಳಿ. ಹರಿಯುತ್ತಿರುವ ನೀರು ನಿಂತಲ್ಲೇ ಹೆಪ್ಪುಗಟ್ಟುವಷ್ಟು ತೀವ್ರತರವಾದ ಥಂಡಿ ಅದು. ಇಂತಹ ಥಂಡಿಯ ಆಕ್ರಮಣಕ್ಕೆ ಸಿಕ್ಕು ಜರ್ಜರಿತವಾದ ಆ ಪುಟ್ಟ ಬಾಲಕಿ ಬದುಕುಳಿವ ಬಗ್ಗೆ ಡಾ. ಬೀಬ್‌ರವರಿಗೆ ಹೆಚ್ಚು ಅನುಮಾನವೇ ಇತ್ತು. ಒಂದು ವೇಳೆ ಬದುಕುಳಿದರೂ ಅವಳ ಮುಂದಿನ ಜೀವನ ಮಾರ್ಗವೂ ಅಷ್ಟೇ ಕ್ಲಿಷ್ಟವಾಗಿದ್ದಿತು. ವೈದ್ಯಾಧಿಕಾರಿಗಳಾದ ಅವರು ಇದರ ಬಗ್ಗೆ ಹೆಚ್ಚು ಚಿಂತಿಸಬೇಕಿಲ್ಲವಾದರೂ, ಅವರು ಕೇವಲ ಆಸ್ಪತ್ರೆಯ ವೈದ್ಯರಾಗಿರದೆ ಒಬ್ಬ ಮಾನುಕುಲ ಪ್ರೇಮಿಯೂ ಆಗಿದ್ದರು.

ಅವರೀಗ ಮಗುವಿನ ಜೀವವನ್ನುಳಿಸುವುದು ಅವಶ್ಯವಾಯಿತು. ಅದಕ್ಕಾಗಿ ಮಗುವಿನ ಕೈಕಾಲುಗಳನ್ನು ಛೇದಿಸದೆ ಅವರಿಗೆ ಅನ್ಯ ಮಾರ್ಗವಿರಲಿಲ್ಲ. ಹಾಗೆ ಛೇದಿಸಲ್ಪಟ್ಟ ಎರಡೂ ಕೈ ಕಾಲುಗಳ ಅಳತೆಯನ್ನು ಒಂದೇ ಸಮನಾಗಿರಿಸುವಲ್ಲಿ ಹೇಗೋ ಸಫಲರಾದರು. ಅಲ್ಲದೆ ಬಲಗೈಯಲ್ಲಿ ಹೆಬ್ಬೆಟ್ಟಿನ ಒಂದು ಸಣ್ಣ ತುಂಡನ್ನುಳಿಸುವುದೂ ಅವರಿಗೆ ಸಾಧ್ಯವಾಯಿತು. ಆ ಹೆಬ್ಬೆಟ್ಟಿನ ತುಂಡೇ ಅವಳ ಮುಂದಿನ ಜೀವನದಲ್ಲಿ ಮಹತ್ತರ ಪಾತ್ರವಹಿಸಬಹುದೆಂಬ ಆಶಾವಾದ ಡಾ. ಬೀಬ್‌ರವರದು.

ಇತ್ತ ಆ ಪುಟ್ಟ ಬಾಲಕಿಯ ಪೂರ್ವಾಪರಗಳನ್ನರಿಯುವ ಕಾರ್ಯಭಾರವನ್ನೂ ಅವರೇ ವಹಿಸಿಕೊಂಡರು. ಈ ಮೊದಲೇ ಮೇರಿಯನ್ನು ಆಸ್ಪತ್ರೆಗೆ ಸೇರಿಸಿದವರು 'ಲೀ ಹಾಂಗ್ ಚಾಂಗ್' ಎಂಬ ಪ್ರಸಿದ್ಧ ಮನೆತನದವರೆಂದು ಡಾ. ಬೀಬ್‌ರವರಿಗೆ ತಿಳಿದಿತ್ತು. ಹಾಗಾಗಿ ಲೀ ಹಾಂಗ್ ಚಾಂಗ್‌ರ ಭವ್ಯ ನಿವಾಸಕ್ಕೆ ಭೇಟಿ ನೀಡಿ ಅಲ್ಲಿಯ ಕೆಲಸದವರನ್ನು ವಿಚಾರಿಸಲಾಗಿ, ಮೇರಿ ಅದೇ ಮನೆತನದ, ಚಾಕರಿಗೆ* ಕೊಂಡು ತಂದ ಬಾಲಕಿಯೆಂಬ ವಿಚಾರ ಸ್ಪಷ್ಟವಾಯಿತು. ಈ ವಿಷಯವನ್ನು ಆ ಮನೆಯೊಡೆಯನ ಗಮನಕ್ಕೆ ತಂದಾಗ ಮೇರಿ ಯಾರೋ ತನಗರಿಯದೆಂದೇ ಆತ ವಾದಿಸಿದ. ಈ ಬಗ್ಗೆ ಪತ್ರಿಕೆಯಲ್ಲಿ ಬರೆದು ಜನರ ಗಮನವನ್ನು ಸೆಳೆಯುತ್ತೇವೆಂದು ಡಾ. ಬೀಬ್‌ರವರು ಪರೋಕ್ಷವಾಗಿ ಎಚ್ಚರಿಸಲು, ಆ ಮನೆಯೊಡೆಯನು ಸಂಧಾನಕ್ಕೊಪ್ಪಿದ. ಹಾಗೂ ಹೀಗೂ ಚೌಕಾಶಿ ಮಾಡಿ, ಮಗುವಿನ ಭಾವೀ ಜೀವನಕ್ಕೆ ಅನುಕೂಲವಾಗುವಂತೆ ಮೂರು ಸಾವಿರ 'ಟೇಲ್'§ಗಳನ್ನು ಕೊಡಲೊಪ್ಪಿದ. ಆದರೆ, ಇನ್ನು ಮುಂದೆ ತಮಗೂ ಮೇರಿಗೂ ಯಾವುದೇ ಸಂಬಂಧವಿಲ್ಲವೆಂದು ಒತ್ತಿ ಹೇಳಿದ. ಹಾಗೇ ಆಗಲೆಂದೊಪ್ಪಿದ ಡಾ. ಬೀಬ್ ಆ ಮೂರು ಸಾವಿರ ಟೇಲ್‌ಗಳನ್ನು ಬ್ಯಾಂಕಿನಲ್ಲಿ ಮೇರಿಯ ಹೆಸರಿನಲ್ಲೊಂದು ಖಾತೆಯನ್ನು ತೆರೆದು ಅದರಲ್ಲಿ ಠೇವಣಿ ಇಟ್ಟರು. ಅದರಿಂದ ಬರುವ ಬಡ್ಡಿಯು ಮೇರಿಯ ಮುಂದಿನ ಜೀವನಕ್ಕೆ ಸಹಾಯವಾಗುವುದೆಂದು ಅವರಾಗಲೇ ತೀರ್ಮಾನಿಸಿದ್ದರು.

ದಿನಗಳುರುಳಿ ವಾರಗಳಾದವು. ವಾರಗಳು ತಿಂಗಳುಗಳಾದವು. ತನ್ನನ್ನು ಕಾಣಲು ವೈದ್ಯರು ಹಾಗೂ ದಾದಿಗಳಲ್ಲದೆ, ಡಾ. ಬೀಬ್‌ರ ಪತ್ನಿ ರೋಸ್‌ರವರೂ ಬರುತ್ತಿದ್ದುದನ್ನು ಮೇರಿ ಗಮನಿಸಿದಳು. ಶ್ರೀಮತಿ ರೋಸ್‌ರಿಗೆ ಮೇರಿಯೆಂದರೆ ಅತೀವ ಮಮತೆ.

ತನ್ನ ಕೈಕಾಲುಗಳನ್ನಾವರಿಸಿದ್ದ ಕಟ್ಟುಗಳನ್ನು ಬಿಚ್ಚಿದ ಮೇಲೂ ಮೇರಿಗೆ ತಲೆ ಬಾಚಿಕೊಳ್ಳಲು, ಊಟ ಮಾಡಲು ಮತ್ತಿತರ ಕಾರ್ಯಗಳಿಗೆ ಇನ್ನೊಬ್ಬರ ಸಹಾಯ ಅನಿ-

---

* ಅಂದಿನ ದಿನಗಳಲ್ಲಿ ಕುಲೀನರ ಮನೆ ಚಾಕರಿಗೆ ಸಣ್ಣ ಸಣ್ಣ ಮಕ್ಕಳನ್ನು ಬಡವರಿಂದ ಖರೀದಿಸುವುದು ಒಂದು ಸಾಮಾನ್ಯ ಪರಿಪಾಠವಾಗಿತ್ತು.

§ ಅಂದಿನ ಒಂದು ಟೇಲ್ ಇಂದಿನ ಇಪ್ಪತ್ತು ರೂಪಾಯಿಗಳಿಗೆ ಸಮ.

ಕಾರ್ಯವೇ ಆಯಿತು. ಒಂದು ದಿನ ಶ್ರೀಮತಿ ಬೀಬ್‌ರು ಪೇಟೆಯಿಂದ ಮೇರಿಗೆ ಒಂದು ಹೊಸ ತೆರನಾದ ಚಮಚೆಯನ್ನು ಕೊಂಡು ತಂದರು. ಚಮಚೆಯ ಚಿಕ್ಕ ಹಿಡಿಯಲ್ಲಿದ್ದ ಕಿಂಡಿಯಲ್ಲಿ ತನ್ನ ಮೋಟು ಹೆಬ್ಬೆರಳನ್ನು ತೂರಿಸಿ ತಟ್ಟೆಯಲ್ಲಿದ್ದ ಆಹಾರ ಪದಾರ್ಥವನ್ನು ಎತ್ತಿಕೊಂಡು ತಾನೂ ತಿಂದದ್ದಲ್ಲದೆ, ತನಗೆ ಚಮಚೆಯನ್ನು ತಂದಿತ್ತ ಶ್ರೀಮತಿ ಬೀಬ್‌ರಿಗೂ ಉಣಿಸಿದಳು ಮೇರಿ ಲ್ಯು! ಇದು ಸ್ವಾಯತ್ತತೆಯತ್ತ ಆಕೆಯಿಟ್ಟ ಮೊದಲ ಹೆಜ್ಜೆ. "ಹಾಗೆ ನನ್ನ ಕೈಯಿಂದ ನಾನೇ ಊಟ ಮಾಡಲಾರಂಭಿಸಿದ ಬಳಿಕ ನನಗೆ ಊಟದಲ್ಲಿ ಹೆಚ್ಚಿನ ಆಸಕ್ತಿ ಹಾಗೂ ರುಚಿ ಕಂಡು ಬಂತು" ಎಂದಳು ಮೇರಿ. ಗಾಲಿಯ ಕುರ್ಚಿ ಬಂದ ಮೇಲೆ ಅದರಲ್ಲಿ ಕುಳಿತು ಓಡಾಡಿದ ಮೇರಿ ನಡೆದಾಡಿದಷ್ಟೇ ಸಂತೋಷ ಪಟ್ಟಳು.

ಕೆಲ ಕಾಲದಲ್ಲೇ ಮೇರಿಯನ್ನು ನ್ಯಾನ್ಕಿಂಗಿನ ಮೆಥಾಡಿಸ್ಟ್ ಬಾಲಕಿಯರ ಶಾಲೆಯ ಶಿಶು ವಿಹಾರಕ್ಕೆ ಸೇರಿಸಲಾಯಿತು. ಅದೊಂದು ಹಿರಿಯ ವಿದ್ಯಾಸಂಸ್ಥೆಯಾಗಿತ್ತು. ಅಲ್ಲಿಯ ಶಿಶು ವಿಹಾರಕ್ಕೆ ಸೇರಿದ ಯಾವುದೇ ಬಾಲಕಿಯು ಅದೇ ಸಂಸ್ಥೆಯ ಆಶ್ರಯದಲ್ಲಿ ಪ್ರೌಢ ಶಾಲೆಯ ಕೊನೆಯ ವರ್ಷದವರೆಗೂ ವ್ಯಾಸಂಗ ನಡೆಸಿ ಬಳಿಕ ವಿಶ್ವವಿದ್ಯಾಲಯದಲ್ಲಿ ತರಬೇತಿ ಪಡೆದು ಅದೇ ಸಂಸ್ಥೆಯಲ್ಲಿ ಶಿಕ್ಷಕ ವೃತ್ತಿಯನ್ನು ಕೈಕೊಳ್ಳಬಹುದಾಗಿತ್ತು. ಅಂಗವಿಕಲಳಾದ್ದರಿಂದ ಮೇರಿಯ ಸಹಾಯಕ್ಕೆ ಪ್ರೌಢ ಶಾಲೆಯ ಬಡ ಹುಡುಗಿಯೊಬ್ಬಳನ್ನು ದಾದಿಯನ್ನಾಗಿ ನೇಮಿಸಲಾಯಿತು. ಆ ಹುಡುಗಿಯ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಮೇರಿಗೆ ಬರುತ್ತಿದ್ದ ಬಡ್ಡಿಯ ಹಣದಿಂದಲೇ ಪಾವತಿ ಮಾಡಲು ವ್ಯವಸ್ಥೆ ಮಾಡಲಾಗಿತ್ತು.

ತನ್ನ ಸಮವಯಸ್ಕರೊಡನೆ ಆಟ, ಪಾಠ ಗಳಲ್ಲಿ ಮೈಮರೆತ ಮೇರಿಗೆ ಕಾಲದ ಪರಿವೆಯೆ ಇಲ್ಲವಾಯಿತು. ತನಗೆ ಬಡಿಸಿದ ಆಹಾರವನ್ನು ತನ್ನ ಕೈಯ್ಯಾರೇ ತಿನ್ನುವ ಚಾಕಚಕ್ಯ ಮೇರಿ ಯಲ್ಲಿದ್ದುದು ಸರಿಯಷ್ಟೇ. ಇದೀಗ ಮೇರಿಯ ಓಡಾಟಕ್ಕೆ, ಮಕ್ಕಳ ತಳ್ಳುವ ಬಂಡಿ(ಪ್ರ್ಯಾಮ್) ಯನ್ನು ಬಳಸಲಾಯಿತು. ಮೇರಿಯನ್ನು ಓಡಾಡಿಸಿಕೊಂಡು ಬರಲು ಅವಳ ಸಹಪಾಠಿ ಗಳಿಗೆ ಖುಷಿಯೋಖುಷಿ. ಒಂದು ದಿನ ಮಧ್ಯಾಹ್ನ ಬಿಡುವಿನ ವೇಳೆಯಲ್ಲಿ ಮೇರಿಯು ತನ್ನ ಪಾಡಿಗೆ ತಾನು ಆಟವಾಡಿಕೊಂಡಿದ್ದಳು. ಆಗ ಅವಳ ಕಣ್ಣು ಹತ್ತು ಮಾರು ದೂರದಲ್ಲಿದ್ದ ಆಟದ ಬೊಂಬೆಯೊಂದರ ಮೇಲೆ ಬಿತ್ತು. ಅದ-ನ್ನೆತ್ತಿಕೊಡಲು ಸನಿಹದಲ್ಲಾರೂ ಇರಲಿಲ್ಲ. ತಾನೇನು ಮಾಡುತ್ತಿರುವೆನೆಂಬುದು ಅರಿವಿಗೆ ಬರುವ ಮೊದಲೇ ಅವಳು ಮಂಚದಿಂದ ಕೆಳಗಿಳಿದು ತನ್ನ ಮೊಂಡು ಕಾಲಿನಿಂದಲೇ ನಡೆಯುತ್ತ ಹೋಗಿ ಆ ಆಟಿಕೆಯನ್ನು ಎತ್ತಿಕೊಂಡು ಮತ್ತೆ ತನ್ನ ಮಂಚವನ್ನು ಹತ್ತಿ ಪುನಃ ಆಟದಲ್ಲಿ ಮೈ ಮರೆತಳು. ಇದೀಗ ತಾನು ಮೊದಲಬಾರಿಗೆ ಕೆಲವು ಹೆಜ್ಜೆಗಳನ್ನಿರಿಸಿದೆನೆಂಬುದೂ ಆಕೆಯ ಅರಿವಿಗೆ ಬರಲಿಲ್ಲ!

ಮೇರಿ ಒಂದನೆಯ ಇಯತ್ತೆಗೆ ಬಡ್ತಿ ಹೊಂದು ವಷ್ಟರಲ್ಲಿ, ತನ್ನ ಸಹಪಾಠಿಗಳು ಓಡಾಡುತ್ತಿದ್ದ ಡೆಯಲ್ಲೆಲ್ಲಾ ಆಕೆಯೂ ನಡೆದಾಡುತ್ತಿದ್ದಳು. ಮೊಂಡು ಕಾಲಿನ ಮೆದು ಚರ್ಮಕ್ಕೆ ನೋವಾಗ ದಿರುವಂತೆ ಹತ್ತಿಯನ್ನು ತುಂಬಿದ ಒರಟು ಬಟ್ಟೆಯ ಕಾಲುಚೀಲಗಳನ್ನು ಆಕೆಯ ಮೊಳ ಕಾಲಿಗೆ ತೊಡಿಸಲಾಯಿತು. ಇದರಿಂದ ಮೇರಿ ಇನ್ನಷ್ಟು ನಿರಾತಂಕವಾಗಿ ನಡೆಯುವಂತಾ ಯಿತು. ಕೆಲಕಾಲದಲ್ಲೇ ತನ್ನ ಸಹಪಾಠಿಗಳಿ ಗಿಂತ ವೇಗವಾಗಿ ಓಡಬಲ್ಲವಳಾದಳು ಮೇರಿ!

*

ಒಮ್ಮೆ ಆಕೆಯ ಕೈಕಾಲುಗಳಲ್ಲಿದ್ದ ಮೂಳೆಯ ಸಿಬಿರುಗಳನ್ನು ತೆಗೆದು ಆ ಜಾಗವನ್ನು ಕಸಿ ಮಾಡಲು ಒಂದು ತಿಂಗಳವರೆಗೆ ಮೇರಿಯನ್ನು ಆಸ್ಪತ್ರೆಗೆ ಸೇರಿಸಲಾಯಿತು. ತನ್ನ ಪದಿನೈದ ನೆಯ ವಯಸ್ಸಿನವರೆಗೆ ಆಗಾಗ ಮೇರಿ ಇಂಥ ಶಸ್ತ್ರಚಿಕಿತ್ಸೆಗೊಳಗಾಗಬೇಕಾಗುತ್ತಿತ್ತು. ಶಾಲೆಯ ಉಳಿದವರಿಗೆ ಬಂದಂತೆ ತನಗಾರೂ ಉಡುಗೊರೆ ಕಳಿಸುವದಿಲ್ಲವೆಂಬ ಕೊರಗು ಮೇರಿಗೆ.

ಒಂದು ಹಬ್ಬದ ದಿನ ಆಕೆಯ ಕೈಗೂ ಒಂದು ಪೊಟ್ಟಣ ಬಂದು ಸೇರಿತು. ಅದನ್ನು ಪಡೆಯು ವಾಗ ಆನಂದಾತಿರೇಕದಿಂದ ಮೇರಿಯ ಕೈಗಳು

ಕಂಪಿಸುತ್ತಿದ್ದವು. ಪೊಟ್ಟಣವನ್ನು ಬಿಚ್ಚಿ ನೋಡಿದ ಮೇರಿಯ ಆನಂದಕ್ಕೆ ಪಾರವೇ ಇಲ್ಲ. ಪೊಟ್ಟಣದಲ್ಲಿದ್ದುದು ಸೊಗಸಾದ ಬಣ್ಣಬಣ್ಣದ ಒಂದು ಜೊತೆ ರಿಬ್ಬನ್ನುಗಳು! ತನ್ನ ಬಗ್ಗೆ ವಿಚಾರಿಸಿಕೊಳ್ಳುವ ಶ್ರೇಯೋಭಿಲಾಷಿಗಳು ಇದ್ದಾರಲ್ಲ ಎಂಬುದು ಮೇರಿಯ ಮನಸ್ಸಿಗೆ ಎಷ್ಟೋ ಮುದ ನೀಡಿತ್ತು. ಅದನ್ನು ಕಳುಹಿಸಿದವರು ಶ್ರೀಮತಿ ಬೀಬ್ ಅವರೇ. ಕ್ರಿಸ್‌ಮಸ್ ಹಾಗೂ ನೂತನ ವರ್ಷಾರಂಭ ದಿನಗಳಲ್ಲಿ ಇತರರಿಗೆ ಬಂದಂತೆ ಮೇರಿಗೂ ಶ್ರೀಮತಿ ಬೀಬ್‌ರಿಂದ ಕಾಣಿಕೆಗಳು, ಸಿಹಿ ತಿನಿಸುಗಳು ಬಂದು ಮುಟ್ಟುತ್ತಿದ್ದವು.

ಮೇರಿಗೆ ಶ್ರೀಮತಿ ಬೀಬ್‌ರಷ್ಟೇ ಪ್ರಿಯವಾದ ವ್ಯಕ್ತಿ ಆ ವಿದ್ಯಾಶಾಲೆಯ ಪ್ರಾಚಾರ್ಯೆ ಲಾರಾ-ವೈಟ್ ಎಂಬ ಅವಿವಾಹಿತ ಮಹಿಳೆ. ಮೇರಿಯನ್ನು ಶಾಲೆಗೆ ಸೇರಿಸಿಕೊಂಡದ್ದಲ್ಲದೆ ಅವಳನ್ನು ದತ್ತು ತೆಗೆದುಕೊಂಡ ಕರುಣಾಮಯಿ ಲಾರಾ ವೈಟ್. ಮೇರಿ ಲ್ಯುಳಿಗೆ ಸೂಕ್ತ ಮಾರ್ಗದರ್ಶನವನ್ನು ನೀಡಿ ಒಂದು ಹಾದಿಗೆ ಹಚ್ಚಿದವರೂ ಅವರೇ. ಚೀನದಲ್ಲಿ ಮಹಿಳಾ ನಿಯತಕಾಲಿಕವೊಂದನ್ನು ಹೊರತರುವಲ್ಲಿ ಲಾರಾ ವೈಟರೇ ಮೊದಲಿಗರು. ಆ ಪತ್ರಿಕೆಯ ಹೆಸರು 'ವುಮೆನ್ಸ್ ಮೆಸ್ಸೆಂ-ಜರ್'.

ಮೇರಿಯ ಸೂತ್ರಕಿತ್ತ ಜೀವನದಲ್ಲಿ ಉದ್ಭವಿಸಿದ ಶೂನ್ಯತೆಯನ್ನು ತುಂಬಲು ಮೇರಿಗೆ ಶ್ರೀಮತಿ ಬೀಬ್ ಹಾಗೂ ಲಾರಾ ವೈಟ್ ಇಬ್ಬರೂ ಊರುಗೋಲಾಗಿದ್ದರು. ಒಬ್ಬರು ಆಕೆಯ ಮೇಲೆ ಪ್ರೀತಿಯ ಹೊನಲನ್ನೇ ಹರಿಸಿದರೆ, ಮತ್ತೊಬ್ಬರು ಆತ್ಮವಿಶ್ವಾಸದ ಮಹಾಪೂರವನ್ನೇ ಆಕೆಯಲ್ಲಿ ತುಂಬಿದ್ದರು. ಅವಳ ಹಳೆಯ ಹೆಸರಾದ 'ಲ್ಯು-ಯಂಗ್-ಯಂಗ್'ಅನ್ನು ಲಾರಾ ವೈಟ್‌ರೇ ಬದಲಿಸಿ 'ಮೇರಿ ಲ್ಯು' ಎಂದು ಹೊಸ ಹೆಸರು ಕೊಟ್ಟರು.

ಈ ಸಂದರ್ಭದಲ್ಲಿ ಮತ್ತೊಮ್ಮೆ ತನ್ನ ತಾಯಿಯನ್ನು ಕಾಣಬೇಕೆಂಬ ಹಂಬಲ ಅವಳಲ್ಲಿ ಬಲವಾಗಿ, ಶಾಲೆಯ ಆಯಾಗಳ ಸಹಾಯದಿಂದ ಗುಟ್ಟಾಗಿ ತನ್ನವರು ವಾಸಿಸುತ್ತಿದ್ದ 'ವಾನ್-ಫು-ಶಿಯಾಂಗ್' ಪ್ರಾಂತ್ಯಕ್ಕೆ ಭೇಟಿ ನೀಡಿದಳು. ಆದರೆ ತಾನು ತನ್ನ ತಾಯಿಯೊಂದಿಗೆ ವಾಸಿಸುತ್ತಿದ್ದ ಮನೆಯನ್ನು ಗುರುತಿಸಲಾಗದೆ ಮೇರಿ ನಿರಾಶಳಾಗಿ ಹಿಂದಿರುಗಿದ್ದಳು.

ಮೇರಿ ಸ್ವಭಾವತಃ ಚುರುಕು ಹುಡುಗಿ. ಬುದ್ಧಿವಂತಿಕೆಯಲ್ಲಂತೂ ಇಡೀ ತರಗತಿಯನ್ನೇ ಮೀರಿಸುತ್ತಿದ್ದಳು. ಹಾಗಾಗಿ ಸಹಪಾಠಿಗಳಷ್ಟೇ ಅಲ್ಲದೆ ಅವಳು ಅಧ್ಯಾಪಕ ವರ್ಗಕ್ಕೂ ಅಚ್ಚುಮೆಚ್ಚಿನವಳಾಗಿದ್ದಳು. ಒಂದು ದಿನ ಆಕೆಯನ್ನು ತನ್ನ ತರಗತಿಯಲ್ಲಿ ಕಂಡ ಹೊಲಿಗೆ ಕ್ಲಾಸಿನ ಅಧ್ಯಾಪಕರಿಗೆ ಆಶ್ಚರ್ಯವಾಯಿತು. ಕೈ ಕಾಲಿಲ್ಲದ ಈ ಹುಡುಗಿಗೆ ಹೊಲಿಗೆ ಕಲಿಸುವುದೆಂತು? ಎಂದವರು ಯೋಚಿಸಿದರೂ, ಏನನ್ನೂ ಹೇಳದೆ ಮೇರಿಯನ್ನು ಅವಳ ಪಾಡಿಗೆ ಆಡಿಕೊಳ್ಳಲು ಬಿಟ್ಟುಬಿಟ್ಟರು. ಹೊಲಿಗೆಯ ತರಬೇತಿ ಪಡೆಯುತ್ತಿದ್ದ ಪ್ರತಿಯೊಬ್ಬ ವಿದ್ಯಾರ್ಥಿನಿಯ ಚಲನವಲನವನ್ನು ಬಿಟ್ಟ ಕಣ್ಣಿನಿಂದ ವೀಕ್ಷಿಸುತ್ತಿದ್ದಳು ಮೇರಿ. ಹೀಗೊಮ್ಮೆ ಎಲ್ಲರ ಕಣ್ತಪ್ಪಿಸಿ ಒಂದು ಸೂಜಿ, ದಾರ ಹಾಗೂ ಒಂದು ತುಂಡು ಬಟ್ಟೆಯನ್ನು ಸಂಪಾದಿಸಿ ಬಟ್ಟೆ ಹೊಲಿಯುವ ಪ್ರಯೋಗವನ್ನು ತಾನೂ ಕೈಕೊಂಡಳು. ಮೇಜಿನ ಹಲಗೆಗೆ, ಸೂಜಿಯನ್ನು ಹೇಗೋ ಕಷ್ಟದಿಂದ ಚುಚ್ಚಿ, ಹೇಗೋ ಮಾಡಿ ಅದರೊಳಗೆ ದಾರವನ್ನು ಪೋಣಿಸುವುದರಲ್ಲಿ ಮೇರಿ ಯಶಸ್ವಿಯಾದಳು. ಆದರೆ, ಇದು ಒಂದೇ ದಿನದಲ್ಲಿ ಸಿದ್ಧಿಯಾದ ಚಾತುರ್ಯವಲ್ಲ. ಹಲವಾರು ದಿನಗಳವರೆಗೆ ಗಮನವಿಟ್ಟು ನಿರಂತರ ಯತ್ನ ನಡಸಿದ್ದರ ಫಲ. "ಅಷ್ಟೇ ಅಲ್ಲ, ನನ್ನ ಸತತ ಪ್ರಯತ್ನದಿಂದ ಇತರ ಹುಡುಗಿಯರಂತೆ ಹೊಲಿದು ಸಿದ್ಧಪಡಿಸಿದ್ದ ನನ್ನ ಮಾದರಿಯನ್ನು ಹೊಲಿಗೆ ಅಧ್ಯಾಪಕಿಗೆ ನಾನೂ ತೋರಿಸಿದಾಗ ಸಹಪಾಠಿಗಳಂತೂ ಸರಿ, ಸ್ವತಃ ಅಧ್ಯಾಪಕಿಯೂ ದಂಗುಬಡಿದು ಹೋದರು," ಎಂದು ಮೇರಿ ನಗುತ್ತ ತಾನು ಹೊಲಿಗೆ ಕಲಿತ ಬಗೆಯನ್ನು ವಿವರಿಸಿದಳು. ಮುಂದೆ ತನ್ನ 'ಕೈ ಚಳಕ'ದಿಂದ ಹೆಣಿಗೆ ಕೆಲಸವನ್ನು ಕಲಿತ ಮೇರಿ ತಾನು ಹೆಣೆದ ಉಣ್ಣೆಯ ಶಾಲೊಂದನ್ನು ಶ್ರೀಮತಿ ಬೀಬ್‌ರಿಗೂ, ಸ್ವೆಟರೊಂದನ್ನು ಲಾರಾ ವೈಟ್‌ರಿಗೂ ಉಡುಗೊರೆಯನ್ನಾಗಿತ್ತಳು.

ಆದರೆ ಪ್ರಾಚಾರ್ಯ ಲಾರಾ ವೈಟ್-ತಮ್ಮ ಹುದ್ದೆಗೆ ರಾಜೀನಾಮೆ ಇತ್ತು ಶಾಂಘಾಯ್‌ನಲ್ಲಿ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಯ ಏಳ್ಗೆಗಾಗಿ ಅವಿರತ ಶ್ರಮಿಸತೊಡಗಿದರು. ಆದರೂ ಮೇರಿಯೊಂದಿಗಿನ ಅವರ ಸಂಬಂಧ ಕಳಚಲಿಲ್ಲ.

ಆಗ ಮೇರಿಗೆ ೧೪ ವರ್ಷ ವಯಸ್ಸಿರಬಹುದು. ಒಂದು ದಿನ ಶಾಲೆ ಮುಗಿದ ಮೇಲೆ ಮೇರಿಗೆ ಪ್ರಾಚಾರ್ಯರಿಂದ ಕರೆ ಬಂತು. ಹೋದಳು. ಅವಳನ್ನು ಶಾಂಘಾಯ್‌ಗೆ ಕರೆದು ಕರೆದುಕೊಂಡು ಹೋಗಲು ಮಹಿಳೆಯೊಬ್ಬಳು ಅಲ್ಲಿ ಕಾದಿದ್ದಳು.

"ನಾವು ಶಾಂಘಾಯ್ ಮುಟ್ಟಿದೊಡನೆ, ನನ್ನನ್ನು ಲಾರಾ ವೈಟ್‌ರ ಬಳಿ ಕರೆದುಕೊಂಡು ಹೋದರು. ನನಗೆ ಎರಡು ಕೃತಕ ಕಾಲುಗಳನ್ನು ಜೋಡಿಸಲಾಗುತ್ತದೆಂದೂ, ನೈಜ ಕಾಲುಗಳಿಗೂ ಅವಕ್ಕೂ ಒಂದು ಚೂರೂ ವ್ಯತ್ಯಾಸವಿರುವುದಿಲ್ಲವೆಂದೂ ತಿಳಿದು ಬಂತು. ಈ

ವಿಷಯವು ನನಗೆ ವಿಶದವಾದಂತೆಲ್ಲಾ, ಒಂದು ತೆರನಾದ ಕುತೂಹಲವು ನನ್ನನ್ನಾವರಿಸಿತು. ಅದೇ ಸಮಯಕ್ಕೆ ನಾನು ಕೃತಕ ಕಾಲುಗಳನ್ನು ಧರಿಸಿ ಅನಾಯಾಸವಾಗಿ ಓಡಾಡಬಲ್ಲೆನೇ ಎಂಬ ಸಂಶಯವೂ ನನ್ನಲ್ಲುಂಟಾಯಿತು" ಎಂದಳು ಮೇರಿ.

ಶಾಂಘಾಯ್‌ನಲ್ಲಿ ಮೇರಿಗೆ ಹೊಂದಿಸಬೇಕಾದ ಕಾಲುಗಳ ಅಳತೆಯನ್ನು ತೆಗೆದುಕೊಳ್ಳಲಾಯಿತು. ನಂತರ ಆಕೆಯನ್ನು ನಗರದ ಹೊರ ವಲಯದಲ್ಲಿದ್ದ ಆಸ್ಪತ್ರೆಯೊಂದಕ್ಕೆ ದಾಖಲು ಮಾಡಲಾಯಿತು. ಮೇರಿಗೆ ಪರಿಚಿತರಾದವರೊಬ್ಬರೂ ಅಲ್ಲಿರಲಿಲ್ಲ. ಮೇಲಾಗಿ ಅಲ್ಲಿಯವರ ಭಾಷಾ ಶೈಲಿಗೂ ಅವಳ ಆಡು ಭಾಷೆಗೂ ಅಗಾಧ ವ್ಯತ್ಯಾಸವೇ ಇತ್ತು. ಮೇರಿಗೆ ಅಂಗ್ಲ ಭಾಷೆಯ ಪರಿಚಯವಿದ್ದುದು ಕೆಲವೇ ಪದಗಳ ಮೂಲಕ. ಏಕೆಂದರೆ, ಅವಳ ವಿದ್ಯಾಭ್ಯಾಸವೆಲ್ಲಾ ಚೀನೀ ಭಾಷೆಯಲ್ಲೇ ಆಗಿತ್ತು. ಹಾಗಾಗಿ ತಾನೇನೂ ಹೇಳಿವರೂ, ಎದುರಿನಲ್ಲಿದ್ದವರಿಗೆ ಏನೊಂದೂ ತಿಳಿಯದೆ ಮೇರಿ ಬಹಳ ಪೇಚಾಟಕ್ಕೆ ಸಿಲುಕಿದಳು. ಅವಳು ಆ ಆಸ್ಪತ್ರೆಯಲ್ಲಿ ಒಂದು ತಿಂಗಳವರೆಗೂ ತಂಗಿದ್ದಳು! ಅವಳ ಸಹಪಾಠಿಗಳಿಗೆ ಮೇರಿಯು ಶಾಂಘಾಯ್‌ಗೆ ಹೋದದ್ದೇಕೆಂದು ಗೊತ್ತಾಗಲೇ ಇಲ್ಲ!

"ನಾನು ಸ್ಯಾನ್ಕಿಂಗ್ ತಲುಪಿದ ಹಲವಾರು ವಾರಗಳ ನಂತರ ಒಂದು ದಿನ ನನಗೆ ಪ್ರಾಚಾರ್ಯರಿಂದ ಕರೆ ಬಂತು. ಅವರ ಕೋಣೆಯಲ್ಲಿ ನನ್ನ ನೆಚ್ಚಿನ ದಾದಿ 'ಸು' (HSU) ನನಗಾಗೇ ಕಾಯುತ್ತಿದ್ದಳು. 'ಸು' ನನಗೆ ಚಿಕ್ಕಂದಿನಿಂದಲೂ ಪರಿಚಿತಳು. ನನ್ನನ್ನು ಎತ್ತಿ ಆಡಿಸಿ ಬೆಳೆಸಿದವರಲ್ಲಿ ಆಕೆಯೇ ನನಗೆ ಬಹಳ ಅಚ್ಚುಮೆಚ್ಚು. ಆಕೆಯೊಂದಿಗೆ ಇತರರೂ ನನ್ನತ್ತಲೇ ನೋಡುತ್ತ ಮುಗುಳ್ನಗುತ್ತಿದ್ದರು. ನನಗೆಂದೇ ತಯಾರಿಸಲ್ಪಟ್ಟಿದ್ದ ಕೃತಕ 'ಕಾಲು'ಗಳು ಅಲ್ಲಿ ನನಗಾಗಿ ಕಾಯುತ್ತಿದ್ದವು.

"ದಾದಿ 'ಸು' ಜನ್ಮತಃ ಕರುಣಾಮಯಿ. ಕೃತಕ ಕಾಲುಗಳನ್ನು ಆಕೆಯೇ ನನಗೆ ಹೊಂದಿಸಿ ಎದ್ದು ನಿಲ್ಲಲು ಸಹಾಯ ಮಾಡಿ, ಆ ಕಾಲುಗಳ ಕಾರ್ಯ ವೈಖರಿಯನ್ನೂ ನನಗೆ ತಿಳಿ ಹೇಳಿದಳು. ಎದ್ದು ನಿಂತ ನನಗೆ ನನ್ನ ಕಾಲುಗಳು ನವಿರಾಗಿ ಕಂಪಿಸುತ್ತಿದ್ದುದು ಅರಿವಿಗೆ ಬಂತು. ನಾನು ಮರಗಾಲು (STILT)ಗಳ ಮೇಲೆ ನಿಂತು ದೊಂಬರಾಟ ನಡೆಸುತ್ತಿರುವೆನೇನೋ ಎಂದೆನಿಸಿತು. ಅಲ್ಲದೆ, ಅವುಗಳನ್ನು ಹಾಕಿಕೊಂಡು ನಡೆದಾಡಿದಾಗ ಭೂಮಿಯ ಸ್ಪರ್ಶಾನುಭವವೇ ಆಗುತ್ತಿರಲಿಲ್ಲ. ಇದರೊಟ್ಟಿಗೆ ನಾನು ಬಹಳ ಎತ್ತರವಾದಂತೆ ನನಗನಿಸಿತು," ಎಂದಳು ಮೇರಿ.

ದಾದಿ 'ಸು' ಹಾಗೂ ಮೇರಿಯ ನಂಟು ಬಹಳ ಹಳೆಯದಷ್ಟೇ. ಮೇರಿಗೆ ಆಕೆಯ ಮೂಲಕವೇ ತನ್ನ ಜೀವನ ವೃತ್ತಾಂತ ಅಲ್ಪ ಸ್ವಲ್ಪ ತಿಳಿದು ಬಂದದ್ದು. ಮೇರಿ ಹುಟ್ಟಿದುದೇ ಕಡು ಬಡವರ ಮನೆಯಲ್ಲಿ. ಸಾಲದ್ದಕ್ಕೆ ಮನೆ ತುಂಬ ಮಕ್ಕಳು. ಅವಳ ಅಪ್ಪ ಒಬ್ಬ ಅಫೀಮುಖೋರ. ತನಗೆ ಅಫೀಮಿಗೆ ಹಣದ ಅಡಚಣೆಯಾದ್ದರಿಂದ ಮೇರಿಯನ್ನು 'ಲೀ ಹಂಗ್ ಚಾಂಗ್' ಮನೆವಾಳ್ತನಕ್ಕೆ ಮಾರಿ ಆ ಹಣದಿಂದ ಅಫೀಮು ಸೇದಿ ಮಗಳನ್ನು ಮರೆತ ಭೂಪ ಆತ. ಅತಿವೃಷ್ಟಿ, ಅನಾವೃಷ್ಟಿಗಳೆರಡೂ ಒಮ್ಮೆಗೇ ಚೀನದಲ್ಲಿ ಎಲ್ಲೆಡೆಯೂ ತಾಂಡವಾಡುತ್ತಿದ್ದ ಕಾಲವದು. ಮೇರಿ ಚೀನದ ಈ ಅವಳಿ ಬವಣೆಗಳಿಗೆರವಾದ ಬಲಿಪಶು.

*

ಯಾವುದೇ ವ್ಯಕ್ತಿಯ ಭವಿಷ್ಯವನ್ನು ಭೌತಿಕವಾಗಿ, ಬೌದ್ಧಿಕವಾಗಿ ಬದಲಾಯಿಸಲು ೧೫ ರಿಂದ ೨೦ ವಸಂತಗಳಷ್ಟರ ನಡುವಿನ ಐದು ವರ್ಷಗಳು ಅತಿ ಪ್ರಶಸ್ತವಾದ ಸಮಯವೆಂಬುದು ಡಾ. ಬೀಬ್‌ರಿಗೆ ವೃತ್ತಿವೇದ್ಯ ಸಂಗತಿಯಾಗಿತ್ತು. ಅವರು ಮೇರಿಯ ಈ 'ಪರ್ವಕಾಲ'ದಲ್ಲಿ ತಾನಾಕೆಯ ಪರವಾಗಿ ಮಾಡಬೇಕಾದ ಕರ್ತವ್ಯಗಳನ್ನು ಮುಂದಾಗಿಯೇ ಆಲೋಚಿಸಿದ್ದುದರ ಫಲವಾಗಿಯೆ ಕೃತಕ ಕಾಲುಗಳು ಬಂದವು.

ಎಲ್ಲೋ ಅಳತೆ ತೆಗೆದುಕೊಂಡು, ಆ ಮಾಹಿತಿಯನ್ನು ಬೇರೆಲ್ಲಿಗೋ ಕಳುಹಿಸಿ ಅದನ್ನನುಸರಿಸಿ ಬೇರಾರೋ ತಯಾರಿಸಿ ಕಳುಹಿಸಿದ್ದ ಆ ಕೃತಕ ಕಾಲುಗಳು ಮೇಲುನೋಟಕ್ಕೆ ನೈಜ ಕಾಲುಗಳಂತೆ ಕಂಡುಬಂದರೂ ಅವನ್ನು ಧರಿಸಿ

ಓಡಾಡಿದವರಿಗಷ್ಟೇ ಗೊತ್ತು. ಅದರಿಂದೊದಗುವ ತೊಂದರೆ ಏನೆಂದು.

ಮೇರಿಯ ಮೊಣಕಾಲ ಬಳಿ ಛೇದಿಸಿದ್ದ ಭಾಗದಿಂದ ವಯೋಮಾನಕ್ಕನುಗುಣವಾಗಿ ಅವಳ ಕಾಲು ಮೂಳೆಗಳು ಚಿಗುತು ಬೆಳೆಯುತ್ತಲೇ ಇದ್ದವು. ಹಾಗಾಗಿ ಒಮ್ಮೊಮ್ಮೆ ಅವುಗಳನ್ನು ಶಸ್ತ್ರಚಿಕಿತ್ಸೆ ಕ್ರಿಯೆಗಳ ಮೂಲಕ ಮೊಣಕಾಲವರೆಗೂ ಸಪಾಟಾಗಿ ತೆಗೆದು ಹಾಕಬೇಕಾಗಿ ಬರುತ್ತಿತ್ತು. (ಸಂ)ವೇದನ ನಾಶಕ ಔಷಧಿಗಳ ಬಳಕೆ ಚೀನದಲ್ಲಿ ಆಗ ಬಹಳ ತುಟ್ಟಿ. ಹಾಗೊಂದು ವೇಳೆ ಅವು ದಕ್ಕಿದರೂ ಅವುಗಳಿಂದಾಗುತ್ತಿದ್ದ ಪ್ರಯೋಜನವೂ ಅಷ್ಟಕ್ಕಷ್ಟೇ. ಹಾಗಾಗಿ, ಮೇರಿ ಒಳಗಾದ ಶಸ್ತ್ರ ಚಿಕಿತ್ಸೆಗಳಲ್ಲೆಲ್ಲಾ ಬಹುಪಾಲು ಹಲ್ಲುಮುಡಿ ಕಚ್ಚಿಯೇ ನೋವನ್ನು ನಿವಾರಿಸಿಕೊಳ್ಳಬೇಕಾದ ಪರಿಸ್ಥಿತಿ. ಒಮ್ಮೊಮ್ಮೆ ಆಕೆಗೆ ತಾನೇಕಾದರೂ ಈ ಕೃತಕ ಕಾಲುಗಳನ್ನು ಧರಿಸಲು ಒಪ್ಪಿಕೊಂಡೆನೋ ಎಂದೆನಿಸಿದ್ದು ಸುಳ್ಳಲ್ಲ. ಅಂತೂ ಕೊನೆಗೊಮ್ಮೆ ಮೇರಿ, ಆ ಕಾಲುಗಳನ್ನು ಧರಿಸಿ ಸುಲಲಿತವಾಗಿ ಓಡಾಡುವಂತಾದಳು. ಆಕೆ ವಿಶೇಷ ದಿನಗಳು ಹಾಗೂ ಭಾನುವಾರಗಳಂದು ಮಾತ್ರ ಅವುಗಳನ್ನು ಬಹುಕಾಲ ಉಪಯೋಗಿಸುತ್ತಿದ್ದಳು. ಅಂದು ಕಾಲುಗಳಿಲ್ಲದ ಮೇರಿ ಇಂದು ತನ್ನ ಪೋಷಕರ ಎದೆಮಟ್ಟಕ್ಕೆ ಬೆಳೆದು ನಿಂತ ಷೋಡಷಿ.

ನ್ಯಾನ್ಸಿಂಗಿಗೆ ಒಮ್ಮೊಮ್ಮೆ ಬಂದು ಹೋಗುತ್ತಿದ್ದ ಲಾರಾ ವೈಟ್‌ರು ಮೇರಿಯ ನಿಲುವಿನಲ್ಲಾಗಿದ್ದ ಬದಲಾವಣೆಯನ್ನು ಕಂಡು ಬಹಳ ಸಂತೋಷಪಟ್ಟರಲ್ಲದೆ ಅವಳಿಗಾಗಿ ಕೃತಕ ಕೈಗಳನ್ನು ನಿರ್ಮಿಸಲು ಇಂಗ್ಲೆಂಡಿನಲ್ಲಿದ್ದ ಆ ಸಂಸ್ಥೆಗೆ ಒಂದು ಪತ್ರವನ್ನು ಬರೆದರು. ಕೃತಕ ಕೈಗಳು ಮೇರಿಗೆ ಹೇಗೆ ಹೊಂದಿಕೆಯಾಗುತ್ತವೋ ನೋಡಬೇಕೆಂದು ಎಲ್ಲರೂ ಕಾತರರಾಗಿದ್ದರೂ, ಮೇರಿಗೆ ಮಾತ್ರ ಏಟು ತಿಂದ ನಾಯಿಮರಿಗೆ ಮತ್ತೊಂದು ಏಟು ಕೊಡುವಂತೆ ಇದು ಭಾಸವಾಯಿತು. ಈವರೆಗೂ ತಾನು ಒಳಗಾಗಿದ್ದ ಶಸ್ತ್ರ ಚಿಕಿತ್ಸೆಗಳ ಬಗ್ಗೆ ನೆನೆದುಕೊಳ್ಳುತ್ತಿದ್ದಂತೆಯೇ ಅವಳ ಮೈಯೆಲ್ಲಾ ಬೆವರಿಟ್ಟಿತು. ಅಂತೂ ಕೊನೆಗೊಮ್ಮೆ ಎಲ್ಲರ ನಿರೀಕ್ಷೆಯಂತೆ ಕೃತಕ ಕೈಗಳು ಲಾರಾವೈಟರ ನಿವಾಸಕ್ಕೆ ಬಂದು ತಲುಪಿದವು.

ಅದೇ ಸಮಯದಲ್ಲಿ ಮೇರಿ ತನ್ನ ಹೊಸ ವರ್ಷದ ರಜಾ ದಿನಗಳನ್ನು ಕಳೆಯಲು ಲಾರಾ ವೈಟ್‌ರ ಬಳಿಯೇ ಬಂದಿದ್ದಳು. "ಆ ಕೃತಕ ಹಸ್ತಗಳು ಬಹುಪಾಲು ನೈಜ ಹಸ್ತಗಳನ್ನೇ ಹೋಲುತ್ತಿದ್ದವು. ನೈಜ ಹಸ್ತಕ್ಕೆ ಎಲ್ಲೆಲ್ಲಿ ಕೀಲುಗಳಿದ್ದವೋ ಆ ಕೃತಕ ಕೈಗಳಿಗೂ ಅಲ್ಲಲ್ಲಿ ಕೀಲುಗಳಿದ್ದವು. ಅದನ್ನು ಧರಿಸಿದವರು ಅದರ ಮೇಲೆ ಕೈಗವಸುಗಳನ್ನೂ ಹಾಕಿಕೊಳ್ಳಬೇಕು. ಇದು ನನಗೆ ಬಹಳ ಕಿರಿಕಿರಿಯನ್ನುಂಟು ಮಾಡಿದ ಸಂಗತಿ. ಏಕೆಂದರೆ ಚೀನೀಯರಾರೂ ಕೈಗವಸುಗಳನ್ನು ತೊಡುವುದಿಲ್ಲ. ಇದಿಷ್ಟೇ ಆಗಿದ್ದರೆ ನಾನು ಚಿಂತಿಸುತ್ತಿರಲಿಲ್ಲ. ನಾನು ಆ ಕೈಗಳನ್ನು ಧರಿಸುವುದು ಅತ್ಯವಶ್ಯಕ ಎಂಬ ಎಲ್ಲರ ಮಾತನ್ನು ನಾನು ನಂಬಿದ್ದೆ. ಆದರೆ, ಇಂದಿನವರೆಗೂ ನಾನು ಮೈಗೂಡಿಸಿಕೊಂಡಿದ್ದ ಹಸ್ತ ಕೌಶಲ(?)ವನ್ನು ಕೇವಲ ಆ ಕೈಗಳನ್ನು ಧರಿಸಬೇಕಾಗಿರುವ ಅಗತ್ಯಕ್ಕಾದರೂ ಬಲಿಕೊಡಬೇಕು. ಕಟ್ಟಿಗೆ ಎಂದಿಗಾದರೂ ಕಟ್ಟಿಗೆಯೇ. ಅಂತೆಯೇ ಆ ಕಟ್ಟಿಗೆಯ ಕೈಗಳಿಗಿದ್ದ ಕೀಲುಗಳನ್ನು ಚಲಿಸುವಂತೆ ಮಾಡಲು ಕೈಯೊಳಗೆ ಅಳವಡಿಸಿದ್ದ ಸನ್ನೆಗಳನ್ನು ಮೀಟಬೇಕಿತ್ತು! ಹಾಗೆ ಮೀಟಿದಲ್ಲಿ ಮಾತ್ರ ಪ್ರತಿ ಬೆರಳನ್ನು ಕ್ರಮಬದ್ಧವಾಗಿ ಚಲನೆಯಲ್ಲಿಡಲು ಸಾಧ್ಯವಾಗುತ್ತಿತ್ತು."

ಅವುಗಳನ್ನು ಧರಿಸಿ ಊಟದ ಕತ್ತಿ, ಚಮಚೆಗಳಿಗೆ ಕೈ ಹಚ್ಚಿದ ಮೇರಿಗೆ ಒಂದು ಆಘಾತವೇ ಆಯಿತು. ಮುಟ್ಟಿದ ಯಾವುದೇ ಪದಾರ್ಥದ ಸ್ಪರ್ಶಾನುಭವವು ಆಕೆಗಾಗಲಿಲ್ಲ. ಆದ ಕಾರಣ ಅವಳು ತನ್ನ ಕೈಯಲ್ಲಿದ್ದ ಚಮಚೆ ಅಥವಾ ಕತ್ತಿಯ ಪ್ರತಿ ಚಲನವನ್ನು ಖಾತರಿ ಮಾಡಿಕೊಳ್ಳಲು ಎಡಬಿಡದೆ ತನ್ನ ಕೈಗಳನ್ನೇ ಗಮನಿಸುತ್ತಿರಬೇಕಾಯಿತು. ಅದರಲ್ಲೂ ಚಮಚೆಯನ್ನು ಬಾಯಿ ಬಳಿಗೆ ತಂದಿದ್ದರೂ ಆಹಾರವು ದಕ್ಕುವುದು ತನ್ನ ಹಿಡಿತದಲ್ಲಿಲ್ಲದ ವಿಷಯ ಎಂಬುದು ಮನಸ್ಸಿಗೆ ಬಂದೊಡನೆ ಊಟದ ಉತ್ಸಾಹವು ಅವಳಿಗೆ ಜರ್ರನೆ ಇಳಿದು ಹೋಗುತ್ತಿತ್ತು.

ಕೃತಕ ಕಾಲುಗಳನ್ನು ಧರಿಸಿದ ಮೇರಿ ಹಲ

ವಾರು ಬಾರಿ ಎಡವಿ ಬಿದ್ದದ್ದುಂಟು. ಆಗೆಲ್ಲಾ, ಅಷ್ಟೋ, ಇಷ್ಟೋ ಇದ್ದ ಬಲಗೈ ಹೆಬ್ಬೆರಳು ಮತ್ತು ಅಂಗೈ ಹಾಗೂ ಮೋಟು ಎಡಗೈಯಿಂದಲೇ ಸಾವರಿಸಿಕೊಳ್ಳುತ್ತಿದ್ದಳು. ಕೃತಕ ಕೈಗಳನ್ನು ಧರಿಸಿದ ಮೇರಿ ಆಕಸ್ಮಿಕವಾಗಿ ಎಡವಿದ್ದೇ ಆದರೆ ತನ್ನ ಕೈಗಳನ್ನು ಉಪಯೋಗಿಸಿ ಮೇಲೇಳಲಾರಳು. ಕಾರಣ, ಮೇರಿಯ ಕಟ್ಟಿಗೆ ಕೈಗಳಿಗೂ ತೊಗಲು ಬೊಂಬೆಗಳಿಗೂ ಯಾವುದೇ ವ್ಯತ್ಯಾಸವಿರಲಿಲ್ಲ. ಬೊಂಬೆಗಳ ಕೈಕಾಲುಗಳಿಗೆ ಕಟ್ಟಿದ್ದ ಸೂತ್ರದ ಧಾರಗಳು ಹೇಗೋ ಹಾಗೆಯೇ ಆ ಕಟ್ಟಿಗೆ ಕೈಯೊಳಗಿದ್ದ ಒಂದೊಂದು ಬೆರಳಿಗೆ ಸಣ್ಣ, ಸಣ್ಣ ಸನ್ನೆಗಳನ್ನು ಹೊಂದಿಸಲಾಗಿತ್ತು. ಮೇರಿ ತನಗಿದ್ದ ಮೋಟು ಹೆಬ್ಬೆರಳಿನಿಂದ ತನ್ನಿಚ್ಛೆಗೆ ಬಂದ ಬೆರಳನ್ನು, ಅದಕ್ಕೆ ಹೊಂದಿಸಿದ ಸನ್ನೆಯಿಂದ ಮೀಟಬೇಕು. ಆಗಷ್ಟೇ ಅದು ಚಲಿಸುವುದು. ಒಂದು ಆಕಸ್ಮಿಕವು ನಡೆಯುವ ಕೆಲವೇ ಕ್ಷಣಗಳಲ್ಲಿ ಇಷ್ಟೆಲ್ಲಾ ಕ್ಲಿಷ್ಟವಾದ ಕಾರ್ಯಾಚರಣೆಯು ಯಾರಿಗೇ ಆಗಲಿ ಸಾಧ್ಯವಿಲ್ಲವಷ್ಟೇ. ಹಿಮ್ಮೊಗವಾಗಿ ಬಿದ್ದರೆ ಹೇಗೊ ಸಾವರಿಸಿಕೊಳ್ಳಬಹುದು. ಆದರೆ ಮುಮ್ಮೊಗವಾಗಿ ಬಿದ್ದರೆ ಆ ಕೈಗಳೇನೂ ಸಹಾಯಕ್ಕೆ ಬಾರವು. ಇದೇ ಮೇರಿಯನ್ನು ಬಾಧಿಸುತ್ತಿದ್ದ ಚಿಂತೆ. ಇತ್ತ ಇದನ್ನು ನೇರವಾಗಿ ಲಾರಾರ ಮುಂದೆ ಪ್ರಸ್ತಾಪಿಸಿ ಅವರ ಆನಂದಕ್ಕೆ ತಣ್ಣೀರೆರಚುವಂತೆಯೂ ಇಲ್ಲ. ಅತ್ತ ಅವುಗಳನ್ನು ಧರಿಸಿ ನಿಶ್ಚಿಂತೆಯಿಂದ ಇರುವುದಂತೂ ಸಾಧ್ಯವೇ ಇಲ್ಲ.

ರಜಾ ದಿನಗಳನ್ನು ಕಳೆದು ಮೇರಿ ಮತ್ತೆ ನ್ಯಾನ್ಸಿಂಗಿನ ಶಾಲೆಗೆ ಬಂದು ಸೇರಿಕೊಂಡಳು. ರಜೆಯ ಕಾಲದಲ್ಲಿ ಲಾರಾ ಅವರು ತನಗೆ ಬಳುವಳಿಯಾಗಿತ್ತ ಕೃತಕ ಕೈಗಳ ಸಂಗತಿಯನ್ನು ತನ್ನ ನೆರೆ ಹೊರೆಯುವರಿಗೆ ತಿಳಿಯದಂತೆ ಎಚ್ಚರಿಕೆ ವಹಿಸಿದಳು. ಒಂದು ದಿನ ಯಾರಿಗೂ ತಿಳಿಯದೆ ತನ್ನ ಬಳಿಯಿದ್ದ ಆ ಮರದ ಕೈಗಳನ್ನು ದೂರ ಬಿಸುಟು ಬಂದ ಮೇರಿ ಬಹಳ ದಿನಗಳವರೆಗೂ ಮತ್ತೆ ತನ್ನ ಕೃತಕ ಕೈಗಳ ಬಗ್ಗೆ ಯೋಚಿಸಲೇ ಇಲ್ಲ!

ಮೇರಿಗೆ ಓದುವ ಹುಚ್ಚು ಜಾಸ್ತಿ. ಅಷ್ಟೇ ಅಲ್ಲದೆ, ರಜಾದಿನಗಳಲ್ಲಿ ತಾನು ಕಂಡ ಅಪರಿಚಿತ ಸ್ಥಳಗಳನ್ನು, ಅದರ ಅನುಭವಗಳನ್ನು ತನ್ನ ಸ್ನೇಹಿತೆಯರಿಗೆ ಪತ್ರಗಳ ಮೂಲಕ ಬರದು ತಿಳಿಸುವುದು ಅವಳ ಮೆಚ್ಚಿನ ಹವ್ಯಾಸಗಳಲ್ಲೊಂದು.

ತಮ್ಮ ೫೦ನೇ ಹುಟ್ಟು ಹಬ್ಬದಂದು, ಶುಭ ಹಾರೈಕೆಗಳನ್ನೊಳಗೊಂಡ ಮುದ್ದಾದ ಚೀನೀ ಅಕ್ಷರಗಳಲ್ಲಿ ಮೇರಿ ಬರೆದಿದ್ದ ಪತ್ರವೊಂದು ಲಾರಾ ವೈಟ್‌ರ ಕೈ ತಲುಪಿತು. ಆ ಪತ್ರವು ಅವರ ಮನಸ್ಸಿನ ಮೇಲೆಷ್ಟು ಪರಿಣಾಮ ಬೀರಿತ್ತೆಂದರೆ, ಅವರು ತಮ್ಮ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಯ ಸಂಪಾದಕೀಯದಲ್ಲಿ ಮೇರಿಯ ಬದುಕಿನ ಬಗ್ಗೆ ಚುಟುಕಾಗಿ ವಿವರಿಸಿ ಅದರೊಟ್ಟಿಗೆ ಅವಳು ಬರೆದಿದ್ದ ಪತ್ರದ ಪ್ರತಿಕೃತಿ ಅಚ್ಚನ್ನು ಸಹ ಪ್ರಕಟಿಸಿದರು.

ಆ ಲೇಖನದ ಕೊನೆಯಲ್ಲಿ ಈ ಹುಡುಗಿಯು ಮುಂದೊಂದು ದಿನ ಈ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಗೆ ಸಂಪಾದಕಿಯಾಗಬಲ್ಲಳೆಂಬ ವಿಷಯದಲ್ಲಿ ನನಗೆ ಖಚಿತ ಭರವಸೆಯಿದೆ" ಎಂದೂ ಬರೆದಿದ್ದರು.

ತಾನು ಬರೆದ ಪತ್ರದ ಪ್ರತಿಕೃತಿಯನ್ನು ಪತ್ರಿಕೆಯಲ್ಲಿ ಕಂಡ ಮೇರಿ ನಿಜಕ್ಕೂ ಬಹಳ ಸಂತೋಷಗೊಂಡಳು. ಆ ಲೇಖನದ ಕಡೆಯ ಪರಿಚ್ಛೇದದಲ್ಲಿದ್ದ ವಾಕ್ಯಗಳನ್ನು ನಿಜವಾಗಿಸಲು ಆಕೆ ಪಣತೊಟ್ಟಳು.

*

ಮೇರಿ ತನ್ನ ಮೂವರು ಗೆಳತಿಯರೊಂದಿಗೆ ಗಿನ್ಲಿಂಗ್ ಕಾಲೇಜನ್ನು ಸೇರಿದಳು. ಪ್ರತಿಭಾವಂತರಿಗೆ ಮಾತ್ರ ಪ್ರವೇಶವಿದ್ದ ಆ ಕಾಲೇಜಿನ ಪದವೀಧರರಿಗೆ ಚೀನದಲ್ಲಿ ಹೆಚ್ಚಿನ ಮನ್ನಣೆಯಿತ್ತು. ಅಲ್ಲದೆ ಅಲ್ಲಿ ತೇರ್ಗಡೆಯಾದವರಿಗೆ ಹೊರನಾಡ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಸದಾ ಆಹ್ವಾನವಿತ್ತು.

ತನ್ನ ಮೂವರು ಗೆಳತಿಯರ ವಿನಾ ಇನ್ನೆಲ್ಲರೂ ಅಪರಿಚಿತರೇ ಆಗಿದ್ದ ಆ ಕಾಲೇಜು ಜೀವನದ ಮೊದಲ ಕೆಲ ದಿನ, ಮೇರಿಗೆ ಒಂದು ರೀತಿಯ ಒಂಟಿತನ ಬಾಧಿಸಿತು. ಆದರೆ, ಹೆಚ್ಚು ಕಾಲ ಅಲ್ಲ. ಓದಿನಲ್ಲಂತೂ ಆಕೆ ತನ್ನ ಯಾವುದೇ ಪ್ರತಿಭಾವಂತ ಸಹಪಾಠಿಗೂ ಕಡಿಮೆ ಇದ್ದಿಲ್ಲ.

ಅಲ್ಲದೆ ತನ್ನ ಕೆಲಸಗಳನ್ನೆಲ್ಲಾ ತಾನೇ ನಿರ್ವಹಿಸಬೇಕಾದ ಅನಿವಾರ್ಯ ಸ್ಥಿತಿಯು ಮೇರಿಗೆ ಒಂದು ಸವಾಲಾಯಿತು. ತನ್ನ ತಲೆಯನ್ನು ಬಾಚಿಕೊಳ್ಳುವುದರಿಂದ ಮೊದಲುಗೊಂಡು ತನ್ನ ಬಟ್ಟೆಗಳನ್ನು ಒಗೆಯುವಲ್ಲಿನವರೆಗೆ ಆಕೆ ಸ್ವಾವಲಂಬಿಯಾಗಿದ್ದಳು. ಇಷ್ಟಕ್ಕೆಲ್ಲಾ ಸಂಪೂರ್ಣ ಹೊಣೆಹೊತ್ತಿದ್ದ ಅಂಗವೆಂದರೆ, ಅವಳ ಮೋಟು ಹೆಬ್ಬೆರಳೇ! ಡಾ. ಬೀಬ್‌ರ ಮುಂದಾಲೋಚನೆಯು ಫಲ ಅದು.

ಮೇರಿ ಕಾಲೇಜಿಗೆ ಸೇರಿ ಹತ್ತಿರ ಹತ್ತಿರ ನಾಲ್ಕು ವರ್ಷಗಳಾಗಿತ್ತು. ಒಂದು ದಿನ ಆಕೆಯ ಹೆಸರಿಗೆ ಅಂಚೆ ಪತ್ರವೊಂದು ಬಂದು ತಲುಪಿತು. ಆ ಪತ್ರವನ್ನು ಮೇರಿ ಲ್ಯು ನಿರೀಕ್ಷಿಸಿರಲಿಲ್ಲ. ಕಾರಣ ಸೀಮಾ ಸುಂಕ ಕಛೇರಿಯ ಜವಾಬ್ದಾರಿಯುತ ಹುದ್ದೆಯೊಂದರಲ್ಲಿದ್ದ (ಸಂಭಾವಿತ) ಯುವಕನೊಬ್ಬ ಬರೆದ ಪತ್ರವದು. ಆಕೆ ಒಪ್ಪಿಗೆ

ನೀಡಿದಲ್ಲಿ ತಾನಾಕೆಯನ್ನು ವರಿಸಲು ಸಿದ್ಧನಿರುವುದಾಗಿ ಆತ ಪತ್ರದಲ್ಲಿ ಬರೆದಿದ್ದ. ಚಿಕ್ಕಂದಿನಿಂದಲೂ ತನ್ನ ಬಾಳ ಪಯಣದಲ್ಲಿ ಒಂಟಿಯಾಗಿಯೇ ಇರಬೇಕೆಂದು ನಿಶ್ಚಯಿಸಿದ್ದರಿಂದ ಮೇರಿ ಆತನ ಸಲಹೆಯನ್ನು ಖಡಾಖಂಡಿತವಾಗಿ ತಿರಸ್ಕರಿಸಿದಳು.

೧೯೨೯ರಲ್ಲಿ ಮೇರಿ ಕಲಾ ಪದವಿಯನ್ನು ಪಡೆದಳು. ಪದವೀದಾನ ಸಮಾರಂಭಕ್ಕೆ ಹಾಗೂ ದೈನಂದಿನ ಉಪಯೋಗಕ್ಕೆ ಆಗ ಮೇರಿಯ ಬಳಿ ಒಳ್ಳೆಯ ಬಟ್ಟೆಗಳಿರಲಿಲ್ಲ. ಆ ಕಾಲಕ್ಕೆ ಮತ್ತೊಮ್ಮೆ ನೆರವಾದವರು ಶ್ರೀಮತಿ ಬೀಬ್. ಆಗ ಡಾ. ಬೀಬ್‌ರು ಮಿತಿಮೀರಿದ ದುಡಿತದಿಂದ ಹಣ್ಣಾಗಿದ್ದರು. ಅದು ಸಾಲದೆಂಬಂತೆ ಪಾರ್ಶ್ವವಾಯು ಪೀಡಿತರಾಗಿ ಮುಂದೆ ಕೆಲ ದಿನಗಳಲ್ಲೇ ತೀರಿಕೊಂಡರು. ಹಾಗಾಗಿ ಶ್ರೀಮತಿ ಬೀಬ್‌ರು ಶಾಂಘಾಯ್‌ನ ಗ್ರಾಮಾಂತರ ಪ್ರದೇಶದಲ್ಲೊಂದು ಮನೆ ಮಾಡಿ ಅಲ್ಲೇ ವಾಸಿಸಹತ್ತಿದರು. ತನಗೆ ಚಿಕ್ಕಂದಿನಿಂದಲೂ ಸಹಾಯ ಹಾಗೂ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದ ಶ್ರೀಮತಿ ಬೀಬ್‌ರನ್ನು ಮೇರಿ ಮರೆಯಲಿಲ್ಲ. ತನಗೆ ಬಿಡುವಿದ್ದಾಗಲೆಲ್ಲಾ ಆಕೆ ಶ್ರೀಮತಿ ಬೀಬ್‌ರ ಬಳಿಗೆ ಹೋಗಿ ಕಾಲ ಕಳೆದು ಬರುತ್ತಿದ್ದಳು. ತನ್ನ ಕಷ್ಟಕಾಲದಲ್ಲಿ ಸಹಾಯ ಮಾಡಿದ ಶ್ರೀಮತಿ ಬೀಬ್‌ರ, ಸೇವೆಯಲ್ಲಿ ಮೇರಿ ಸಾರ್ಥಕ್ಯವನ್ನು ಕಂಡಕೊಂಡಳು.

ಮೇರಿ ತನ್ನ ಪದವಿಯನ್ನು ಪಡೆದ ಬಳಿಕ ಲಾರಾರ ಇಚ್ಛೆಯಂತೆ ಶಾಂಘಾಯ್‌ನಲ್ಲಿ ಸ್ಥಾಪಿತವಾಗಿದ್ದ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಗೆ ಉಪಸಂಪಾದಕಿಯಾದಳು. ಆ ಪತ್ರಿಕೆಯ ಬೆಳವಣಿಗೆಯನ್ನು ಮೇರಿ ತಾನು ಬಹಳ ಸಣ್ಣವಳಿದ್ದಾಗಿನಿಂದಲೂ ಕಂಡಿದ್ದಳು. ಅಂದಿನವರೆಗೂ ಪ್ರಕಟವಾಗಿದ್ದ ಆ ಪತ್ರಿಕೆಯ ಪ್ರತಿ ಸಂಚಿಕೆಯನ್ನು ಮೇರಿ ಓದಿದ್ದಳು.

ತನ್ನ ಉದ್ಯೋಗರಂಗದ ಭವಿಷ್ಯದಲ್ಲಿ ಲಾರಾ ವೈಟರ ಪಾತ್ರವನ್ನು ಚೆನ್ನಾಗಿ ಕಂಡುಕೊಂಡಿದ್ದ ಮೇರಿ, ಅವರ ಭರವಸೆ ಹುಸಿಹೋಗದಂತೆ ನೋಡಿಕೊಂಡಿದ್ದಳು. ೧೯೩೧ ರಲ್ಲಿ ಲಾರಾ ವೈಟರು ದೀರ್ಘಕಾಲದ ರಜೆಯ ಮೇಲೆ ಅಮೇರಿಕಕ್ಕೆ ಹೋದರು. ಮೇರಿ ತನಗಾಗಿ ಒಂದು ಪುಟ್ಟ ಮನೆಯನ್ನು ಬಾಡಿಗೆಗೆ ಪಡೆದು ಸ್ವತಂತ್ರ ಜೀವನ್ನವನ್ನಾರಂಭಿಸಿದಳು. ಅದೇ ವರ್ಷದಲ್ಲೇ ಜಪಾನ್ ಮಂಚೂರಿಯುವನ್ನು ಆಕ್ರಮಿಸಿಕೊಂಡಿತು.

೧೯೩೨ ಜನವರಿ ೨೮ ರಂದು ಶಾಂಘಾಯ್‌ನ 'ಹಾಂಗ್‌ಕ್ಯೂ' ಪ್ರಾಂತದ ಮೇಲೆ ಜಪಾನ್ ದಾಳಿ ಮಾಡುವುದೆಂದು ಖಚಿತವಾಗಿ ತಿಳಿದು ಬಂತು. ಮೇರಿಯು ವಾಸಿಸುತ್ತಿದ್ದುದು ಆ ಪ್ರಾಂತದಲ್ಲೇ. ತನ್ನ ಸಹೋದ್ಯೋಗಿಗಳು ಬೇಡವೆಂದರೂ ಕೇಳದೆ ಮೇರಿ ತನ್ನ ನಿವಾಸದೆಡೆಗೆ ಧಾವಿಸಿದಳು.

"ಅಂದು ರಾತ್ರಿ ಹನ್ನೊಂದು ಗಂಟೆಗೆ ಆ ಪ್ರದೇಶದ ಮೇಲೆ ಬಾಂಬುಗಳು ಬೀಳಲಾರಂಭಿಸಿದವು. ಚೀನದ ಐತಿಹಾಸಿಕ ಮಹತ್ವದ 'ನಲವತ್ತು ದಿವಸಗಳ ಯುದ್ಧ'ದ ಮೊದಲ ದಿನವದು. ಯಾವುದೇ ರೀತಿಯ ರಕ್ಷಣಾ ವ್ಯವಸ್ಥೆಯಿಂದ ವಂಚಿತವಾಗಿದ್ದ ಶಾಂಘಾಯ್‌ನ ಜನನಿಬಿಡ 'ಚಾಪೈ' ಪ್ರಾಂತವು ಜಪಾನಿಯರ ಅಮಾನುಷ ದಾಳಿಗೆ ಸಿಕ್ಕು ಧೂಳಿಪಟವಾಯಿತು. ಜಪಾನಿನ ಮಷಿನ್‌ಗನ್ ಪಡೆಗಳು ನಮ್ಮ ಪ್ರಾಂತ್ಯದ ಸುತ್ತಲೂ ಬಲವಾದ ಮುಳ್ಳು ತಂತಿಯ ಬೇಲಿ (Barbed wire fence) ಯನ್ನೆಬ್ಬಿಸಿತು. ನೀರು ಹಾಗೂ ವಿದ್ಯುಚ್ಛಕ್ತಿಯ ಸರಬರಾಜನ್ನೂ ಮೊಟಕುಗೊಳಿಸಲಾಗಿತ್ತು. ಆಗೊಮ್ಮೆ ಈಗೊಮ್ಮೆ ಜಪಾನಿಯರು ಹಾರಿಸಿದ ಗುಂಡುಗಳು ರೊಯ್ಯನೆ ಬಂದು ನಮ್ಮ ಮನೆಗಳಿಗಪ್ಪಳಿಸುತ್ತಿದ್ದವು. ಬಹಳ ಕಾಲದಿಂದಲೂ ಅಲ್ಲಿ ನೆಲೆಸಿದ್ದ ಹಲಬರೂ ತಮತಮಗೆ ಸುರಕ್ಷಿತವೆನಿಸಿದ ಸ್ಥಳಗಳಲ್ಲಿ ಅವಿತುಕೊಳ್ಳತೊಡಗಿದರು.

"ಅಂದು ರಾತ್ರಿಯನ್ನು ತೂಕಡಿಕೆ, ಅರೆ ಎಚ್ಚರದ ತೂಗುಯ್ಯಾಲೆಯಲ್ಲೇ ಕಳೆದೆ. ಇಡೀ ರಾತ್ರಿಯೆಲ್ಲಾ ಆಗೊಮ್ಮೆ ಈಗೊಮ್ಮೆ ಗುಂಡಿನ ಚಕಮಕಿಯ ಶಬ್ದ ಕೇಳಿಬರುತ್ತಲೇ ಇತ್ತು. ಯಾವುದೋ ಒಂದು ಕಟ್ಟಡವು ಅಗ್ನಿಗಾಹುತಿಯಾಗಿದ್ದು ಅದರಿಂದ ಹೊರಟ ಪ್ರಖರವಾದ ಬೆಳಕು ನನ್ನ ಮಲಗುವ ಕೋಣೆಯನ್ನು ಬೆಳಗಿಸಿತ್ತು. ಮರುದಿನ ಮುಂಜಾನೆ ನಾನು ಇದ್ದಿಲು ಕುಮಟಿ (Charcoal brazier)ಯ ಮೇಲೆ ಟೀ ಗೆನೀರಿಟ್ಟು ಏನನ್ನೋ ತರಲು ಹೊರಗೆ

ಹೋಗಿ ಬರುವುದರಲ್ಲಿ ಒಂದು ಗುಂಡು ಟೀ ಗೆ ನೀರಿಟ್ಟ ಪಾತ್ರೆಯನ್ನು ಛೇದಿಸಿತ್ತು. ಪಾತ್ರೆಯ ನೀರೆಲ್ಲಾ ಸೋರಿ ಇದ್ದಿಲ ಒಲೆ ಆರಿಹೋಗಿತ್ತು." ಎಂದಳು ಮೇರಿ ಅಂದಿನ ಘಟನೆಗಳನ್ನು ನೆನೆಸಿ-ಕೊಳ್ಳುತ್ತಾ.

ಇನ್ನಲ್ಲಿರುವುದು ಸುರಕ್ಷಿತವಲ್ಲವೆಂದರಿತ ಮೇರಿ ತನ್ನ ಸ್ನೇಹಿತೆಯ ನೆರವಿನಿಂದ ತಾನು ಹಾಗೂ ತನ್ನ ನೆರೆಮನೆಯ ಕುಟುಂಬದೊಂದಿಗೆ ಅಂತಾ-ರಾಷ್ಟ್ರೀಯ ವಸಾಹತು ವಲಯದ ಅಧೀನದಲ್ಲಿದ್ದ ನಿರಾಶ್ರಿತರ ಶಿಬಿರವೊಂದಕ್ಕೆ ಸುರಕ್ಷಿತವಾಗಿ ತಲ-ಪಿದಳು. ತಾನು ಕರೆತಂದಿದ್ದ ನೆರೆಮನೆಯವರನ್ನು ಅಲ್ಲಿ ಬಿಟ್ಟು ಅದೇ ಕ್ಷೇತ್ರದ ಒಂದು ಭವನದ ಎಂಟನೆಯ ಮಹಡಿಯಲ್ಲಿ ತನ್ನ ವಾಸ್ತವ್ಯ ಹೂಡಿ ದಳು. ವಿದ್ಯುಚ್ಛಕ್ತಿ ಹಾಗೂ ಲಿಫ್ಟಿನ ಸೌಲಭ್ಯ ಗಳಿಂದ ಆ ಭವನವು ವಂಚಿತವಾಗಿತ್ತಾದ ಕಾರಣ ಮೇರಿ ದಿನವೂ ಎಂಟು ಮಹಡಿಗಳನ್ನು ಹತ್ತಿ ಇಳಿಯುವುದು ಅನಿವಾರ್ಯವಾಗಿತ್ತು! ಆಗಷ್ಟೇ ಮೇರಿಗೆ ತನ್ನ ಕೃತಕ ಕಾಲುಗಳ ಉಪಯುಕ್ತತೆಯ ಮೇಲೆ ಸಂಪೂರ್ಣ ನಂಬಿಗೆ ಉಂಟಾದುದು. ಮೇರಿಗೆ ಅಲ್ಲಿ ಬಹಳ ಕಾಲ ಉಳಿದುಕೊಳ್ಳಲಾಗ ಲಿಲ್ಲ. ಎಲ್ಲೆಲ್ಲೋ ಬಿಡಾರ ಹೂಡಿ ಕೊನೆಗೆ ಹಲವು ತಿಂಗಳುಗಳ ನಂತರ 'ಸೂಚೌ' (Sooc-How) ಪ್ರಾಂತ್ಯದ ಜೆಸ್‌ಫೀಲ್ಡ್ ರಸ್ತೆಯಲ್ಲಿ ತನ್ನ ಅಭಿರುಚಿಗೊಪ್ಪುವ ಒಂದು ಮನೆಯನ್ನು ಬಾಡಿಗೆಗೆ ಪಡೆದಳು. ಇಷ್ಟೆಲ್ಲಾ ಆದರೂ ತನ್ನ ಉಪ ಸಂಪಾದಕಿ ವೃತ್ತಿಯನ್ನು ಮೇರಿ ಬಿಡಲಿಲ್ಲ. ಕಷ್ಟಗಳನ್ನೆದುರಿಸಿಯೂ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆ ಹೊರಬರುತ್ತಲೇ ಇತ್ತು. ಹೀಗೇ ವರ್ಷಗಳು ಉರುಳಿದವು.

*

ಒಂದು ದಿನ ಲಾರಾ ವೈಟ್‌ರ ಗೈರು ಹಾಜರಿ ಯಲ್ಲಿ ಮೇರಿಯನ್ನು ಅವರ ಉತ್ತರಾಧಿಕಾರಿ ಯನ್ನಾಗಿ ಪರಿಗಣಿಸಿ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಯ ಸಂಪಾದಕಿಯ ಹುದ್ದೆಗೆ ಆಯ್ಕೆ ಸಮಿತಿಯು ಆಕೆಗೆ ಬಡ್ತಿ ನೀಡಿತು.

ಮೇರಿಗೆ ವಿದೇಶ ಮಹಿಳಾ ದೂತ ಸಮಾಜದ, ಕಾರ್ಯಕಾರಿ ಸಮಿತಿಯ ಸದಸ್ಯತ್ವ ಹಾಗೂ ಆ ಸಮಿತಿಯ ಇತರ ಸದಸ್ಯರ ಯಾವತ್ತೂ ಮತ ದಾನದ ಹಕ್ಕು ಮತ್ತು ಇತರ ಕರ್ತವ್ಯಗಳು ದೊರೆತವು. ಆ ಸಮಿತಿಯ ಇತರ ಸದಸ್ಯರ ವಯಸ್ಸಿಗೆ ಹೋಲಿಸಿದರೆ, ಮೇರಿಗೆ ಅವರ ಅರ್ಧಕ್ಕಿಂತಲೂ ಕಡಿಮೆ ವಯಸ್ಸು. ಇದುವರೆಗೂ ಅಮೆರಿಕನ್ ಪೌರತ್ವದವರಿಂದಲೇ ಪ್ರತಿನಿಧಿಸ-ಲ್ಪಡುತ್ತಿದ್ದ ಆ ಹುದ್ದೆಯು ಇದೀಗ ಮೊಟ್ಟ ಮೊದಲ ಬಾರಿಗೆ ಅಪ್ಪಟ ಚೀನೀ ಜನಾಂಗದ ವ್ಯಕ್ತಿಯೊಬ್ಬಳಿಂದ ಪ್ರತಿನಿಧಿಸಲ್ಪಡುತ್ತಿದೆ.

೧೯೩೭ ರ ಆಗಸ್ಟ್ ೭ ರಂದು ಪೀಕಿಂಗಿನ ಮಾರ್ಕೋ ಪೋಲೋ ಸೇತುವೆಯ ಬಳಿ ಜಪಾನ್ ತನ್ನ ದಾಳಿಯನ್ನಾರಂಭಿಸಿತು. ಉತ್ತರ ಚೀನವನ್ನು ತನ್ನದಾಗಿಸಿಕೊಂಡ ಜಪಾನ್, ಅದೇ ತಿಂಗಳ ೧೪ರಂದು ಶಾಂಘಾಯ್‌ದೆಡೆಗೆ ತನ್ನ ಕರಾಳ ಹಸ್ತವನ್ನು ಚಾಚಿತು.

ಇತ್ತ, ಚೀನದ ಆಡಳಿತ ಹಾಗೂ ರಕ್ಷಣಾ ವ್ಯವಸ್ಥೆ ವಿಪರೀತ ವಿರೋಧಾಭಾಸಗಳ ಪರಾ ಕಾಷ್ಠೆಯನ್ನು ಮುಟ್ಟಿತ್ತು. ಅದಕ್ಕೆ ಒಂದು ಉದಾಹರಣೆಯೆಂದರೆ ೧೯೩೭ರ ಆಗಸ್ಟ್ ೧೪ ರಂದು ಮೇರಿ ತನ್ನ ಮನೆಯ ಮುಂದಿನ ತಿರುವಿ ನಲ್ಲಿದ್ದ ಬಸ್ ನಿಲ್ದಾಣದಲ್ಲಿ ಕಾದು ಕಾದು ಬೇಸತ್ತು ಮನೆಗೆ ಹಿಂದಿರುಗುತ್ತಿದ್ದಳು. "ನಾನು ಆ ಬೀದಿಯ ತಿರುವಿನೆಡೆಗೆ ತಿರುಗುತ್ತಿದ್ದಂತೆ ಹಲವು ಚೀನೀ ವಿಮಾನಗಳು ಬಹಳ ಕೆಳಮಟ್ಟದಲ್ಲಿ ಹಾರಿ ಬರುತ್ತಿರುವುದನ್ನು ಕಂಡೆ. ಅವುಗಳ ಶಬ್ದಕ್ಕೆ ಮನೆ ಗಳಲ್ಲಿದ್ದ ಜನರೆಲ್ಲರೂ ಹೊರಬಂದು ಅವುಗಳನ್ನು ಕಂಡು ಉತ್ಸಾಹದಿಂದ ಕರತಾಡನ ಮಾಡುತ್ತಾ ಆನಂದಿಸುತ್ತಿದ್ದರು. 'ಸದ್ಯ ಈಗಲಾದರೂ ಚೀನಕ್ಕೆ ಆಕ್ರಮಣ ನಿರೋಧ ಶಕ್ತಿ ಬಂತಲ್ಲ' ಎಂದು ನೆಮ್ಮದಿಯ ಉಸಿರು ಬಿಟ್ಟರು. ಕೆಲ ಹೊತ್ತಿನಲ್ಲಿ ಬಾಂಬುಗಳು ಬಿದ್ದ ಸದ್ದು ಗಾಳಿಯೊಡನೆ ಬೆರೆತು ಎಲ್ಲೆಡೆಯೂ ಮೊಳಗಿತು. ನನ್ನ ಕಿವಿಗೆ ಆ ಸದ್ದು ತಾಗಿತಾದರೂ ಯಾವುದೇ ಆಸ್ಫೋಟನೆ ಕಣ್ಣಿಗೆ ಕಾಣಲಿಲ್ಲ. ಸುತ್ತಮುತ್ತಲಿನವರೆಲ್ಲಾ ಆ ಸದ್ದ ನ್ನಾಲಿಸಿ ಉತ್ಸಾಹದಿಂದ 'ಅದು ನಮ್ಮವರೇ... ನಮ್ಮವರೇ' ಎಂದು ತಮ್ಮ ತಮ್ಮಲ್ಲೇ ಅಂದು ಕೊಳ್ಳುತ್ತಿದ್ದರು. ಎಲ್ಲರೂ ಚೀನ ಶತ್ರುವಿನ ಮೇಲೆ ಬಾಂಬುಗಳ ಮಳೆ ಸುರಿಸಿತೆಂದೇ ತಿಳಿದು ಕೊಂಡಿದ್ದರು."

ಆ ವಿಮಾನಗಳು ಉತ್ತರ ಚೀನದ ಕರಾವಳಿಯಲ್ಲಿ ಲಂಗರು ಹಾಕಿದ್ದ ಜಪಾನಿನ ಯುದ್ಧನೌಕೆಯಾದ 'ಇಝುಮೊ' (Idzumo)ದ ಮೇಲೆ ದಾಳಿ ಮಾಡಲು ಹೋದದ್ದೇನೋ ದಿಟ. ಆದರೆ, ಅವುಗಳ ಕಾರ್ಯಾಚರಣೆಯಲ್ಲಿ ಕೊಂಚ ವ್ಯತ್ಯಾಸವಾಯಿತಷ್ಟೆ. ವೈರಿಯ ಹೊಡೆತಕ್ಕೆ ಚೀನೀ ವಿಮಾನವೊಂದು ತೀವ್ರ ಜಖಮ್ಮಾಗಿ ತನ್ನಲ್ಲಿದ್ದ ಬಾಂಬುಗಳನ್ನು ಹೊರಗೆಳೆಯಲೇಬೇಕಾಗಿ ಬಂತು. ಸುತ್ತಲೂ ನೋಡಿದರು. ಸನಿಹದಲ್ಲಿ ಕುದುರೆ ಪಂದ್ಯದ ಮೈದಾನ ಕಂಡುಬಂತು. ಸರಿ ಅಲ್ಲಿ ತನ್ನಲ್ಲಿದ್ದ ಬಾಂಬುಗಳನ್ನೆಲ್ಲಾ ಖಾಲಿ ಮಾಡಿತು, ಆ ವಿಮಾನ ಸಿಬ್ಬಂದಿ. ಆದರೆ, ಅವರೆಸೆದ ಬಾಂಬುಗಳು ಅವರ ಎಣಿಕೆಯನ್ನು ಹುಸಿಯಾಗಿಸಿ ತಮ್ಮ ಗುರಿಯಿಂದ ಕೇವಲ ಕೆಲವೇ ನೂರು ಗಜಗಳಾಚೆಗೆ ಬಿದ್ದವು. ಅಂದು ಶನಿವಾರ ಬೇರೆ. ಮೊದಲೇ ಅದು ನಗರದ ಹೃದಯ ಪ್ರದೇಶ. ಆ ದಿನ ಅಲ್ಲಿ ಜನಜಂಗುಳಿ ಅತ್ಯಧಿಕವಾಗಿರುವುದು ಸಹಜ. ಬಳಿಯಲ್ಲೇ ಅಸಂಖ್ಯಾತ ನಿರಾಶ್ರಿತರು ಬಿಡಾರ ಹೂಡಿದ್ದರು. ಅಲ್ಲೇ ಬಿದ್ದ ಎರಡು ದೊಡ್ಡ ಬಾಂಬುಗಳು ಅಲ್ಲಿದ್ದ ಜನಜಂಗುಳಿಯ ಮುಕ್ಕಾಲುಪಾಲಿನಷ್ಟು ಜನರನ್ನು ಗತಪ್ರಾಣರಾಗಿಸಿದವು. ಇದಿಷ್ಟೇ ಸಾಲದೆಂಬಂತೆ ಇತರ ಚೀನೀ ವಿಮಾನಗಳೂ ತಮ್ಮ ಗುರಿ ತಪ್ಪಿ ಎಲ್ಲೆಂದರಲ್ಲಿ ಬಾಂಬುಗಳನ್ನೆಸೆದವು. ಅವು ಶಾಂಘಾಯ್‌ನ ಇತರ ಜನನಿಬಿಡ ಪ್ರದೇಶದಲ್ಲಿ ಬಿದ್ದು ಬಹಳಷ್ಟು ಪ್ರಾಣ ಹಾನಿಯಾಯಿತು. ಇವೆರಡು ಪ್ರಮಾದಗಳಿಂದಲೇ ಸುಮಾರು ಎರಡೂವರೆ ಸಾವಿರದಷ್ಟು ಮಂದಿ ಮೃತಪಟ್ಟು ಕನಿಷ್ಟ ಅದರ ಎರಡರಷ್ಟು ಜನ ತೀವ್ರ ಗಾಯಗೊಂಡಿರಬಹುದೆಂದು ಒಂದು ಅಂದಾಜು. ಇತ್ತ, ನಿರಾಶ್ರಿತರ ಹಾಗೂ ಮೃತರ ಬಂಧುಗಳ ಹಾಹಾಕಾರ, ಆಕ್ರಂದನ, ಅತ್ತ ಮಿಲಿಟರಿ ವಾಹನಗಳ, ಕಳೇಬರಗಳನ್ನು ರವಾನಿಸುವ ತರಾತುರಿಯ ಕಾರ್ಯಾಚರಣೆ. ಒಟ್ಟಿನಲ್ಲಿ ಎಲ್ಲವೂ ಗೊಂದಲಮಯ. ಆ ದುರ್ದಿನವನ್ನು ಚೀನೀ ಇತಿಹಾಸ ಪುಸ್ತಕದಲ್ಲಿ 'ಕರಾಳ ಶನಿವಾರ'ವೆಂದು ಬರೆದಿಡಲಾಯಿತು.

*

ಇಷ್ಟೆಲ್ಲಾ ಸಂಕಷ್ಟಗಳ ನಡುವೆಯೂ ಮೇರಿಗೆ ಅಚ್ಚರಿ ಹಾಗೂ ಸಂತೋಷಾಘಾತಗಳನ್ನಿತ್ತ ಕ್ಷಣಗಳೂ ಇದ್ದವು. ಒಂದು ದಿನ ಬಂದ ಪತ್ರ ಆಕೆಯ ಬಾಲ್ಯದ ನೆನಪುಗಳನ್ನೆಲ್ಲಾ ಕೆದಕಿ ಹೇಗಾದರೂ ಮಾಡಿ ತನ್ನ ತಾಯಿಯನ್ನು ಕಾಣಬೇಕೆಂಬ ಕಾತರವನ್ನು ಹೆಚ್ಚಿಸಿತು. ಆ ಪತ್ರವನ್ನು ಬರೆದ ವ್ಯಕ್ತಿ ತಾನು ಮೇರಿಯ ತಮ್ಮನೆಂದು ಉಲ್ಲೇಖಿಸಿಕೊಂಡಿದ್ದ. ಅಲ್ಲದೆ ಅವಳ ತಾಯಿಯೂ ಮೇರಿಯನ್ನು ಭೇಟಿ ಮಾಡಲು ಉತ್ಸುಕಳಾಗಿದ್ದಾಳೆಂದು ಬರೆದಿದ್ದ. ಈ ಬಗ್ಗೆ ಸತ್ಯಾಸತ್ಯಗಳು ಅರಿವಾಗುವವರೆಗೂ ತಾನವರನ್ನು ಮುಖತಃ ಭೇಟಿ ಮಾಡುವುದು ಉಚಿತವಲ್ಲವೆಂದು ತೀರ್ಮಾನಿಸಿದ ಮೇರಿ. ತನ್ನ ನೆಚ್ಚಿನ ಹಿರಿಯರೊಬ್ಬರನ್ನು ವಿವರ ಪಡೆಯಲು ಕಳುಹಿಸಿಕೊಟ್ಟಳು. ಭೇಟಿ ಮಾಡಬೇಕೆಂದಿರುವ ವ್ಯಕ್ತಿ ಖಚಿತವಾಗಿಯೂ ತನ್ನ ತಾಯಿಯೇ ಎಂದು ತಿಳಿದ ಮೇಲೆ ಆಕೆಯನ್ನು ತನ್ನ ಮನೆಗೆ ಕರೆಸಿಕೊಂಡಳು. ತನ್ನ ಎಳೆಯ ವಯಸ್ಸಿನಲ್ಲೆಂದೋ ನೋಡಿದ್ದ ತಾಯಿಯನ್ನು ಪ್ರತ್ಯಕ್ಷವಾಗಿ ಈ ಜನ್ಮದಲ್ಲಿ ಕಾಣುವುದಿಲ್ಲವೆಂದು ದೃಢವಾಗಿ ನಂಬಿದ್ದ ಮೇರಿಯ ಬದುಕಿನಲ್ಲಿ ವಿಧಿಯು ಆಡಿದ ಕಣ್ಣುಮುಚ್ಚಾಲೆಯಲ್ಲಿ, ತಾಯಿ ಮಗಳ ಭೇಟಿಯೂ ಒಂದು. 'ಹೋಗಲಿ, ತನ್ನ ತಾಯಿ ತನಗೆ ಇಷ್ಟು ವರ್ಷಗಳ ಮೇಲಾದರೂ ಸಿಕ್ಕಿದಳಲ್ಲ,' ಎಂಬ ಮೇರಿಯ ಸಮಾಧಾನವು ಅವಳಿಗೆ ಮತ್ತೊಂದು ಆಘಾತವನ್ನು ನೀಡುವುದರೊಂದಿಗೆ ಪರ್ಯಾವಸಾನಗೊಂಡಿತು

ಈ ಮೊದಲೇ ತನ್ನ ತಾಯಿ ವಿಧವೆಯೆಂಬುದನ್ನು ತಾನು ಕಳುಹಿಸಿದ್ದ ಹಿರಿಯರಿಂದ ಮೇರಿ ಅರಿತುಕೊಂಡಿದ್ದಳು. ಆದರೆ ತನ್ನ ತಾಯಿ ಒಂದು ತಿಂಗಳವರೆಗೆ ತನ್ನ ಮನೆಯಲ್ಲಿದ್ದು ಬಳಿಕ ಹೊರಡಲು ಆತುರ ತೋರಿದಾಗ ಮೇರಿಗೆ ಏನೂ ತೋಚದಾಯಿತು. ಗಂಡನನ್ನು ಕಳೆದುಕೊಂಡ ಮೇರಿಯ ತಾಯಿ ಈಗ ಪರಪುರುಷನೊಬ್ಬನ ಪತ್ನಿ! ತನ್ನನ್ನಾರೋ ಎತ್ತಿ ಎಲ್ಲಿಯೋ ಒಗೆದಂಥ ಅನುಭವವಾಯಿತು ಮೇರಿಗೆ, ಈ ಸುದ್ದಿ ಕೇಳಿ. ಅಲ್ಲಿಗೆ ಕೊನೆಗೊಂಡಿತು ತಾಯಿ ಮಗಳ ಸಂಬಂಧ.

'ಕರಾಳ ಶನಿವಾರ'ದ ವೈಪರೀತ್ಯಗಳಲ್ಲಿ ಅನೇಕ ಜನ ಮೃತರಾದುದು ಸರಿಯಷ್ಟೇ. ಆ ದುರ್ದಿನದ ಕಪಿಮುಷ್ಟಿಯಿಂದ ಬದುಕಿದ ಹಲವಾರು ನತದೃಷ್ಟರಲ್ಲಿ ಒಂದು ಸಣ್ಣ ಮಗವೂ ಇತ್ತು. ಅದು ಹುಟ್ಟಿದ ಮೂರು ದಿವಸಗಳಲ್ಲೇ ಒಂದು ಆಸ್ಪತ್ರೆಯ ಮೆಟ್ಟಿಲುಗಳ ಮೇಲೆ ಯಾರೋ ಅದನ್ನು ಮಲಗಿಸಿ ಹೋಗಿದ್ದರು. ಅದರ ಜನ್ಮ ದಿನಾಂಕ ಪತ್ರದ ವಿನಾ ಬೇರಾವುದೇ ವಸ್ತು ಆ ಕೂಸಿನ ಸನಿಹದಲ್ಲಿರಲಿಲ್ಲ. ಮೇರಿ ಆ ಕೂಸನ್ನು ತನ್ನ ಮಗಳಾಗಿ ದತ್ತು ತೆಗೆದುಕೊಂಡು 'ಮೈ-ಮೈಲ್' ಎಂದು ಹೆಸರಿಟ್ಟಳು.

'ಮೈ–ಮೈಲ್'ಗೆ ಸುಮಾರು ಆರು ವರ್ಷವಿರಬಹುದು. ಒಂದು ದಿನ ಮೇರಿ ತನ್ನ ಕೃತಕ ಕಾಲುಗಳನ್ನು ಧರಿಸುತ್ತಿರುವಾಗ "ಅಮ್ಮ, ಅಂಥ ಶೂಗಳನ್ನು ಹಾಕ್ಕೊಳಕ್ಕೆ ನನಗೆಷ್ಟು ವಯಸ್ಸಾಗಬೇಕು?" ಎಂದು ಕೇಳಿತು ಆ ಮಗು.

ಏನು ಹೇಳಿಯಾಳು ಮೇರಿ? ಒಳಗೊಳಗೇ ನೊಂದುಕೊಂಡಳು.

*

ಮೇರಿಯ ವೈಯಕ್ತಿಕ ಬಾಳು ಹಸನಾಗಿತ್ತಾದರೂ, ಅವಳ ತಾಯ್ನಾಡಿನ್ನೂ ವಿಷಮ ವಿಪರೀತಗಳ ತೂಗುಯ್ಯಾಲೆಯಲ್ಲೇ ಇತ್ತು. ತಂತ್ರಜ್ಞಾನದಲ್ಲಿ ಅಂದು ಜಪಾನಿಗಿಂತ ಹಿಂದುಳಿದಿದ್ದ ಚೀನೀ ಪಡೆಗಳು, ಜಪಾನಿನ ಕಗ್ಗೊಲೆಗೈಯ್ಯುವ ರಕ್ಕಸ ಯಂತ್ರಗಳ ಪೆಟ್ಟಿಗೆ ತತ್ತರಿಸಿ ಹೋಗಿದ್ದವು. ಆದರೂ ತಮ್ಮವರ ಮೃತ ದೇಹಗಳನ್ನೇ ಅವುಗಳ ಮಾರ್ಗ ಮಧ್ಯದಲ್ಲಿ ಒಡ್ಡಿ ಅವುಗಳ ಮುಂದುವರಿಕೆಯನ್ನು ತಡೆಯಲು ಪ್ರಯತ್ನಿಸುತ್ತಿದ್ದರು ಚೀನೀ ಸೈನಿಕರು. ಅವರ ಇಂತಹ ಆತ್ಮಾಹುತ ಕ್ರಮವನ್ನು ಕಂಡು, ಜಪಾನ್ ಆಶ್ಚರ್ಯಗೊಂಡರೂ ತನ್ನ ಜೀವದಮನ ಹಾಗೂ ಆಕ್ರಮಣ ನೀತಿಯನ್ನೇನೂ ಸಡಿಲಿಸಲಿಲ್ಲ.

ಇತ್ತ, ಬ್ರಿಟನ್ ಹಾಗೂ ಫ್ರಾನ್ಸ್‌ಗಳು ನಾಜಿಗಳ ಸರ್ವಾಧಿಕಾರದ ಮೇಲುಗೈಯನ್ನು ತಪ್ಪಿಸಲು ಶಕ್ತಿಮೀರಿ ಹೆಣಗುತ್ತಿದ್ದವು. ರಶಿಯವು ಯಾವುದೇ ದೇಶಕ್ಕೂ ಬೆಂಬಲ ಸೂಚಿಸದೆ ತಟಸ್ಥವಾಗಿತ್ತು. ಅಂತೂ ಕೊನೆಗೆ ಜಪಾನ್. ಜಲಾಂತರ್ಗಾಮಿಗಳ ನೆರವಿನಿಂದ ಅಮೇರಿಕದ ಪರ್ಲ್ ಹಾರ್ಬರನ್ನು ನುಚ್ಚು ನೂರು ಮಾಡುವ ಮೂಲಕ ೧೯೪೧ರ ಡಿಸೆಂಬರ್ ೮ ರಂದು ಅಮೆರಿಕದೊಂದಿಗೆ ನೇರ ಅಖಾಡಕ್ಕಿಳಿಯಿತು.

ಆಕ್ರಮಿಸಿದ ಪ್ರದೇಶದಲ್ಲೆಲ್ಲಾ ಜಪಾನ್ ತಾನು ಪಾಲಿಸುತ್ತಿದ್ದ 'ಶಿಂಟೋ' ಧರ್ಮವನ್ನು ಜಾರಿಗೆ ತರಲು ಕಟ್ಟುನಿಟ್ಟಾಗಿ ಕ್ರಮಗಳನ್ನು ತೆಗೆದುಕೊಳ್ಳತೊಡಗಿತು. ಇದರ ಮೊದಲ ಅಂಗವಾಗಿ ತನ್ನ ಮತಪ್ರಚಾರ ಕಾರ್ಯವನ್ನಾರಂಭಿಸಿ ತಾವೋ, ಕನ್‌ಫ್ಯೂಶಿಯಸ್, ಬೌದ್ಧ, ಹಿಂದೂ, ಮುಸ್ಲಿಮ್ ಹಾಗೂ ಕ್ರೈಸ್ತ ಧರ್ಮಗಳನ್ನು ಬಹಿಷ್ಕರಿಸಬೇಕೆಂದು ತನ್ನ ಆಕ್ರಮಿತ ಪ್ರದೇಶದ ಜನರಿಗೆ ಕರೆ ನೀಡಿತು. ಅಷ್ಟೇ ಅಲ್ಲ ಚೀನದ ಮತ, ಪಂಥ ಪ್ರಚಾರ ಕಾರ್ಯಗಳಿಗೆ ಹಣದ ಬೇಡಿಕೆಯನ್ನು ಪೂರೈಸುತ್ತಿದ್ದ, ಅದರಲ್ಲೂ ಅಮೆರಿಕನ್ ದತ್ತಿ ಸಂಸ್ಥೆಗಳನ್ನು ಮುಟ್ಟುಗೋಲು ಹಾಕಿಕೊಂಡಿತು. ಇದರಿಂದ ಮೇರಿಯಂಥವರು ಕೆಲಸ ಮಾಡುತ್ತಿದ್ದ ಹಲವು ಹತ್ತು ಸಂಸ್ಥೆಗಳಿಗೆ ಬಹಳ ಹಾನಿಯುಂಟಾಯಿತು. ಯಾವುದೇ ಪತ್ರಿಕೆಯು ಪ್ರಕಟಣೆಗೂ ಶಕ್ತಿಯಿಲ್ಲದೆ ಹೋಯಿತು. ಮೇರಿಯು ಯಾರ್‍ಯಾರನ್ನೋ ಭೇಟಿ ಮಾಡಿ ಹಾಗೂ ಹೀಗೂ ಅಮೆರಿಕದಿಂದ ತಾನು ನಿರ್ವಹಿಸುತ್ತಿರುವ ಕಾರ್ಯಕ್ಕೆ ಅರ್ಧ ಭಾಗದಷ್ಟು ಪ್ರತಿಫಲನವನ್ನು ಪಡೆಯಲು ಶಕ್ತಳಾದಳು. ಹೀಗಾಗಿ 'ವುಮೆನ್ಸ್ ಮೆಸೆಂಜರ್' ಅಷ್ಟು ಅಷ್ಟಿ ಆತಂಕಗಳಲ್ಲೂ ತಿಂಗಳೂ ತಪ್ಪದೆ ಪ್ರಕಟವಾಗುತ್ತಲೇ ಇತ್ತು.

ಒಂದು ದಿನ, ಜಪಾನ್ ಆಕ್ರಮಿತ ಚೀನವಲ್ಲಿ ಸ್ಥಾಪಿಸಲಾಗಿದ್ದ ತೊಗಲು ಬೊಂಬೆ ಸರಕಾರದ ವಕ್ತಾರನೊಬ್ಬ ಮೇರಿಯನ್ನು ಭೆಟ್ಟಿ ಮಾಡಲು ಬಂದ. ಆಕೆಯ ಕಾರ್ಯ ವೈಖರಿಯನ್ನು ಪ್ರಶಂಸಿಸಿ ಹೊಸ ಸರಕಾರದ ಹಲವು ಮತ ಪ್ರಚಾರಕ ಘೋಷಣೆಗಳನ್ನಾಯ ಕೆಲಸ ಮಾಡುವುದಾದರೆ ಆಕೆಗೆ ಬೇಕಾಗುವಷ್ಟು ಧನ ಸಹಾಯವನ್ನು ದೊರಕಿಸಿಕೊಡಬಲ್ಲೆನೆಂಬ ಸಲಹೆಯನ್ನು ಮುಂದಿಟ್ಟ. ನಿಜಕ್ಕೂ ಆಗ ಮೇರಿಗೆ ಹಣದ

ಅವಶ್ಯಕತೆ ಬಹಳ ಇತ್ತಾದರೂ ಆತನ ಕೊಡುಗೆಯನ್ನು ನಯವಾಗಿ ತಿರಸ್ಕರಿಸಿ ತಾವಿಷ್ಟರಲ್ಲೇ ತಮ್ಮ ಪ್ರಕಾಶನ (ಮತ್ತು ಮುದ್ರಣಾಲಯ) ವನ್ನು ಬರಖಾಸ್ತುಗೊಳಿಸುತ್ತೇವೆಂದು ಆತನಿಗೆ ಹೇಳಿದಳು.

ಒಟ್ಟಿನಲ್ಲಿ ಈ ಸಂಸ್ಥೆಯನ್ನು ಮುಚ್ಚಿಸ-ಬೇಕೆಂಬ ತನ್ನ ಉದ್ದೇಶ ಸಫಲವಾಯಿತೆಂದು ಹಿಗ್ಗಿ ಆತ ಹೊರಟು ಹೋದ.

ಆದರೆ ಆ ಸಂಸ್ಥೆಯ ಒಟ್ಟು ಆಸ್ತಿ ಉಂಬಳಿಯಲ್ಲಿ ಸ್ವಲ್ಪ ಭಾಗ ಪತ್ರಿಕೆಗೆ ಬರುತ್ತಿದ್ದುದನ್ನು ಗಮನಿಸಿದಳು ಮೇರಿ. ಮರು ತಿಂಗಳು ಸಮ-ಯಕ್ಕೆ ಸರಿಯಾಗಿ 'ವುಮೆನ್ಸ್ ಮೆಸೆಂಜರ್' ಪತ್ರಿಕೆ ಹೊರ ಬಂದದ್ದು ನೋಡಿ ಆ 'ಅಣಕು ಸರಕಾರ'ದ ಅಧಿಕಾರಿಗಳ ಹುಬ್ಬುಗಳು ಪ್ರಶ್ನಾರ್ಥಕವಾದವು.

ಹಾಗೂ ಹೀಗೂ ಹಲವಾರು ಕರಾರುಗಳ ಮೇಲೆ ಶಾಂಘಾಯ್ ಮತ್ತೆ ಸ್ವತಂತ್ರವಾಯಿತು. ಹಲವಾರು ವರ್ಷಗಳ ಸಂಕಷ್ಟ ಕಾಲದಲ್ಲೂ ಎಡೆ ಬಿಡದೆ ಸೇವೆ ಸಲ್ಲಿಸಿದ ಮೇರಿಯ ಕರ್ತವ್ಯ ನಿಷ್ಠೆಯನ್ನು ಮೆಚ್ಚಿ ಆಕೆಗೆ ಉನ್ನತ ವ್ಯಾಸಂಗ-ಕ್ಕಾಗಿ ಅಮೆರಿಕಕ್ಕೆ ಹೋಗಲು ವಿದ್ಯಾರ್ಥಿ ವೇತನ ದೊರಕಿತು.

ಮೇರಿಯನ್ನು ಬೀಳ್ಕೊಡಲು ಅವಳ ಸಂಸ್ಥೆಯ ಸಾಮಾನ್ಯ ನೌಕರನಿಂದ ಹಿಡಿದು ಉಚ್ಚ ಅಧಿಕಾರಿಗಳ ವರೆಗೆ ಎಲ್ಲರೂ ಮುಂದಾಗಿ ಒಂದು ಭರ್ಜರಿ ಔತಣ ಕೂಟವನ್ನು ಏರ್ಪಡಿ-ಸಿದರು. ಮೇರಿಯ ಮೇಲೆ ಆಕೆಯ ಸಹೋ-ದ್ಯೋಗಿಗಳಿಗಿದ್ದ ಗೌರವ, ಆದರ ಹಾಗೂ ಪ್ರೀತಿಗೆ ಅದೊಂದು ಜ್ವಲಂತ ಉದಾಹರಣೆ.

ಮೇರಿ, ಅಮೆರಿಕಕ್ಕೆ ಹೋಗಿದ್ದು 'ಜನರಲ್ ಮೆಯಿಗ್ಸ್' ಎಂಬ ಸೇನಾ ನೌಕೆಯಲ್ಲಿ. ಆ ಹಡಗಿನಲ್ಲಿ ಗಿನ್ಲಿಂಗ್ ಕಾಲೇಜಿನ ತನ್ನ ನಾಲ್ವರು ಸಹಪಾಠಿಗಳು ಪಯಣಿಸುತ್ತಿದ್ದುದನ್ನು ಕಂಡು ಮೇರಿಗೆ ಬಹಳ ಸಂತೋಷವಾಯಿತು.

ಯಾವುದೇ ಒಂದು ಪರಿಷ್ಕೃತ ನಿಯಮಾನುಸಾರ ಮೇರಿ ಅಮೆರಿಕದಲ್ಲಿ ತನ್ನ ವಿದ್ಯಾಭ್ಯಾಸವನ್ನು ನಡೆಸಲಿಲ್ಲ. ತನ್ನಿಚ್ಛೆಗೆ ಬಂದ ವಿಷಯಗಳ ಬಗ್ಗೆ ಕೋಲಂಬಿಯಾ ಹಾಗೂ ಯೂನಿಯನ್ ಥಿಯಾಲಜಿ ವಿಶ್ವವಿದ್ಯಾಲಯಗಳಲ್ಲಿ ನಡೆಯುತ್ತಿದ್ದ ಉಪನ್ಯಾಸಗಳಿಗೆ ಹಾಜರಿರುತ್ತಿದ್ದಳು. ಆಕೆಗೆ 'ಮ್ಯಾಕ್‌ಗಿಫರ್ಟ್' (McGiffert) ನಿವಾಸದಲ್ಲಿ ಉಳಿದುಕೊಳ್ಳಲು ವ್ಯವಸ್ಥೆ ಮಾಡಲಾಗಿತ್ತು.

ಮೇರಿ ಅಮೆರಿಕದಲ್ಲಿ ನೆಲೆಸಿದ್ದುದು ಒಂದು ವರ್ಷ ಮಾತ್ರ. ವಿದ್ಯಾಭ್ಯಾಸದೊಂದಿಗೆ ತನ್ನ ಆರೋಗ್ಯ ತಪಾಸಣೆ ಹಾಗೂ ಪೂರ್ಣ ವಿಶ್ರಾಂತಿಗಾಗಿ ಮೇರಿ ಆರು ವಾರಗಳನ್ನು ಬದಿಗಿರಿಸಿದಳು. ಆ ಸಮಯದಲ್ಲೇ ಮೇರಿ ತನಗೆ ಅಚ್ಚುಕಟ್ಟಾಗಿ ಹೊಂದುವ, ಧರಿಸಲು ಮೃದುವಾದ ಹಾಗೂ ಓಡಾಡಲು ಸುಲಲಿತವಾದ ಒಂದು ಜೊತೆ ಕೃತಕ ಕಾಲುಗಳನ್ನು ಕೊಳ್ಳಲು ಮರೆಯಲಿಲ್ಲ.

ಆಕೆ ಅಮೆರಿಕಕ್ಕೆ ಭೇಟಿ ನೀಡಿದ್ದು ಜಾಗತಿಕ ಯುದ್ಧದ ಉರಬು ಉತ್ತುಂಗಕ್ಕೇರಿದ್ದ ಕಾಲದಲ್ಲಿ. ದಿನಂಪ್ರತಿ ನೂರಾರು ಜನ ಗಾಯಾಳುಗಳು ಅಲ್ಲಿನ ಆಸ್ಪತ್ರೆಗಳಲ್ಲಿ ದಾಖಲಾಗುತ್ತಿದ್ದರು. ಮೇರಿಗೆ, 'ತಾನೇನಾದರೂ ಅವರಿಗೆ ಸಹಾಯ ಮಾಡಬೇಕು' ಎಂದೆನಿಸುತ್ತಿತ್ತು.

"ನಾನು ಆಸ್ಪತ್ರೆಯ ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ಎಡತಾಕುತ್ತಿದ್ದೆ. ಒಂದು ವಿಭಾಗದಲ್ಲಿ ಯುದ್ಧದಲ್ಲಿ ತನ್ನೆರಡು ಕಾಲುಗಳನ್ನೂ ಎಡಗೈಯನ್ನೂ ಕಳೆದುಕೊಂಡಿದ್ದ ೨೦ರ ಹರೆಯದ ಪುರುಷಾಕೃತಿಯೊಂದು ಕಣ್ಣಿಗೆ ಬಿತ್ತು. ಬಳಿಯಲ್ಲೇ ಆತನ ಮಡದಿ ಮತ್ತು ಮೂವರು ಸಣ್ಣ ಸಣ್ಣ ಮಕ್ಕಳು. ಆಘಾತ, ಹತಾಶೆಗಳು ಆತನ ಮುಖದಲ್ಲಿ ತಾಂಡವಾಡುತ್ತಿದ್ದವು. ತಾನು ಬದುಕಬೇಕಾದ ಯಾವುದೇ ಅವಶ್ಯಕತೆಯಿರಲಿಲ್ಲ ಎಂಬ ಭಾವ ಆತನ ನುಡಿಗಳಲ್ಲಿ ಬೇಡವೆಂದರೂ ವ್ಯಕ್ತವಾಗುತ್ತಿದ್ದವು. ನಾನು ಇನ್ನೂ ಹತ್ತಿರ ಬಂದಾಗ, ಆತನಿಗೆ ಹೊಂದಿಸಿದ್ದ ಕೃತಕ ಕಾಲುಗಳು ಕಣ್ಣಿಗೆ ಬಿದ್ದವು. 'ಇವುಗಳನ್ನು ಧರಿಸಿ ನಡೆಯುವುದು ಅಸಾಧ್ಯ. ಇದರಿಂದೇನೂ ಉಪಯೋಗವಿಲ್ಲ' ಎಂದು ಬಾರಿ ಬಾರಿಗೂ ಸ್ವಗತವೆಂಬಂತೆ ಅಂದು

ಕೊಳ್ಳುತ್ತಲೇ ಇದ್ದ ಆತ.

"ನಾನು ಬಾಗಿಲಲ್ಲೇ ನಿಂತು ಆತನನ್ನೇ ಗಮನಿಸುತ್ತಿದ್ದೆ. ಅದೇ ಕಾಲಕ್ಕೆ ದಾದಿಯೊಬ್ಬಳು ನನಗೆ ಮತ್ತು ಆತನಿಗೆ ಟೀ, ಕಾಫಿಗಳನ್ನು ತಂದಳು. ಚಹದ ಬಸಿಯನ್ನು ನನಗಿತ್ತು ಆತನಿಗೆ ಕಾಫಿಯನ್ನು ಕುಡಿಸುತ್ತಿದ್ದಳು. ಕಾಫಿ ಕುಡಿಯುತ್ತಿದ್ದ ಆತನ ದೃಷ್ಟಿ ನನ್ನ ಕೈಯೆಡೆಗೆ ಹರಿಯಿತು. ವಿಸ್ಮಿತನಾದವನಂತೆ ನನ್ನ ಬಲಗೈ ಮೋಟು ಬೆರಳನ್ನೇ ನೋಡುತ್ತಿದ್ದ. ಬೆನ್ನ ಹಿಂದಿದ್ದ ನನ್ನ ಎಡಗೈಯನ್ನು ಆತ ಗಮನಿಸಲೆಂದೇ ಅದನ್ನು ನಾನು ಎದುರಿಗೆ ತಂದೆ. ಅದನ್ನು ಕಂಡ ಆತ 'ನಿಮಗೆ ಕೈಗಳೇ ಇಲ್ಲ!' ಎಂದ ಆಶ್ಚರ್ಯದಿಂದ. 'ಆದರೇನಂತೆ? ನನಗೂ ಬೇರೆಯವರಿಗೂ ಹೆಚ್ಚಿನ ವ್ಯತ್ಯಾಸವೇನೂ ಇಲ್ಲವಲ್ಲ' ಎಂದೆ ನಾನು ಸಹಜವಾಗಿ.

ಅದಕ್ಕೆ ಆತ ಉತ್ತರ ನೀಡಲಿಲ್ಲವಾದರೂ ಆತನ ಪೂರ್ಣ ಹತಾಶ ಮುಖಭಾವದಲ್ಲಿ ಸ್ವಲ್ಪ ಬದಲಾವಣೆ ಕಂಡುಬಂತು. 'ಆದರೂ ನಿಮಗೆ ಕಾಲುಗಳಾದರೂ ಇವೆಯಲ್ಲ' ಎಂದ ತನ್ನ ಹತಾಶೆಯನ್ನು ಸಮರ್ಥಿಸಿಕೊಳ್ಳುವಂತೆ. ನಾನೂ ಆತನಂತೆ ಚಲನಾಂಗವಂಚಿತೆಯೆಂದು ತಿಳಿಸಲು ನನ್ನ ಮೊಂಡು ಕಾಲುಗಳನ್ನು ಆತನಿಗೆ ತೋರಿಸಿದೆ. ಅದನ್ನು ಕಂಡು ಆತ ಮೂಕವಿಸ್ಮಿತನಾದ. ಕೃತಕ ಕಾಲಿನಿಂದ ಅವನಿಗಾಗುವ ಅನುಕೂಲಗಳು, ಆತ ಮುಂದಿನ ಜೀವನಕ್ಕೆ ಹೊಂದಿಕೊಳ್ಳಬೇಕಾದ ವಿಧಾನ ಹಾಗೂ ನಾನು ಸಾಧಿಸಿದ ಗೆಲುವಿನ ಬಗ್ಗೆ ಆತನಿಗೆ ಮನಮುಟ್ಟುವಂತೆ ತಿಳಿ ಹೇಳಿದೆ."

ಇಂತಹ ಹಲವಾರು ವ್ಯಕ್ತಿಗಳನ್ನು ಸಂಧಿಸಿ ಮೇರಿ ಸ್ವತಃ ಮುಂದಾಗಿ ಅವರಲ್ಲಿ ಧೈರ್ಯ, ದೃಢ ಸಂಕಲ್ಪಗಳನ್ನು ತುಂಬಿದಳು. ಯಾವೊಬ್ಬ ವೈದ್ಯ/ತಜ್ಞನ ಸಾಧನೆಗಿಂತ ಇದೇನೂ ಕಿರಿದಲ್ಲ.

ಅಮೆರಿಕದಿಂದ ಹಿಂದಿರುಗುವ ಮೊದಲು ಮೇರಿ ತಾನು ಲಾಯ್ಡ್ ಸಿ ಡಗ್ಲಾಸರ 'ನಿಲುವಂಗಿ' (The Robe) ಎಂಬ ಪುಸ್ತಕವನ್ನು ಚೀನೀ ಭಾಷೆಗೆ ಭಾಷಾಂತರಿಸಲು ಒಪ್ಪಂದ ಮಾಡಿಕೊಂಡಳು. ಒಂದು ಒಳ್ಳೆಯ ಅಮೆರಿಕನ್ ಪುಸ್ತಕವನ್ನು ಚೀನೀ ಭಾಷೆಗೆ ತರ್ಜುಮೆಗೊಳಿಸಲು ಫಿಲಡೆಲ್ಫಿಯದ ಮೆಥಾಡಿಸ್ಟ್ ಮಹಿಳಾ ದೂತ ಸಂಘವು ಆರು ನೂರು ಡಾಲರ್‌ಗಳನ್ನು ಗೌರವ ಧನವನ್ನಾಗಿ ನೀಡಿತು. ಈ ಗೌರವ ಧನವನ್ನು ಅದರ ಮುದ್ರಣಕ್ಕಾಗಿಯೇ ವೆಚ್ಚ ಮಾಡುವುದೆಂದು ಮೇರಿಯ ಮುಂದಾಲೋಚನೆ. ಗಾತ್ರದಲ್ಲಿ ಪುಸ್ತಕ ದೊಡ್ಡದಾಗಿತ್ತಾದ್ದರಿಂದ ಸಂಬಂಧಪಟ್ಟವರಿಗೆ ಕೊಂಚ ಅಳುಕಿತ್ತು, ಮೇರಿಯ ಸಾಮರ್ಥ್ಯದ ಬಗೆಗಲ್ಲ.

ತಾನು ಹಿಂತಿರುಗಿ ಬಂದೊಡನೆ ತನ್ನ ಪಾಲಿನ ಕೆಲಸಗಳಲ್ಲಿ ಕೊಚ್ಚಿಹೋದಳು ಮೇರಿ. ಸಮಯ ಮತ್ತು ತನ್ನ ಸುತ್ತಲಿನ ಪರಿಸರವನ್ನೇ ಮರೆತು ಕಾರ್ಯನಿರತಳಾದಳು. ಕಾಲು ಶತಮಾನಕ್ಕಿಂತಲೂ ಹೆಚ್ಚು ಕಾಲದಿಂದ ತಮ್ಮನ್ನು ಕಿತ್ತು ತಿನ್ನುತ್ತಿರುವ ಯುದ್ಧದ ಬವಣೆಗಳಿಂದ ಜರ್ಜರಿತವಾಯಿತು ಚೀನೀ ಜನತೆ. ಅದೇ ಕಾಲಕ್ಕೆ ಚೀನಿಯರ ನೆತ್ತರು ಬೆವರುಗಳಿಂದ ಮಂಚೂರಿಯದಲ್ಲಿ ನಿರ್ಮಿಸಲಾಗಿದ್ದ ಬೃಹತ್ ಉದ್ಯಮಗಳ ಯಂತ್ರ ಹಾಗೂ ಇತರ ಬೆಲೆಬಾಳುವ ಸಲಕರಣೆಗಳು ವಿಮೋಚನೆಯ ಹೆಸರಿನಲ್ಲಿ ತಮ್ಮ ನಾಡನ್ನು ಬಿಟ್ಟು ಗಡಿ ದಾಟಿ ರಶಿಯನ್ ಪಾಳಯ ಸೇರಿದವು. ವಿರೋಧಿಗಳ ಮುನ್ನಡೆಯನ್ನು ಮೊಟಕುಗೊಳಿಸಲು ಚೀನದ ರೇಲ್ವೆ ಪಟ್ಟಿಗಳನ್ನು ಹಾಗೂ ಅಸಂಖ್ಯಾತ ಸೇತುವೆ ಸುರಂಗಗಳನ್ನು ನಾಶಮಾಡುವುದು ಅನಿವಾರ್ಯ ಕಾರ್ಯಕ್ರಮವಾಯಿತು. ದಿನವೂ ಅಂತಹ ಕಿತ್ತು ಬಿದ್ದ ರೈಲ್ವೆ ಕಂಬಿಗಳ, ಕುಸಿದು ಬಿದ್ದ ಸೇತುವೆಗಳ ದೃಶ್ಯಗಳು ಸರ್ವೇ ಸಾಮಾನ್ಯವಾಗಿದ್ದವು. ಇದೆಲ್ಲವನ್ನೂ ಬೇಕೆಂದೇ ಮರೆತ ಮೇರಿ, ಹಗಲಿರುಳೂ ಹಲವಾರು ಗುರುತರ ಕಾರ್ಯಗಳಿಗೆ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಳು.

ಮೇರಿ ಜಗತ್ತನ್ನೇ ಮರೆಯಲೆತ್ನಿಸಿದಳಾದರೂ ಜಗವು ಅವಳನ್ನು ಮರೆಯಲಿಲ್ಲ. ೧೯೪೯ರ ವಸಂತದವರೆಗೂ ಮೇರಿಯ ಕೆಲಸ ನಿರ್ವಿಘ್ನವಾಗಿ ಸಾಗಿತು. ಅದೇ ಕಾಲದಲ್ಲಿ ಸಮತಾವಾದಿ ಸೇನೆಯು ಶಾಂಘಾಯ್‌ನತ್ತ ನಡೆದು ಬಂತು. (ಅಂದು ಅಧಿಕಾರದಲ್ಲಿದ್ದ) ಚಿಯಾಂಗ್-ಕೈಶೇಕ್, ಒಂದು ವೇಳೆ ತಮ್ಮ ಪುರಪ್ರವೇಶಕ್ಕೆ

ಪ್ರತಿರೋಧ ವ್ಯಕ್ತಪಡಿಸಿದ್ದೇ ಆದರೆ, ಸಾಮೂಹಿಕ ಹತ್ಯೆ ಅನಿವಾರ್ಯವೆಂದು ಸೇನೆಯ ನಾಯಕರು ಈ ಮೊದಲೇ ಘೋಷಿಸಿದ್ದರು. ಒಂದು ದಿನ ಮೇರಿ ಕೆಲಸ ಮಾಡುತ್ತಿದ್ದ ಸಂಸ್ಥೆಯ ನಿರ್ದೇಶಕರು ಮೇರಿಯನ್ನು ಕರೆಸಿ ಕೂಲಂಕಷವಾಗಿ ಮೇಲ್ಕಂಡ ಎಲ್ಲಾ ವಿದ್ಯಮಾನಗಳನ್ನೂ ಅವಳಿಗೆ ತಿಳಿಸಿ, ಯಾವುದೇ ಕಾರಣಕ್ಕಾಗಲಿ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಯ ಪ್ರಕಟಣೆಯು ನಿರ್ವಿಘ್ನವಾಗಿ ನಡೆಯಬೇಕಾದ್ದರಿಂದ ಆಪತ್ಕಾಲಕ್ಕೆ ನೆರವಾಗಲು ಪೂರ್ವಭಾವಿಯಾಗಿ ಒಂದು ತಂಡವನ್ನು ತಮ್ಮ ತಾಯ್ನಾಡಿನ ಸೆರಗಿಗಂಟಿದಂತಿರುವ ಬ್ರಿಟಿಶ್ ವಸಾಹತುವಾಗಿದ್ದ ಹಾಂಕಾಂಗಿಗೆ ಕಳುಹಿಸಿಕೊಡುವುದವಶ್ಯವೆಂದೂ, ಅಲ್ಲಿನ ಸಂಪೂರ್ಣ ವ್ಯವಸ್ಥಾಪನಾ ಕಾರ್ಯವನ್ನು ಖುದ್ದು ಮೇರಿಯೇ ನೋಡಿಕೊಳ್ಳಬೇಕೆಂದೂ ಹೇಳಿ, ತಕ್ಕ ಸಿಬ್ಬಂದಿಯೊಂದಿಗೆ ಅವಳು ಹಾಂಕಾಂಗಿಗೆ ಹೋಗಿ ಸೇರಬೇಕಾದ ದಿನವನ್ನೂ ಅವರು ನಿಗದಿಪಡಿಸಿದರು.

ಮೇರಿ ತನಗೊಪ್ಪಿಸಿದ ಸಿಬ್ಬಂದಿಯೊಂದಿಗೆ ಹಾಂಕಾಂಗಿಗೆ ಬಂದು ಸೇರಿ ಸಮಯಾನುಸಾರ ಕೈಗೊಳ್ಳಬೇಕಾದ ಕಾರ್ಯಭಾರಕ್ಕೆ ಉಚಿತವೆನಿಸುವ ಹಲವು ವ್ಯವಸ್ಥೆಗಳನ್ನು ಮಾಡುತ್ತಿದ್ದಂತೆಯೇ, ಶಾಂಘಾಯ್ ಸಮತಾವಾದಿಗಳ ಕೈವಶವಾದ ವಾರ್ತೆ ಅವಳನ್ನು ಮುಟ್ಟಿತು.

ಆದರೆ, ಮೇರಿ ಹತಾಶಳಾಗದೆ ಶಾಂಘಾಯ್‌ನ ಸದ್ಯದ ವಿದ್ಯಮಾನಗಳನ್ನು ಕೂಲಂಕಷವಾಗಿ ಶ್ರುತಪಡಿಸಿಕೊಳ್ಳತೊಡಗಿದಳು. ಅವಳಿಗೆ ತಿಳಿದುಬಂದ ವರ್ತಮಾನದ ಪ್ರಕಾರ, ಶಾಂಘಾಯ್‌ನಲ್ಲಿ ನಡೆದ ಕ್ಷಿಪ್ರ ಕ್ರಾಂತಿಯು ಹೆಚ್ಚಿನ ರಕ್ತಪಾತಕ್ಕೆಡೆಗೊಡದೆ ಘಟಿಸಿತ್ತು. ಕ್ರಾಂತಿಕಾರರು ದಮನನೀತಿಯನ್ನು ಕೈಬಿಟ್ಟು ಜನರನ್ನು ಒಲಿಸಿಕೊಂಡರಲ್ಲದೆ ಪ್ರಜೆಗಳು ತಮಗೆ ನೀಡಿದ ಪ್ರತಿ ಪದಾರ್ಥಕ್ಕೂ ಧನರೂಪದಲ್ಲಿ ಪ್ರತಿಫಲವನ್ನು ಹಿಂತಿರುಗಿಸಿದರು. ಕ್ರಾಂತಿಕಾರರ ಸೇನಾ ತುಕಡಿಗಳನ್ನು ವಿಶ್ವ ಭ್ರಾತೃತ್ವ ಪ್ರತಿಪಾದಕ ತಂಡವೆಂದು ಕರೆಯುವುದು ಉಚಿತವೇನೋ ಎನ್ನುವಷ್ಟು ವಿಶ್ವಾಸಪೂರ್ವಕವಾಗಿತ್ತು ಅವರ ನಡೆನುಡಿ. 'ಪ್ರಜೆಗಳ ಆಸ್ತಿ'ಗೆ ಧಕ್ಕೆಯುಂಟುಮಾಡುವ ಹಕ್ಕು ತಮಗಿಲ್ಲವೆನ್ನುತ್ತಿದ್ದರವರು. ಪಾಪ, 'ಪ್ರಜೆಗಳ ಆಸ್ತಿ' ಎಂಬ ಪದವೆ ಮುಂದೆ ತಮಗೆ ಉರುಲಾಗಬಹುದೆಂದು ಚೀನೀ ಜನತೆಗೆ ಆಗ ತಿಳಿದಿರಲಿಲ್ಲ.

*

"ಇದೆಲ್ಲಾ, ನಿಜವಾಗಿದ್ದಲ್ಲಿ ನಾನು ಹಾಂಕಾಂಗಿನಲ್ಲಿಯೇ ಉಳಿದುಕೊಂಡಿರುವುದರಲ್ಲಿ ಅರ್ಥವಿಲ್ಲವೆನಿಸಿತು. ಇಷ್ಟೊಂದು ಸಹಕಾರಿ ಮನೋಭಾವದ ಕ್ರಾಂತಿಕಾರರು ಸತ್ಸಂಪ್ರದಾಯಗಳುಳ್ಳ ಯಾವುದೇ ಸಾಹಿತ್ಯ ಪ್ರಕಟಣೆಗಳಿಗೆ ಅಡ್ಡಿಯುಂಟು ಮಾಡಲಾರರೆಂಬುದು ನನ್ನ ಪ್ರಾಮಾಣಿಕ ಅನಿಸಿಕೆಯಾಗಿತ್ತು. ಅಲ್ಲದೇ ನಾನು ಸಂಪಾದಕಿಯಾದ ಕಾಲವಲ್ಲಿ ಅಧಿಕಾರವಿದ್ದುದು ಜಪಾನಿಯರ ಕೈಯಲ್ಲಿ. ಈಗಲಾದರೋ, ಅವರು ಯಾವುದೇ ಪಕ್ಷದವರಾಗಿರಲಿ ಒಟ್ಟಿನಲ್ಲಿ ಅಧಿಕಾರದ ಗದ್ದುಗೆಯನ್ನೇರುತ್ತಿರುವವರು ನಮ್ಮವರೇ ಅಲ್ಲವೇ! ಇದು ನನಗೆ ಸಾಂತ್ವನ ನೀಡಿದ ಆಲೋಚನೆ" ಎಂದಳು ಮೇರಿ.

ಕೂಡಲೇ ತಾನು ತಾಯ್ನಾಡಿಗೆ ಹಿಂದಿರುಗಿ ಬರಲು ಅನುಮತಿ ಕೋರಿ ಮಾತೃಘಟಕಕ್ಕೆ ಪತ್ರ ಬರೆದು, ಉತ್ತರಕ್ಕಾಗಿ ಕಾಯದೆ 'ಡೇವಿಕೆನ್' ಎಂಬ ನಾರ್ವೆ ದೇಶದ ಹಡಗಿನಲ್ಲಿ ಚೀನದತ್ತ ತನ್ನ ಪ್ರಯಾಣ ಬೆಳೆಸಿದಳು. ತಾನಂದುಕೊಂಡಂತೆ ಪ್ರಯಾಣ ಸಾಗಲಿಲ್ಲವಾದರೂ ತಾಯ್ನಾಡಿಗೆ ಹಿಂದಿರುಗುವ ಅವಳ ಯತ್ನ ಸಫಲವಾಯಿತು.

ಕ್ರಾಂತಿಕಾರರ ಅಧೀನಕ್ಕೆ ಚೀನದ ಆಡಳಿತ ಬಂದಮೇಲೆ ಮೇರಿ ಕೆಲವು ಬದಲಾವಣೆಗಳನ್ನು ಗಮನಿಸಿದಳು. ಇಡೀ ಚೀನದ ದಿನನಿತ್ಯದ ಆಗುಹೋಗುಗಳಲ್ಲಿಯೂ 'ಕಾರ್ಮಿಕ ಒಕ್ಕೂಟ'ವು ಸಕ್ರಿಯವಾಗಿ ಭಾಗವಹಿಸುತ್ತಿತ್ತು. ಬರಬರುತ್ತಾ ಅದು ಬಲಗೊಂಡು ಪ್ರತಿ ಸಂಘ ಸಂಸ್ಥೆ, ಸಮಾಜ, ಪ್ರಜೆಗಳ ವೈಯಕ್ತಿಕ ಬೇಕು ಬೇಡಗಳನ್ನು ಸಹ ತನ್ನಿಚ್ಛೆಯಂತೆ ಪರಿವರ್ತಿಸಿಕೊಳ್ಳಬಲ್ಲ ಕೇಂದ್ರಿಕೃತ ಶಕ್ತಿಯಾಗಿ ಬೆಳೆದು ಬಲಿಯಿತು. ಈಗದಕ್ಕೆ ಇದ್ದುದು ಒಂದೇ ಗುರಿ, ತಮ್ಮ ನೆಲದಲ್ಲಿದ್ದ 'ಸಾಮ್ರಾಜ್ಯಶಾಹಿ'ಗಳ ಸಮೂಲೋಚ್ಚಾಟನೆ. ಇಲ್ಲವೇ ಅಂತಹ ವ್ಯಕ್ತಿ-ಶಕ್ತಿಗಳನ್ನು 'ಒಕ್ಕೂಟ'ದ ಸೇವಕರನ್ನಾಗಿ ಪರಿವರ್ತಿಸುವ ತೀವ್ರ ಪ್ರಯತ್ನ.

'ವೈಯಕ್ತಿಕ' ಎಂಬ ಪದಕ್ಕೆ ಕ್ರಾಂತಿಕಾರರ ನಿಘಂಟಿನಲ್ಲಿ ಅರ್ಥವೇ ಇಲ್ಲ! ಅವರ ಆಡಳಿತದಲ್ಲಿದ್ದುದೆಲ್ಲಾ ವ್ಯಕ್ತಿ ಸಮುದಾಯುಗಳ ನಡುವಿನ ಘರ್ಷಣೆಗೆ ಪ್ರೇರೇಪಣೆ ಹಾಗೂ 'ಸಮು-ದಾಯ'ವೇ ಗೆಲ್ಲುವಂತೆ ಮಾಡುವ ಮುತ್ಸದ್ದಿತನ. ಇದಕ್ಕಾಗಿ ಅವರು ಬಳಸಿದ ವಜ್ರಾಯುಧವೇ 'ಬ್ರೈನ್-ವಾಶಿಂಗ್' ತಂತ್ರ.

ಅಧಿಕಾರವನ್ನು ಚಲಾಯಿಸುತ್ತಿರುವವರು ಯಾರು? ಯಾವ ಆಧಾರದ ಮೇಲೆ ಅವರು ಅಧಿಕಾರವನ್ನು ಚಲಾಯಿಸುತ್ತಿದ್ದಾರೆ? ಇವೇ ಮುಂತಾದ ಹಲವು ಹತ್ತು ವಿಷಯುಗಳ ಬಗ್ಗೆ ಅಂದಿನ ಚೀನೀ ಜನಸಾಮಾನ್ಯನಿಗೆ ಯಾವುದೇ ಖಚಿತವಾದ ಮಾಹಿತಿ ದೊರಕುತ್ತಿದ್ದಿಲ್ಲ. ಚೀನವು 'ಕೆಂಪು ಚೀನ'ವಾಗಿ ಪರಿವರ್ತನೆಗೊಳ್ಳುವ ಕಡೆಯ ಹಂತದಲ್ಲಿದ್ದ ಕಾಲವದು.

ಅಂತೂ ಇಂತೂ ಕ್ರಾಂತಿಕಾರಿ ಆಡಳಿತವು ಇಡೀ ದೇಶದಲ್ಲಿದ್ದ ಪತ್ರಿಕೆ, ಪುಸ್ತಕ ಪ್ರಕಟಣಾಲಯುಗಳನ್ನು 'ಸಂಘಟನೆ- ಸುಧಾರಣೆ'ಗಳೆಂಬ ನೆಪದಲ್ಲಿ ತಮ್ಮ ಅಧೀನಕ್ಕೆ ತೆಗೆದುಕೊಂಡು ಮೂರು ಮುಖ್ಯ ವಿಭಾಗಗಳನ್ನಾಗಿ ವಿಂಗಡಿಸಿತು. ಮೊದಲನೆಯ ಗುಂಪಿಗೆ ಸೇರಿದ ಪುಸ್ತಕಗಳನ್ನು 'ಪ್ರಜೆಗಳ ಪುಸ್ತಕದಂಗಡಿ'ಯಲ್ಲಿ, ಎರಡನೆಯ ಗುಂಪಿಗೆ ಸೇರಿದವುಗಳನ್ನು 'ವಾಣಿಜ್ಯ ಪುಸ್ತಕದಂಗಡಿ'ಗಳಲ್ಲಿ, ಹಾಗೂ ಮೂರನೆಯ ಗುಂಪಿಗೆ ಸೇರಿದವುಗಳನ್ನು 'ಧಾರ್ಮಿಕ ಪುಸ್ತಕದಂಗಡಿ'ಗಳಲ್ಲಿ ಮಾರಾಟ ಮಾಡುವ ವ್ಯವಸ್ಥೆಯುನ್ನು ಜಾರಿಗೆ ತಂದಿತು. ಮೇರಿ ಸಂಪಾದಕಿಯಾಗಿದ್ದ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಯನ್ನು ಮೂರನೆಯ ವಿಭಾಗಕ್ಕೆ ಸೇರಿಸಲಾಯಿತು. ಈ ಮೂರೂ ವಿಭಾಗಗಳ ಮೇಲೆ ಸರಕಾರದ ಪೂರ್ಣ ನಿಯಂತ್ರಣವಿತ್ತು. ಮೇರಿಯ ಪತ್ರಿಕೆ ಪ್ರಕಟವಾಗುತ್ತಿದ್ದ ಸಂಸ್ಥೆಯಿಂದಲೇ 'ಹ್ಯಾಪಿ ಚೈಲ್ಡ್‌ಹುಡ್' ಎಂಬ ಪತ್ರಿಕೆಯೂ ಪ್ರಕಟಗೊಳ್ಳುತ್ತಿತ್ತು. ಅಮೆರಿಕದಿಂದ ಮೇರಿ ಹಿಂದಿರುಗಿ ಬರುವ ಕೆಲವು ದಿನಗಳ ಹಿಂದೆ ಸದರಿ ಪತ್ರಿಕೆಗೆ ಕಾರ್ಮಿಕ ಒಕ್ಕೂಟದ ಸಾಹಿತ್ಯ ಸಂಘಕ್ಕೆ ಸೇರಿದ ಸುಯಿನ್-ಜಿ-ದೆ ಎಂಬ ಮಹಿಳೆಯು ಸಂಪಾದಕಿಯ ಹುದ್ದೆಯನ್ನು ವಹಿಸಿಕೊಂಡಿದ್ದಳು. ಕಾರ್ಮಿಕ ಒಕ್ಕೂಟದ ಸಾಹಿತ್ಯ ಸಂಘವು ಒಂದು ಸರಕಾರಿ ಇಲಾಖೆ. ಆಕೆ, ಮೇರಿಯ ಆಗಮನದ ಕೆಲವು ದಿನಗಳ ಹಿಂದೆ 'ಮೇರಿ ಸಾಮ್ರಾಜ್ಯಶಾಹಿಗಳ ಕೈಗೊಂಬೆ'ಯೆಂದು ತನ್ನ ಮೇಲಧಿಕಾರಿಗಳ ಬಳಿ ಆರೋಪಿಸಲು ಪ್ರಯತ್ನಿಸಿ ತನ್ನ ಹಂಚಿಕೆ ಸಫಲವಾಗದೆ ತನ್ನ ಹುದ್ದೆಯನ್ನು ತ್ಯಜಿಸಿ ಹೊರಟುಹೋದಳು. ಆದರ ಪ್ರಕಾಶನ ಕಾರ್ಯವೂ ಮೇರಿಯ ಹೆಗಲಿಗೇರಿದ ಹೊಣೆಯಾಯಿತು. ಕಾಲಾನಂತರ 'ಸುಯಿನ್' ಕ್ರಾಂತಿಕಾರರ ಅಂತರ್ಗತ ಚಟುವಟಿಕೆಗಳಲ್ಲಿ ಶಾಮೀಲಾಗುತ್ತಿದ್ದ ಒಬ್ಬ ಗುಪ್ತಚಾರಿಣಿಯೆಂದು ತಿಳಿದುಬಂತು. ಒಟ್ಟಿನಲ್ಲಿ ತನ್ನ ಗುಪ್ತಚರ ದಳದ ಕೊಂಡಿಗಳ ಮೂಲಕ ಇಡೀ ದೇಶದ ಸಕಲ ವಿದ್ಯಮಾನಗಳ ಮೇಲೂ 'ಒಕ್ಕೂಟ'ವು ಸಂಪೂರ್ಣ ಹಿಡಿತ ಸಾಧಿಸುವಲ್ಲಿ ಸಾಕಷ್ಟು ಯಶಸ್ವಿಯಾಯಿತು: ಅಷ್ಟೇ ಅಲ್ಲ, ಮೇರಿಯ ಚಟುವಟಿಕೆಗಳ ಮೇಲೆಯೂ ಒಂದು ಕಣ್ಣಿಡಲಾರಂಭಿಸಿತು.

ಒಂದು ದಿನ ಚೀನದ ಎಲ್ಲಾ ಧಾರ್ಮಿಕ ಪಂಥಗಳೂ 'ಒಕ್ಕೂಟ'ದ ಕಾರ್ಯಕ್ರಮಗಳನ್ವಯ ಸಹಕಾರ ನೀಡಬೇಕೆಂಬ ಸುತ್ತೋಲೆಯೊಂದು ಎಲ್ಲಾ ಧಾರ್ಮಿಕ ಸಂಸ್ಥೆಗಳ ಮುಖ್ಯ ಕಚೇರಿಗೆ ಬಂದು ಮುಟ್ಟಿತು. 'ಸಾಮ್ರಾಜ್ಯಶಾಹಿ'ಗಳ (ಅಥವಾ ಅಮೆರಿಕನ್ನರ) ಜೊತೆಗಿರುವ ಸಂಬಂಧಗಳನ್ನು ಸಂಪೂರ್ಣ ಕಡಿದುಕೊಳ್ಳಬೇಕೆಂಬ 'ಬಾಯಿಂದಾಡಿದ ಮಾತು' ಆ ಸುತ್ತೋಲೆಯಿಂದ ವ್ಯಕ್ತವಾದ ಅಂಶ. ಆ ಸುತ್ತೋಲೆಯ ವಿಷಯ ಪ್ರಸ್ತಾವನೆಯಲ್ಲಿ ಬೇಡಿಕೆ, ಸಲಹೆಗಳಿಗಿಂತ, 'ಆಜ್ಞೆ'ಗಳೇ ಹೆಚ್ಚಾಗಿದ್ದವು. ಈ ರೀತಿ ಕ್ರಾಂತಿಕಾರರು 'ವಿರೋಧಿಗಳೊಂದಿಗೆ' 'ಮುಸುಕಿನೊಳಗಿನ ಗುದ್ದಾಟ'ದಲ್ಲಿ ತೊಡಗುವರೆಂದು ಯಾರೂ ಅಂದುಕೊಂಡಿರಲಿಲ್ಲ. ಏನಾಯಿತೆಂದು ತಿಳಿಯುವಷ್ಟರಲ್ಲಿ ಅಧಿಕಾರವು ಕ್ರಾಂತಿಕಾರರ ಹಸ್ತಗತವಾಗಿತ್ತು.

ಕ್ಷುಲ್ಲಕ ಕಾರಣಗಳಿಗಾಗಿ ಹಲವಾರು ಮುಗ್ಧರನ್ನು ತನ್ನ ಕಣ್ಮುಂದೆಯೇ ಬಂಧಿಸಿ ಸೆರೆಮನೆಗೆ ಕರೆದುಕೊಂಡು ಹೋದುದನ್ನು ಮೇರಿ ಕಂಡಳು. ಯಾರಾದರೂ ಸರಿ, ಅಪ್ಪಿತಪ್ಪಿಯೂ ಪ್ರಸಕ್ತ ಆಡಳಿತದ ತಪ್ಪು ಒಪ್ಪುಗಳ ಮೇಲೆ

ವ್ಯಾಖ್ಯಾನಿಸುವಂತಿರಲಿಲ್ಲ. ಒಡೆದು ಆಳುವ ನೀತಿಯನ್ನು ಅತಿ ನೀಚಸ್ತರದಲ್ಲಿ ಆಚರಣೆಗೆ ತಂದ ದಿನಗಳವು. ಚೀನ ಚಾಡಿಕೋರರಿಗಂದು ರಾಮರಾಜ್ಯವೆನಿಸಿದ್ದರೆ ಅತಿಶಯೋಕ್ತಿಯಾಗಲಾರದು. "ನೀವು ನಮಗೆ ಸಹಕರಿಸಿದಲ್ಲಿ, ನಾವು ಧಾರ್ಮಿಕ ಸ್ವಾತಂತ್ರ್ಯ ನೀಡುವೆವು" ಎಂಬುದು ಅಂದಿನ ಪ್ರಧಾನಿಗಳಾಗಿದ್ದ ಚೌ-ಎನ್-ಲಾಯ್-ರವರು ಧಾರ್ಮಿಕ ಸಂಸ್ಥೆಗಳಿಗೆ ನೀಡಿದ ಕರೆ ಆಜ್ಞೆಯಾಗಿತ್ತು. ಅರಿತೋ, ಅರಿಯದೆಯೋ 'ಸಾಮ್ರಾಜ್ಯಶಾಹಿ'ಗಳೊಡನೆ ಸಂಪರ್ಕವಿಟ್ಟುಕೊಂಡಂತಹ ಸಂಘ ಸಂಸ್ಥೆಗಳಿಗೆ ಬೀಗ ಮುದ್ರೆ ಜಡಿದು ಅವುಗಳ ಆಸ್ತಿಪಾಸ್ತಿಗಳನ್ನು 'ಪ್ರಜೆಗಳ ಆಸ್ತಿ' ಎಂದು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದೂ ಅವರು ಸದರಿ ಸಂಘ, ಸಂಸ್ಥೆಗಳಿಗೆ ಎಚ್ಚರಿಸಲು ಮರೆಯಲಿಲ್ಲ.

ಕೆಂಪು ಸರಕಾರದ ಕುತಂತ್ರಗಳಲ್ಲಿ ಶಾಮೀಲಾದ ಹಲವು ಕೈಗೊಂಬೆ ಸಂಘಸಂಸ್ಥೆಗಳೂ ಕೆಲವು ಪತ್ರಿಕೆಗಳನ್ನು ನಡೆಸುತ್ತಿದ್ದವು. ಅಂದಿನ ಸರಕಾರ ಕೈಗೊಳ್ಳುತ್ತಿದ್ದ 'ಪ್ರಜಾಹಿತ' ಕಾರ್ಯಸಾಧನೆಗಳ ಬಗ್ಗೆ ಪ್ರಚಾರ ಮಾಡುವುದೇ ಅವುಗಳ ಕೆಲಸ, 'ಹೆವನ್ಲೀ ವಿಂಡ್' ಎಂಬುದೂ ಅಂತಹ ಒಂದು ಪತ್ರಿಕೆ.

'ಬ್ರೈನ್ ವಾಶಿಂಗ್' ತಂತ್ರವನ್ನು ವಿಪುಲವಾಗಿ ಬಳಸಿದ ಕಾಲವದು. ಧಾರ್ಮಿಕ ಮುಖಂಡರು ಒಬ್ಬರಮೇಲೊಬ್ಬರು ಆರೋಪ ಪ್ರತ್ಯಾರೋಪಗಳ ಸುರಿಮಳೆಗರೆಯುತ್ತಿದ್ದುದನ್ನು ಕಂಡು ಮೇರಿ ಮೂಕಳಾದಳು. ಸಮುದಾಯವು ವ್ಯಕ್ತಪಡಿಸಿದ ಅನಿಸಿಕೆ, ತೀರ್ಮಾನಗಳೇ ನಿಜವೆಂದಾಗಲು ಸರಕಾರವು ಸರ್ವ ಪ್ರಯತ್ನವನ್ನು ಮಾಡುತ್ತಿದ್ದ ಕಾಲವದು. ವ್ಯಕ್ತಿತ್ವ ಪ್ರಜ್ಞೆಯಿರುವ ಯಾವೊಬ್ಬನಿಗೂ ಹೊಂದಿಕೆಯಾಗದ ವಾತಾವರಣವದು. ಇಂತಹ ಆರೋಪ ಪ್ರತ್ಯಾರೋಪಗಳ ಸಂಖ್ಯೆ ಹೆಚ್ಚುತ್ತಲೇ ಹೋಯಿತು. ಕ್ರಾಂತಿಕಾರರು ಆದಾಗಲೇ 'ಸಮಾಜ ಸುಧಾರಣಾಕ್ರಾಂತಿ'ಯ ಹೆಸರಿನಲ್ಲಿ ಸಾರ್ವಜನಿಕ ಕಟ್ಟಡಗಳು, ಬಸ್ ನಿಲ್ದಾಣಗಳು, ಶಾಲಾ ಕಾಲೇಜುಗಳು, ನಾಲ್ಕು ದಾರಿ ಕೂಡುವ ಸ್ಥಳಗಳು, ಎಲ್ಲೆಂದರಲ್ಲಿ ಧ್ವನಿವರ್ಧಕಗಳನ್ನಿರಿಸಿ ಸಮಾಜವಾದ ಪರ ಘೋಷಣೆಗಳನ್ನು ಬಿತ್ತರಿಸುತ್ತಿದ್ದರು. ಪ್ರಜೆಗಳು ಅಂತಹ ಬೋಧನ ತರಗತಿಗಳಿಗೆ ಹಾಜರಿ ಕೊಡುವುದು ಅನಿವಾರ್ಯವಾಗಿತ್ತು.

ಇದಾದನಂತರ ಚೀನೀ ಜನತೆಯನ್ನು ಅಪ್ಪಳಿಸಿದ್ದು ಸ್ವ-ವಿಮರ್ಶಾ ವರದಿಯ ಅಲೆ. ಬೋಧನ ತರಗತಿಗಳಲ್ಲಿ ತಾಕೀತು ಮಾಡಲ್ಪಟ್ಟ ಚೀನೀ ಜನತೆ, ತಾವು ಅಂತಹ ಬೋಧನಗಳಿಂದ ಕಲಿತ ಪಾಠ ಹಾಗೂ ತಾನು ಮುಂದೆ ಮಾಡಬೇಕೆಂದಿರುವ ಕಾರ್ಯಗಳ ರೂಪುರೇಷೆಗಳನ್ನು ಲಿಖಿತ ವರದಿಯನ್ನಾಗಿ ಮಾಡಿ ಅದಕ್ಕಾಗೇ ಮೀಸಲಾಗಿದ್ದ ಸರಕಾರಿ ನಿಯಂತ್ರಕ 'ತ್ರಿ ಸ್ವ-ಸಮಿತಿ' (Three self committee)ಗೆ ತಲಪಿಸಬೇಕಿತ್ತು. 'ಇಂತಹ ಸ್ವ-ವಿಮರ್ಶಾ' ವರದಿಗಳನ್ನು ತಯಾರಿಸಲು ಪ್ರತಿಯೊಬ್ಬ ವ್ಯಕ್ತಿಗೆ ಮೂರು ಜನ 'ಸಹಾಯಕ'ರನ್ನು ನೀಡಲಾಗುತ್ತಿತ್ತು.

ಆ ಮೂರು ಜನ 'ಸಹಾಯಕ'ರು ಸಿದ್ಧಪಡಿಸಿದ ವರದಿಗೆ ಒಪ್ಪಿಗೆಯ ರುಜು ಹಾಕುವುದಷ್ಟೇ ಪ್ರತಿಯೊಬ್ಬ ಮಾಡಬೇಕಿದ್ದ ಕೆಲಸ! ಇಂತಹ ಕ್ರಮಕ್ಕೆ ಪ್ರತಿಭಟಿಸಿದವರನ್ನು ಪಟ್ಟಭದ್ರ ಹಿತಾಸಕ್ತಿಗಳ 'ಕೈಗೊಂಬೆ'ಯೆಂದು ಆರೋಪಿಸಿ ಸೆರೆಮನೆಗೆ ತಳ್ಳಲಾಗುತ್ತಿತ್ತು!

"ಪ್ರತಿಯೊಬ್ಬ ಪ್ರಜೆಯೂ ತನ್ನ ಹೆಸರು ಹಾಗೂ ಇತರ ವ್ಯಕ್ತಿಗತ ವಿವರಗಳನ್ನು ತಮ್ಮ ಸಮೀಪದ ಆರಕ್ಷಕ ಠಾಣೆಗಳಲ್ಲಿ ನೋಂದಾಯಿಸುವಂತೆ ಆಜ್ಞೆ ಜಾರಿಯಾಯ್ತು. ತಮ್ಮ ಮನೆಗೆ ಯಾರಾದರೂ ನೆಂಟರಿಷ್ಟರು ಬಂದಲ್ಲಿ, ಅವರು ಒಂದು ರಾತ್ರಿ ಮಾತ್ರ ಉಳಿಯಲು ಆರಕ್ಷಕ ಅಧಿಕಾರಿಗಳಿಂದ ಪರವಾನಗಿ ಪಡೆಯಬೇಕಾದ್ದು ಅನಿವಾರ್ಯವಾಗಿತ್ತು. ಹಗಲು ರಾತ್ರಿ ಯಾವಾಗಲಾದರೂ ಸರಿ ನೆರೆಹೊರೆಯ ಕೆಲವರನ್ನು ಪೋಲಿಸರು ದಸ್ತಗಿರಿ ಮಾಡುತ್ತಿದ್ದುದು ದಿನನಿತ್ಯದ ದೃಶ್ಯವಾಗಿತ್ತು. 'ಯಾವಾಗ ನಮ್ಮ ಸರದಿ?' ಎಂದು ಕಾಯುವುದಷ್ಟೇ ನಮಗಿದ್ದ ಕೆಲಸ" ಎಂದಳು ಮೇರಿ ಅಂದಿನ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಾ.

ಅಂದಿನ ಚೀನೀ ಜನತೆ 'ಕ್ರಾಂತಿ' ಎಂಬ ಶಬ

ಪಂಜರದೊಳಗೆ ಸಿಕ್ಕಿಕೊಂಡ ಗಿಳಿಯಂತಾಗಿತ್ತು. ಮೇರಿಯೂ ಇದಕ್ಕೆ ಹೊರತಾಗಿರಲಿಲ್ಲ. ಆಕೆಗೆ ದೈಹಿಕ ಹಿಂಸೆಯನ್ನವರು ನೀಡಲಿಲ್ಲವಾದರೂ ಇತರ ಚೀನೀಯರಿಗೆ ಕೊಟ್ಟಂತಹ 'ಮಾನಸಿಕ ತರಬೇತಿ'ಯನ್ನು ನೀಡಲು ಮರೆಯಲಿಲ್ಲ!

ಒಂದು ದಿನ ಆಕೆಯ ಸಂಸ್ಥೆಯ ವರಿಷ್ಠರಿಂದ ಮೇರಿಗೆ ಕರೆ ಬಂತು. ಒಂದು ಸಣ್ಣ ವಿಷಯವನ್ನು ತನ್ನ 'ಸ್ವ-ವಿಮರ್ಶಾ' ವರದಿಯಲ್ಲಿ ಸೇರಿಸಲು ಮೇರಿಗೆ ಅವರು ಆಜ್ಞೆ ನೀಡಿದರು. ತನ್ನನ್ನು ಸಾಕಿಸಲಹಿದ ಮಾರ್ಗರೆಟ್ ಬ್ರೌನ್, ಲಾರಾ ವೈಟ್, ಶ್ರೀಮತಿ ಬೀಬ್ಸ್ ಹಾಗೂ ತನ್ನ ನೆಚ್ಚಿನ ಇನ್ನಿತರ ಅಮೆರಿಕನ್ ವ್ಯಕ್ತಿಗಳ ಮೇಲೆ ದೋಷಾರೋಪಣೆಯನ್ನಾಕೆ ಮಾಡಬೇಕಿತ್ತು!

ಅಧಿಕಾರಿಗಳ ಇಚ್ಛೆಗೆ ಇಲ್ಲವೆಂದಲ್ಲಿ 'ಸಾಮ್ರಾಜ್ಯಶಾಹಿ'ಗಳ 'ಕೈಗೊಂಬೆ'ಯೆಂಬ ಹಣೆಪಟ್ಟಿ ಹಚ್ಚಿ ತನ್ನನ್ನು ಬಂದೀಖಾನೆಗೆ ತಳ್ಳಲು ಆದೇಶ ಹೊರಡುತ್ತದೆಂಬುದು ಮೇರಿಗೆ ನಿಚ್ಚಳವಾಯಿತು. ಅನ್ಯಮಾರ್ಗವಿಲ್ಲದೆ ಅಂತಹ ಒಂದು ಸುಳ್ಳನ್ನು ಬರೆಯಲು ಒಪ್ಪಿಕೊಳ್ಳಲೇಬೇಕಾಯಿತು ಮೇರಿ.

ಚೀನದಲ್ಲಿ 'ದೋಷಾರೋಪಣ ಸಭೆ' (Accusation Meeting)ಗಳು ನಿರಂತರವಾಗಿ ನಡೆಯುತ್ತಿದ್ದವು. ಪ್ರತಿಯೊಬ್ಬ ವ್ಯಕ್ತಿಯೂ 'ದೋಷಾರೋಪಣೆ, ಸ್ವ-ವಿಮರ್ಶೆ, ಹಾಗೂ ಕಲಿಕೆ'ಯ ಮೂಲಕ ತನ್ನೆಲ್ಲ 'ಭಾರ'ಗಳನ್ನು ಕಳೆದುಕೊಂಡು 'ಪರಿಶುದ್ಧ'ನಾಗಬೇಕೆಂಬುದು ಸರಕಾರದ ನಿಲುವು.

"ಇದೆಲ್ಲಾ ಒಂದು ನಾಟಕದಂತೆ ನನಗೆ ಭಾಸವಾಗುತ್ತಿತ್ತು. ಪ್ರತಿ ಸಭೆಯಲ್ಲೂ ನಾವು ಮಾತನಾಡಬೇಕಾದ ವಿಷಯಗಳ ಬಗ್ಗೆ ತಾಲೀಮು ನಡೆಸುತ್ತಿದ್ದೆವು. ಸ್ವತಃ ನಾನೇ ಇಂತಹ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳದಿದ್ದಲ್ಲಿ, ಇವುಗಳನ್ನೆಲ್ಲಾ ಸತ್ಯವೆಂದು ನಾನು ನಂಬುತ್ತಿರಲಿಲ್ಲ" ಎಂದಳು ಮೇರಿ.

ಇದೆಲ್ಲಾ ಗೊಂದಲಗಳ ನಡುವೆ ಒಂದು ದಿನ, ಮೇರಿ ಸಂಪಾದಕಿಯಾಗಿದ್ದ 'ವುಮೆನ್ಸ್ ಮೆಸ್ಸೆಂಜರ್' ಪತ್ರಿಕೆಯ ಪ್ರಕಟಣೆಯನ್ನು ರದ್ದುಗೊಳಿಸಲಾಯಿತು. ಅವಳ ಸಹೋದ್ಯೋಗಿಗಳೂ ದೂರವಾದರು. ಇನ್ನು ತನಗೆ ಮಾಡಲೇನೂ ಕೆಲಸವಿಲ್ಲವೆಂದರಿತ ಮೇರಿ ಆ ಪ್ರತಿಕಾ ಸಂಸ್ಥೆಗೆ ರಾಜೀನಾಮೆ ಪತ್ರವನ್ನು ಸಲ್ಲಿಸಿ, ಅದಕ್ಕೆ ಮುಂಜಾಗರೂಕತಾ ಕ್ರಮವಾಗಿ ಹಾಂಕಾಂಗಿನಲ್ಲಿದ್ದ ಮಾರ್ಗರೆಟ್ ಬ್ರೌನ್‌ರಿಗೆ ತನ್ನ ಸಧ್ಯದ ಎಡಬಿಡಂಗಿ ಪರಿಸ್ಥಿತಿಯನ್ನು ವಿವರಿಸಿ ಒಂದು ಪತ್ರ ಬರೆದು ಬ್ರಿಟಿಶ್ ಸರಕಾರದ ವತಿಯಿಂದ ತನಗೊಂದು ಪ್ರಯಾಣಾನುಮತಿ ಪತ್ರವನ್ನು ದೊರಕಿಸಿಕೊಡಲು ವಿನಂತಿಸಿಕೊಂಡಳು. ಅವಳ ಪತ್ರಕ್ಕೆ. "ಅನುಕೂಲವಾದಾಗ ಹೊರಟು ಬಾ, ಅನುಮತಿ ಪತ್ರವು ದೊರೆತಿದೆ" ಎಂದು ಮಾರ್ಗರೆಟ್ ಬ್ರೌನ್‌ರಿಂದ ಉತ್ತರ ಬಂತು.

ಆದರೆ ಸರಕಾರ ಮೇರಿಯ ರಾಜೀನಾಮೆಯನ್ನು ಸ್ವೀಕರಿಸಲಿಲ್ಲ. ಬದಲಾಗಿ, ಅವಳ 'ಸ್ವ-ವಿಮರ್ಶಾ ವರದಿ'ಯನ್ನು ಬೇಗ ಸಲ್ಲಿಸಲು ಒತ್ತಾಯಿಸಿತು. ಬೇರೆ ದಾರಿ ಕಾಣದೆ. ತನ್ನ ಐವರು 'ಸಹಾಯಕರು ತಯಾರಿಸಿದ್ದ ವರದಿಗೆ ತೆಪ್ಪಗೆ ರುಜು ಹಾಕಿ, 'ತ್ರಿ ಸ್ವ-ಸಮಿತಿ'ಯ ಮುಂದಿಟ್ಟಳು. ಅವಳ ವರದಿಯು ತಮ್ಮಿಚ್ಛೆಯಂತೆ ತಯಾರಿಸಲ್ಪಟ್ಟಿದೆಯೆಂದು ಖಾತರಿಯಾದ ನಂತರವೇ ಸರಕಾರವು ಅವಳ ರಾಜೀನಾಮೆಯನ್ನು ಅಂಗೀಕರಿಸಿತು.

ನಿರುದ್ಯೋಗಿಯಾದ ಮೇರಿ ತನ್ನ ಹೆಸರು ಮತ್ತು ಇತರ ವಿವರಗಳನ್ನು ಅಂದಿನ ಕಾನೂನು ರೀತ್ಯಾ ಇದ್ದ ಉದ್ಯೋಗ ವಿನಿಮಯ ಕಚೇರಿಯಲ್ಲಿ ನೊಂದಾಯಿಸಿದಳು. ಇವೆಲ್ಲಾ ವಿದ್ಯಮಾನಗಳು ಪೂರ್ತಿಗೊಳ್ಳುತ್ತಿದ್ದಂತೆ ಮೇರಿಗೆ ಒಂದು ತಾತ್ಕಾಲಿಕ ಪರವಾನಗಿಯನ್ನಿತ್ತಿರುವ ಹಾಂಕಾಂಗಿನ ಬ್ರಿಟಿಶ್ ವಸಾಹತು ಸರಕಾರದ ಆಜ್ಞಾ ಪತ್ರವೊಂದು ಬಂದು ಮುಟ್ಟಿತು. ತುಂಬ ಎಚ್ಚರಿಕೆಯಿಂದ ಮೇರಿ ತನ್ನ ಕೃತಕ ಕಾಲುಗಳ ರಿಪೇರಿಗಾಗಿ ಶಾಂಘಾಯ್‌ನಿಂದ ಹಾಂಕಾಂಗಿಗೆ ಹೋಗಿಬರಲು ಸ್ಥಳೀಯ ಆರಕ್ಷಕ ಠಾಣೆಯಲ್ಲಿ ವಿನಂತಿ ಪತ್ರವನ್ನು ಸಲ್ಲಿಸಿದಳು.

ಮೇರಿಯ ಸಕಲ ದಾಖಲೆ ಪತ್ರಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಆರಕ್ಷಕ ಅಧಿಕಾರಿಗಳು, ಮೇರಿ ತನ್ನ ವ್ಯವಹಾರಗಳನ್ನು ಮುಗಿಸಿದೊಡನೆ ಮರಳಿ ತಾಯ್ನಾಡಿಗೆ

ಹಿಂದಿರುಗಿ ಬರಬೇಕೆಂಬ ಷರತ್ತಿನ ಮೇಲೆ ಹಾಂಕಾಂಗಿಗೆ ಹೋಗಿ ಬರಲು 'ಪರವಾನಗಿ' ನೀಡಿದರು. ಅದನ್ನು ಪಡೆದ ಮೇರಿ ಲಗುಬಗೆಯಿಂದ ರೈಲು ನಿಲ್ದಾಣಕ್ಕೆ ಹೋಗಿ ಹಾಂಕಾಂಗಿಗೆ ಒಂದು ಟಿಕೆಟ್ಟನ್ನು ಮರುದಿನಕ್ಕೆ ಕಾದಿರಿಸಿ ಮನೆಗೆ ಬಂದಳು.

ಮೇರಿಗೆ ಆರಕ್ಷಕ ಠಾಣೆಯುವರಿತ್ತ ಪರವಾನಗಿಯು ವಿಷಯು ವಿದೇಶ ವ್ಯವಹಾರ ಖಾತೆಗೆ ತಲಪಲು ನಡುವೆ ಮೂರು ದಿನಗಳ 'ನಾಡ ಹಬ್ಬ'ದ ಪ್ರಯುಕ್ತ ಸಾಧ್ಯವಿಲ್ಲವೆಂದು ಮೇರಿಗೆ ಚೆನ್ನಾಗಿ ಗೊತ್ತಿತ್ತು. ಹಾಗಾಗಿ ಮೇರಿಯು ಹಬ್ಬದ ಹಿಂದಿನ ದಿನ ಅನುಮತಿ ಕೋರಿ ಪತ್ರ ಬರೆದು ಪರವಾನಗಿ ಪಡೆದುಕೊಂಡಿದ್ದಳು. ಈ ವಿಷಯು ತನ್ನ ಮೇಲಾಧಿಕಾರಿಗಳಿಗೆ ಅಧಿಕೃತವಾಗಿ ತಿಳಿಯುವ ಮೊದಲೇ ಆಕೆ ಊರು ಬಿಡುವುದು ಅನಿವಾರ್ಯವಾಗಿತ್ತು.

ರೈಲು ಹೊರಡುವ ಒಂದು ತಾಸಿನ ಮುಂಚೆ ಮೂರು ಬಾರಿ ಗಡಿ ಪಡೆಗಳವರು ಅವಳ ಪೆಟ್ಟಿಗೆಯನ್ನು ಜಾಲಾಡಿಸಿದ ಮೇಲೆ ಮೇರಿಯು ತನಗಾಗಿ ರೈಲಿನಲ್ಲಿ ಕಾದಿರಿಸಿದ್ದ ಆಸನದಲ್ಲಿ ಹೋಗಿ ಕುಳಿತಳು. ಮೇರಿ ತನ್ನ ಬ್ರಿಟಿಶ್ ಅನುಮತಿ ಪತ್ರವು ಯಾರ ಕಣ್ಣಿಗೂ ಬೀಳದಂತೆ ಎಚ್ಚರ ವಹಿಸಿದ್ದಳು. ರೈಲಿನಲ್ಲೂ ಕ್ರಾಂತಿಕಾರಿ ಘೋಷಣೆಗಳನ್ನು ಧ್ವನಿ ವರ್ಧಕಗಳ ಮೂಲಕ ಸದಾ ಬಿತ್ತರಿಸುತ್ತಲೇ ಇದ್ದರು.

ಮೂರು ದಿನಗಳ ನಂತರ ಕ್ಯಾಂಟನ್ ತಲಪಿ ಅಂದಿನ ರಾತ್ರಿಯನ್ನು ಅಲ್ಲಿಯೇ ಕಳೆದಳು ಮೇರಿ. ಮರುದಿನ ಮುಂಜಾನೆ ಕ್ಯಾಂಟನ್ನಿನ ರೈಲು ನಿಲ್ದಾಣದಲ್ಲಿ ಮೇರಿಯ ಪೆಟ್ಟಿಗೆ ಮತ್ತು ಕೈಚೀಲಗಳ ತಪಾಸಣೆ ನಡೆಯಿತು. ಕ್ಯಾಂಟನ್ನಿನಿಂದ ಹಾಂಕಾಂಗಿಗೆ ಐದು ತಾಸುಗಳ ಪ್ರಯಾಣ. ಮತ್ತೆ ತಪಾಸಣೆ. ಕಡೆಯುಬಾರಿಗೆ ಅಶ್ರುಪೂರಿತ ನೇತ್ರಗಳಿಂದ ತನ್ನ ತಾಯ್ನಾಡನ್ನು ವೀಕ್ಷಿಸಿದ ಮೇರಿ ಹಿಂತಿರುಗಿ ನೋಡದೆ ಗಡಿ ಸೇತುವೆಯತ್ತ ನಡೆದಳು. ಗಡಿಯನ್ನು ದಾಟುವೆಡೆಯಲ್ಲಿ ಕಾವಲು ನಿಂತಿದ್ದ ಬಂದೂಕುಧಾರಿ ಸೈನಿಕ ಆಕೆಯ ನಿರ್ಗಮನ ಪತ್ರವನ್ನು ಪರಿಶೀಲಿಸುತ್ತ ಮೇರಿಯು ಮತ್ತೆ ತಾಯ್ನಾಡಿಗೆ ಹಿಂದಿರುಗಬೇಕೆಂಬ ಸೂಚನೆಯಿತ್ತ. ಅಲ್ಲದೆ ಆಕೆಯ ನಿರ್ಗಮನ ಪತ್ರದ ಮೇಲೆ ತಪಾಸಣೆ ನಡೆಸಿದ ಮುದ್ರೆಯನ್ನೊತ್ತಿ ಆಕೆಯ ಕೈಗಿತ್ತ. "ನಾನು ಮತ್ತೆ ಹಿಂದಿರುಗಬೇಕೆಂದಿರುವೆ" ಎಂದುತ್ತರಿಸಿದ ಮೇರಿಯ ಮನಸ್ಸಿನಲ್ಲಿದ್ದುದನ್ನಾತ ಅರಿತಿದ್ದರೆ?

ಇವೆಲ್ಲಾ, ಮಾರ್ಗರೆಟ್ ಬ್ರೌನ್‌ರವರ ನಿವಾಸದಲ್ಲಿ ಮೇರಿ ನನಗೆ ಹೇಳಿದ ವಾಸ್ತವಾಂಶಗಳು. ಇಷ್ಟೆಲ್ಲಾ ಸಂಕಷ್ಟಪರಂಪರೆಗಳನ್ನು ಅನುಭವಿಸಿದ್ದ ಮೇರಿ ನನ್ನ ಮನಸ್ಸಿನ ಮೇಲೆ ಶಾಂತಿ, ಸಮಾಧಾನದ ಭಾವನೆಗಳನ್ನು ಅಚ್ಚೊತ್ತಿದ್ದಳು. ❁

ವಿರಾಮ ಅತ್ಯಂತ ಒಳ್ಳೆಯ ಆಭರಣ. ಆದರೆ ಅದನ್ನು ಸದಾಕಾಲ ಧರಿಸಲು ಸಾಧ್ಯವೇ?

— ಅಪರಿಚಿತ

ಜಾಣನಾದವ ಅವಕಾಶಗಳನ್ನು ಕಂಡುಕೊಳ್ಳುವದಕ್ಕಿಂತ ಹೆಚ್ಚು ಅವಕಾಶಗಳನ್ನು ಸೃಷ್ಟಿಸಿಕೊಳ್ಳುತ್ತಾನೆ.

—ಫ್ರಾನ್ಸಿಸ್ ಬೇಕನ್

---

Edited, printed and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli-580 020 Phone: 64307. Rept: Bombay, V. Satyamurthi Phone: 5510502, Madras: Shri S. K. Murthi Phone: 414870: New Delhi; V. K. Chopra Phone: 7114785.

*Registered with the Registrar of Newspapers for India under No. 3539/57*

S.G. ANAND

KASTURI PRICE : 2-50 Reg. No. KRNC 45
Licence No. L2120/WPP No. 33